# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...



ಚಿತ್ರಗಳು : ಕಮಲಂ ಅರಸು, ಶ್ರೀಹರಿ, ಜಿ. ಎಂ. ಬೊಮ್ನಳ್ಳಿ
ಸ್ಯಾಮ್, ರವಿಕುಮಾರ್ ಅಜ್ಜೀಪುರ

ಮುಖಚಿತ್ರ : ಕೆ. ಪಿ. ಸ್ವಾಮಿ

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ

## ಈ ತಿಂಗಳು

ಕರ್ನಾಟಕದ ರಾಜಕೀಯಕ್ಕೆ ಒಂದು ತಿರುವು ಸಿಗುತ್ತದೆಂಬ ಆಸೆ ಮೂಡಿಸುವಂತಹ ಪ್ರಕ್ರಿಯೆಯು ದಲಿತ ಸಂಘರ್ಷ ಸಮಿತಿ ಮತ್ತು ರೈತ ಸಂಘ ಜೊತೆಗೂಡುವುದರೊಂದಿಗೆ ಆರಂಭವಾಗಿದೆ. ಈಗಾಗಲೇ ಹಲವು ಜಂಟಿ ಸಭೆಗಳು ನಡೆದಿದ್ದು ಅಕ್ಟೋಬರ್‌ನಲ್ಲಿ ರಾಜ್ಯ ಸಮಾವೇಶ ನಡೆಯಲಿದೆ. ಪರ್ಯಾಯ ರಾಜಕಾರಣವೆಂಬ ಮಹದುದ್ದೇಶದಿಂದ ಸ್ಥಾಪಿಸಲ್ಪಟ್ಟ ಈ ಚಳುವಳಿ ಒಂದು ರಾಜಕೀಯ ಪಕ್ಷವಾಗಿ ರೂಪುಗೊಳ್ಳುತ್ತದೆಂದು ಪ್ರಕಟಿಸಲಾಗಿದೆ. ಆಸೆಯು ಭರವಸೆಯಾಗಿ ಪರಿಣಮಿಸುತ್ತದೆಯೇ ಎಂಬ ಪ್ರಶ್ನೆ ಎಲ್ಲರ ಮನಸ್ಸಿನಲ್ಲೂ ಇದೆ. ಐದೋ ಆರೋ ಇರುವ ದಲಿತ ಸಂಘರ್ಷ ಸಮಿತಿಗಳಲ್ಲಿ ಪರಸ್ಪರ ಒಬ್ಬರನ್ನೊಬ್ಬರು ಹೊರಗೆ ಹಾಕುವ ಪ್ರಹಸನ ನಡೆಯುತ್ತಿರುವಾಗ ಹೊಸ ಪಕ್ಷವು ಸುಭದ್ರವಾಗಿ ನೆಲೆಗೊಳ್ಳಬಹುದೇ ಎಂಬ ಅನುಮಾನವೇನೋ ಇದೆ. ಇವರು ಒಂದಾಗದಿದ್ದರೆ ವಿರೋಧಿಗಳಿಗೇನೋ ಖುಷಿಯೇ, ಆದರೆ ಒಂದಾಗಲೆಂದು ಆಶಿಸುವ ಪ್ರಗತಿಪರ ಶಕ್ತಿಗಳು ನಮ್ಮ ರಾಜ್ಯದಲ್ಲಿವೆ. ಸಂಮಿಶ್ರ ಸರಕಾರದ ಬೇಜವಾಬ್ದಾರಿ ನಡತೆಯಿಂದ ಬೇಸತ್ತ ಜನ ಮಿಶ್ರಣಗಳ ಅಡಿಪಾಯದ ಬಗ್ಗೆ ಪ್ರಶ್ನೆ ಎತ್ತುತ್ತಿದ್ದಾರೆ. ಅಧಿಕಾರದಲ್ಲಿದ್ದಾಗ ಹೇಳದ ಮಾತನ್ನು ಜಾರ್ಜ್ ಫರ್ನಾಂಡೀಸ್ ಈಗ ಹೇಳುತ್ತಿರುವುದು ಅವರ ಎಂದಿನ ಕ್ಷುಲ್ಲಕ ಚಾಣಾಕ್ಷತೆಗೆ ನಿದರ್ಶನವಾಗಿದೆ. ಭಾಜಪ 'ಹಿಂದುತ್ವ'ಕ್ಕೆ ಮರಳಿದರೆ ಇವರು ಅವರೊಡನೆ 'ಟೂ' ಬಿಡುತ್ತಾರಂತೆ ! ಭಾಜಪ 'ಹಿಂದುತ್ವ'ವನ್ನು ಬಿಟ್ಟಿದ್ದದ್ದು ಯಾವಾಗ? ಸಂಮಿಶ್ರ ಸರ್ಕಾರವನ್ನು ಉರುಳಿಸಿ ತಾವೇ ಸ್ವತಂತ್ರ ಬಹುಮತ ಪಡೆಯಬಹುದೆಂಬ ಆಶಯ ಮಾನ್ಯ ದೇವೇಗೌಡರದ್ದು. ಕೇಂದ್ರದ ಸಂಮಿಶ್ರ ಸರ್ಕಾರ ಒಂದೇ ಪಕ್ಷದ ಅಧಿಕಾರವಿದೆಯೇನೋ ಎಂಬಂತೆ ನಡೆದುಕೊಳ್ಳುತ್ತಿದೆ. ಈ ಅನುಭವಗಳ ಹಿನ್ನೆಲೆಯಲ್ಲಿ ಈಗ ಜೊತೆಯಾಗಿರುವ ದಸಂಸ ಮತ್ತು ರೈತ ಸಂಘ ಜಾಗರೂಕರಾಗಿರಬೇಕು. ಜಂಟಿ ಕಾರ್ಯಕ್ರಮಗಳಿಂದ ಬೆಸೆಯಲ್ಪಡುವುದು ಆರೋಗ್ಯಕರ; ಕೇವಲ ಮಾತು, ಭಾವನೆಗಳು, ಬೇರೆಯವರ ಮೇಲಿನ ಅಸಮಾಧಾನ ಇವರಿಬ್ಬರನ್ನು ಚೆನ್ನಾಗಿ ಬೆಸೆಯುವುದಿಲ್ಲ. ಸೊಗಸಾಗಿ ಬೆಸುಗೆ ಹಾಕಿದ್ದಾದರೆ ನಮ್ಮ ಹಳ್ಳಿಗಳಲ್ಲಿ ಹೊಸ ಗಾಳಿ ಬೀಸುತ್ತದೆ, ಹೊಸ ಬಾಂಧವ್ಯ ಬೆಳೆಯುತ್ತದೆ, ಜಾತಿ ರಾಜಕೀಯಕ್ಕೆ ಪೆಟ್ಟು ಬೀಳುತ್ತದೆ. ಇಂದೇ ಒಂದಾಗದಿದ್ದರೂ ನಿರ್ದಿಷ್ಟ ವಿಷಯಗಳನ್ನು ಕುರಿತ ಜಂಟಿ ಹೋರಾಟಗಳು ನಾಳಿನ ಸ್ವಾಗತಾರ್ಹ ಸ್ವರೂಪವನ್ನು ರೂಪಿಸುತ್ತವೆ. ಹಿಂದೆ ಹೀಗೆ ಪಕ್ಷಗಳು ಬಂದಿವೆ, ಹೋಗಿವೆ. ಇದು ಹಾಗೆ ಪರ್ಯವಸಾನವಾಗದಿರಬೇಕಾದರೆ ನಾಲ್ಕೈದು ಸೂತ್ರಗಳನ್ನು ಇಬ್ಬರೂ ಒಪ್ಪಿ ಒಂದಾಗಬೇಕು : (ಅ) ಜನರ ಆರ್ಥಿಕ-ಸಾಮಾಜಿಕ-ಸಾಂಸ್ಕೃತಿಕ ಜೀವನಕ್ಕೆ ನೇರವಾಗಿ ಸಂಬಂಧಿಸಿದ ವಿಷಯಗಳಿಗೆ ಆದ್ಯತೆ ನೀಡುವುದು ; ಉದಾಹರಣೆಗೆ, ಭೂಮಿ - ನೀರು - ಗೊಬ್ಬರ - ಬೀಜ - ವಿದ್ಯುತ್ - ಮಾರುಕಟ್ಟೆ - ಕೋಮುಸಾಮರಸ್ಯ. (ಆ) ಜಾತಿ ಆಧಾರಿತ ಚಿಂತನೆ ಮತ್ತು ಕ್ರಿಯೆಗಳನ್ನು ಕೈಬಿಡುವುದು. (ಇ) ರೈತ ಮತ್ತು ದಲಿತ ಎಂದಾಕ್ಷಣ ಅವರಿಬ್ಬರದೂ ಏಕರೂಪದ ಘಟಕಗಳಲ್ಲವಾದ್ದರಿಂದ, ಅಂದರೆ ಅವುಗಳಲ್ಲೂ ವರ್ಗಗಳಿರುವುದರಿಂದ, ಸಾಮಾನ್ಯವಾಗಿ ಕೆಳಹಂತಗಳಲ್ಲಿರುವ ರೈತರ ಮತ್ತು ದಲಿತರ ಪ್ರಶ್ನೆಗಳನ್ನು ಮುಂದುಮಾಡಿ ಹೋರಾಟ ಸಂಯೋಜಿಸುವುದು. (ಈ) ಈ ವರ್ಗಗಳ ಹಿತವನ್ನು ಕಾಯ್ದುಕೊಳ್ಳಲು ಬದ್ಧವಾದ ಇತರ ರಾಜಕೀಯ ಪಕ್ಷಗಳೊಡನೆ ಸಹಚಿಂತನೆ ಮತ್ತು ಸಹ-ಕಾರ್ಯಾಚರಣೆಗೆ ಮುಂದಾಗುವುದು; ಉದಾಹರಣೆಗೆ, ಕಮ್ಯುನಿಸ್ಟ್ ಪಕ್ಷಗಳು. (ಉ) ವ್ಯಕ್ತಿಗಳ ವೈಭವೀಕರಣಕ್ಕೆ ಮನಸೋಲದೆ ಸಂಘಟನೆಯ ಶಕ್ತಿಗೆ ಆದ್ಯತೆ ನೀಡುವುದು.

ಈ ಉಪಕರಣಗಳಿಂದ ನಿಜಕ್ಕೂ ಪರ್ಯಾಯ ರಚನೆಗೊಳ್ಳುತ್ತದೆ, ಬೇರೆ ದೊಡ್ಡ ಬಂಡವಳಿಗ ಮತ್ತು ಮತೀಯ ಪಕ್ಷಗಳು ಪೋಷಿಸದಿದ್ದ ಮೌಲ್ಯಗಳಿಗೆ ಜೀವ ಬರುತ್ತದೆ. ಈ ನಿರೀಕ್ಷೆಯನ್ನು ಹುಸಿ ಮಾಡದಿರುವುದು ಪರ್ಯಾಯ ಪಕ್ಷದ ಜವಾಬ್ದಾರಿಯಾಗಿರುತ್ತದೆ.

* * *

ತಮಗೆ ಬೇಕಾದ ಒಂದು ರಸ್ತೆಯನ್ನು ಕೂಡ ಮಾಡಿಕೊಳ್ಳುವ ಯೋಗ್ಯತೆ ಇಲ್ಲದ ಮಾಹಿತಿ ತಂತ್ರಜ್ಞಾನ ಉದ್ದಿಮೆಗಳು ನಮ್ಮ ಬೆಂಗಳೂರಿನಲ್ಲಿ ಬೇರುಬಿಟ್ಟಿವೆ. ಲೆಕ್ಕವಿಲ್ಲದಷ್ಟು ಕೋಟಿ ಲಾಭ ಪಡೆದರೂ ಸಾರ್ವಜನಿಕ ಹಣದಿಂದಲೇ ಇವರಿಗೆ ಎಲ್ಲ ಸೌಲಭ್ಯಗಳೂ ಬೇಕು. ಕೈಮಗ್ಗದ ಕೆಲಸ ಮಾಡುವವನಿಗೆ ನಮ್ಮ ರಾಜ್ಯದಲ್ಲಿ ತೆರಿಗೆ ವಿಧಿಸಬಹುದು. ಆದರೆ ಈ ಐ. ಟಿ. ತಿಮಿಂಗಿಲಗಳಿಗೆ ತೆರಿಗೆ ವಿನಾಯಿತಿ ಬೇಕು. ಇಲ್ಲದಿದ್ದರೆ ಬೇರೆ ಕಡೆ

೮ನೇ ಪುಟಕ್ಕೆ ....




ಸಂಪುಟ-೬ ಸಂಚಿಕೆ - ೨ ಸೆಪ್ಟೆಂಬರ್ ೨೦೦೪

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಜಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ: ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್: ೨೨೨೦೩೫೮೦ / ೮೧ / ೮೨
e-mail : nkp@bgl.vsnl.net.in
website : www.navakarnatakabooks.com

ಸಂಪಾದಕೀಯ

# ಇಂಗ್ಲಿಷ್ ಕಡ್ಡಾಯ ; ಕನ್ನಡ ಮಂಗಮಾಯ !

''ಬಹುಭಾಷೆಗಳಲ್ಲಿ ದ್ವಿಭಾಷೆ'', ಎಂಬ ಭಾಷಾ ಸೂತ್ರವನ್ನು ಪ್ರತಿಪಾದಿಸುವ ರಾಷ್ಟ್ರಕವಿ ಕುವೆಂಪು ಶತಮಾನೋತ್ಸವವನ್ನು ಈ ವರ್ಷ ನಾಡಿನಲ್ಲೆಲ್ಲಾ ಸಂಭ್ರಮದಿಂದ ಆಚರಿಸಲಾಗುತ್ತಿದೆ. ಕವಿವಾಣಿಯನ್ನು ವಿಡಂಬಿಸುವಂತಹ ತೀರ್ಮಾನವನ್ನು ಈ ವರ್ಷವೇ ಬೆಂಗಳೂರು ವಿಶ್ವವಿದ್ಯಾಲಯವೂ ತೆಗೆದುಕೊಂಡಿರುವುದು ಕಾಕತಾಳೀಯವೆನ್ನಬಹುದೇ ? ಪರಿಶೀಲಿಸಬೇಕಾಗುತ್ತದೆ.

''ಬಹುಭಾಷೆಗಳಲ್ಲಿ, ದ್ವಿಭಾಷೆ'', ಎಂಬ ಹೇಳಿಕೆಯ ಆಶಯ, ಮೊದಲ ಭಾಷೆಯಾಗಿ ಪ್ರಾದೇಶಿಕ ಭಾಷೆ, ದ್ವಿತೀಯ ಭಾಷೆಯಾಗಿ ಮಾತೃಭಾಷೆ ಅಥವಾ ಇನ್ನಾವುದೇ ಭಾರತೀಯ ಭಾಷೆ ಅಥವಾ ಇಂಗ್ಲಿಷ್ ಎಂಬುದಾಗಿತ್ತು. ಕನ್ನಡನಾಡಿನ ಎಲ್ಲ ಪ್ರಜೆಗಳೂ ಅವರ ಮಾತೃಭಾಷೆ ಏನಿದ್ದರೂ, ಪ್ರಾದೇಶಿಕ ಭಾಷೆಯಾದ ಕನ್ನಡವನ್ನು ಕಡ್ಡಾಯವಾಗಿ ಕಲಿಯಬೇಕೆಂಬುದನ್ನು ಕುವೆಂಪು ಪ್ರತಿಪಾದಿಸಿದ್ದಾರೆ. ಇತ್ತೀಚೆಗೆ ಸುಪ್ರೀಂ ಕೋರ್ಟ್ ತೀರ್ಪಿನಂತೆ ಪ್ರಾದೇಶಿಕ ಭಾಷೆಯನ್ನು ಪ್ರಾಥಮಿಕ ಹಂತದಲ್ಲಿಯೇ ಕಡ್ಡಾಯವಾಗಿ ಕಲಿಸಬಹುದಾಗಿದೆ.

ಅದೇನಿದ್ದರೂ ಬೆಂಗಳೂರು ವಿಶ್ವವಿದ್ಯಾಲಯದ ಅಧಿಕೃತ ಭಾಷಾ ನೀತಿ ಆರಂಭದಿಂದಲೂ ಇಂಗ್ಲಿಷ್ ಪರವಾಗಿದೆ. ಬಿ.ಎ./ಬಿ.ಎಸ್‌ಸಿ. ಮುಂತಾದ ಪದವಿ ತರಗತಿಗಳಲ್ಲಿ ಎರಡು ಭಾಷೆಗಳ ಸಾಹಿತ್ಯವನ್ನು ವಿದ್ಯಾರ್ಥಿಗಳು ಅಧ್ಯಯನ ಮಾಡುತ್ತಾರೆ. ಇಲ್ಲಿಯವರೆಗೆ ಜಾರಿಯಲ್ಲಿದ್ದ ಬೆಂಗಳೂರು ವಿಶ್ವವಿದ್ಯಾಲಯದ ನಿಯಮಾವಳಿಯಂತೆ ಪ್ರಥಮ ಭಾಷೆಯಾಗಿ ಇಂಗ್ಲಿಷ್ ಕಡ್ಡಾಯ. ದ್ವಿತೀಯ ಭಾಷೆಯಾಗಿ ಯಾವುದಾದರೊಂದು ಭಾರತೀಯ ಭಾಷೆಯನ್ನು – ಅಂದರೆ, ಕನ್ನಡ, ಸಂಸ್ಕೃತ, ಹಿಂದಿ, ತಮಿಳು ಇತ್ಯಾದಿ – ಅಧ್ಯಯನ ಮಾಡಬಹುದಿತ್ತು. ಆದರೆ ವಿದೇಶದಿಂದ ಬರುವ ವಿದ್ಯಾರ್ಥಿಗಳ ಮಟ್ಟಿಗೆ ದ್ವಿತೀಯ ಭಾಷೆಯ ಅಧ್ಯಯನ ಸಂಬಂಧವಾಗಿ ಒಂದು ವಿನಾಯಿತಿ ಇತ್ತು. ಕುಲಪತಿಗಳ ಪೂರ್ವಾನುಮತಿಯೊಂದಿಗೆ ವಿದೇಶಿ ವಿದ್ಯಾರ್ಥಿಗಳು ಮಾತ್ರ ಭಾರತೀಯ ಭಾಷೆಯ ಬದಲಿಗೆ, ಹೆಚ್ಚುವರಿಯಾಗಿ ಇಂಗ್ಲಿಷ್ ಸಾಹಿತ್ಯವನ್ನೇ ಓದಲು ಅವಕಾಶ ಕಲ್ಪಿಸಿಕೊಡಲಾಗಿತ್ತು.

ಕುವೆಂಪು ಆಶಯದಂತೆ ಕನ್ನಡ ಭಾಷೆಯನ್ನೇ ಪದವಿ ತರಗತಿಗಳಿಗೆ ಕಡ್ಡಾಯ ಮಾಡಬೇಕೆಂದು ನಾವು ಕೇಳಬಹುದಿತ್ತು. ಇಂಗ್ಲಿಷ್ ಕಡ್ಡಾಯವೇಕೆ ? ಎಂದು ಪ್ರಶ್ನಿಸಬಹುದಿತ್ತು; ಯಾರೂ ಕೇಳಲಿಲ್ಲ. ಏಕೆಂದರೆ ಕನ್ನಡ ಪರ ನಿರ್ಣಯ ತೆಗೆದುಕೊಂಡ ಗಳಿಗೆಯಲ್ಲೇ ಅದನ್ನು ಕೋರ್ಟಿನಲ್ಲಿ ಪ್ರಶ್ನಿಸುವ ಕನ್ನಡ ವಿರೋಧಿಗಳೇ ವ್ಯವಸ್ಥೆಯಲ್ಲಿ ಪ್ರಬಲವಾಗಿರುವಾಗ, ದ್ವಿತೀಯ ಭಾಷೆಯಾಗಿ ಕನ್ನಡ ತೆಗೆದುಕೊಳ್ಳಬಹುದೆಂದು ನಾವು ಸಮಾಧಾನ ವಹಿಸಿದೆವು. ಅಲ್ಲದೆ ಇದೊಂದು ಜರೂರು ವಿಷಯವೆಂದು ಆಗ ಯಾರಿಗೂ ಹೊಳೆಯಲಿಲ್ಲವೆನ್ನುವುದನ್ನು ಈಗ ದುಃಖದಿಂದ ನೆನಪಿಸಿಕೊಳ್ಳಬೇಕಾಗಿದೆ.

೨೦೦೪, ಏಪ್ರಿಲ್ ೨೭ನೆಯ ದಿನಾಂಕ, ಬೆಂಗಳೂರು ವಿಶ್ವವಿದ್ಯಾಲಯದ ಇತಿಹಾಸದಲ್ಲಿ, ಕನ್ನಡ ಮತ್ತು ಭಾರತೀಯ ಭಾಷೆಗಳ ಮಟ್ಟಿಗೆ, ಒಂದು ಕರಾಳ ದಿನವಾಗಿ ಪರಿಣಮಿಸಿದೆ. ಅಂದು ಅಕೆಡೆಮಿಕ್ ಕೌನ್ಸಿಲ್, ಒಂದು ಪ್ರತಿಗಾಮಿ ನಿರ್ಣಯವನ್ನು ಅಂಗೀಕರಿಸಿದೆ. ಜುಲೈ ಮೊದಲ ವಾರದಿಂದ ಇದು ಜಾರಿಗೆ ಬಂದಿದೆ. ಈ ನಿರ್ಣಯದ ಪ್ರಕಾರ ಬೆಂಗಳೂರು ವಿಶ್ವವಿದ್ಯಾಲಯದ ಪದವಿ ವಿದ್ಯಾರ್ಥಿಗಳು ಈಗಲೂ ಎರಡು ಭಾಷೆಗಳ ಸಾಹಿತ್ಯವನ್ನು ಅಧ್ಯಯನ ಮಾಡುತ್ತಾರೆ. ಪ್ರಥಮ ಭಾಷೆಯಾದ ಇಂಗ್ಲಿಷ್ ಈಗಲೂ ಕಡ್ಡಾಯವಾಗಿಯೇ ಉಳಿದಿದೆ. ದ್ವಿತೀಯ ಭಾಷೆಯ ಮಟ್ಟಿಗೆ ವ್ಯವಸ್ಥಿತ ಹುನ್ನಾರವೊಂದರ ಮೂಲಕ ಕನ್ನಡ ಮತ್ತು ಇತರ ಭಾರತೀಯ ಭಾಷೆಗಳನ್ನು ಮೂಲೆಗುಂಪು ಮಾಡುವ ತೀರ್ಮಾನ ತೆಗೆದುಕೊಳ್ಳಲಾಗಿದೆ. ದ್ವಿತೀಯ ಭಾಷೆಯಾಗಿ ಇನ್ನು ಮುಂದೆ ಯಾವುದೇ ಒಂದು ಭಾರತೀಯ ಭಾಷೆ ಅಥವಾ ಯಾವುದೇ ಒಂದು ವಿದೇಶಿ ಭಾಷೆಯನ್ನು ಆಯ್ಕೆ ಮಾಡಿಕೊಳ್ಳಬಹುದಾಗಿದೆ. ಹಿಂದೆ ಪರದೇಶದಿಂದ ಬಂದ ವಿದೇಶಿ ವಿದ್ಯಾರ್ಥಿಗಳಿಗೆ ಮಾತ್ರ ಇದ್ದ ಸೌಲಭ್ಯವನ್ನು ಈಗ ಸ್ವದೇಶಿ ವಿದ್ಯಾರ್ಥಿಗಳಿಗೂ ವಿಸ್ತರಿಸಲಾಗಿದೆ. ಅಂದರೆ ಮುಂದಿನ ಕಾಲದಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ ವಿದ್ಯಾರ್ಥಿಗಳು ಕನ್ನಡ ಅಥವಾ ಯಾವುದೇ ಭಾರತೀಯ ಭಾಷೆಯ ಪರಿಚಯ ಹಾಗೂ ಸಂಪರ್ಕವಿಲ್ಲದೆ, ಶುದ್ಧ ವಿದೇಶಿ ತಳಿಯ ಜನಾಂಗವಾಗಿ ಪ್ರಜ್ವಲಿಸಬಹುದಾಗಿದೆ. ಈ ತೀರ್ಮಾನವಾಗಿರುವ ಐತಿಹಾಸಿಕ ಸಂದರ್ಭದಲ್ಲಿ ಕನ್ನಡಾಭಿಮಾನಿಗಳೂ ಶ್ರೇಷ್ಠ ಸಾಹಿತ್ಯಾಭಿರುಚಿ ಇರುವವರೂ ಆದ ಮಹನೀಯರೊಬ್ಬರು ವಿಶ್ವವಿದ್ಯಾಲಯದ ಕುಲಪತಿಗಳಾಗಿದ್ದಾರೆ; ಸಮಕಾಲೀನ ಕನ್ನಡ ಕಾವ್ಯಲೋಕದಲ್ಲಿ ಕ್ರಾಂತಿಯ ಬೆಳಕು ಮೂಡಿಸಿದ ಪ್ರತಿಭಾವಂತ ಕವಿಯೊಬ್ಬರು ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರಾಗಿದ್ದಾರೆ, ಎಂಬ ಸಂಗತಿ ಗಮನಾರ್ಹವಾಗುತ್ತದೆ. ಅವರಿಬ್ಬರ ಗಮನಕ್ಕೂ ಬರದೆ ಇಂತಹ ನಿರ್ಣಯ ಅಂಗೀಕೃತವಾದದ್ದು ಹೇಗೆ ?

ಈ ನಿರ್ಣಯದ ತಕ್ಷಣದ ಪರಿಣಾಮ ಹಾಗೂ ದೂರಗಾಮಿ ಪರಿಣಾಮಗಳೆರಡನ್ನೂ ಪರಿಶೀಲಿಸಬಹುದಾಗಿದೆ. ಸದ್ಯಕ್ಕೆ ಪೆಟ್ಟು ಬೀಳುವುದು ಕನ್ನಡೇತರ ಭಾರತೀಯ ಭಾಷೆಗಳಿಗೆ. ಮುಖ್ಯವಾಗಿ ತಮಿಳು, ತೆಲುಗು ಮತ್ತು ಉರ್ದು ಭಾಷೆಗಳ ಬದಲಿಯಾಗಿ ವಿದ್ಯಾರ್ಥಿಗಳು ಹೆಚ್ಚುವರಿಯಾಗಿ ಇಂಗ್ಲಿಷ್ ಭಾಷೆಯನ್ನೇ ಆಯ್ಕೆ ಮಾಡಿಕೊಳ್ಳುವ ಸಂಭವವಿದೆ. ಆಗ ಈ ಭಾಷೆಗಳ ಅಧ್ಯಾಪಕರಿಗೆ ವೇತನಕ್ಕಾಗಿ ಖರ್ಚು ಮಾಡುತ್ತಿದ್ದ ಹಣವನ್ನು ಕಾಲೇಜು ಆಡಳಿತ ಮಂಡಳಿಗಳು ಉಳಿತಾಯ ಮಾಡಬಹುದು. ಕೆಲವು ವರ್ಷಗಳ ಬಳಿಕ ನಿಧಾನವಾಗಿ ಈ ದುರ್ಗತಿ ಕನ್ನಡ, ಸಂಸ್ಕೃತ ಮತ್ತು ಹಿಂದಿ ಭಾಷೆಗಳಿಗೂ ಪ್ರಾಪ್ತವಾಗುತ್ತದೆ. ಈ ಭಾಷೆಗಳ ಅಧ್ಯಾಪಕರು ಕೆಲಸ ಕಳೆದುಕೊಳ್ಳುವುದಕ್ಕಿಂತ ತೀವ್ರತರವಾದ ಘನಘೋರ ಅಪಾಯ ಮತ್ತೊಂದಿದೆ. ಇಂಗ್ಲಿಷ್ ಮಾಧ್ಯಮದ ಶಾಲೆಗಳು ದಿನೇದಿನೇ ಹೆಚ್ಚು ಸಂಖ್ಯೆಯಲ್ಲಿ

ಬೆಳೆಯುತ್ತಿರುವುದರಿಂದ ಒಂದೆರಡು ದಶಕಗಳಲ್ಲಿ ಕನ್ನಡವೇ ಮುಂತಾದ ಎಲ್ಲ ಭಾರತೀಯ ಭಾಷೆಗಳ ಅಧ್ಯಯನದ ಬಗೆಗೂ ವಿದ್ಯಾರ್ಥಿಗಳಲ್ಲಿ ಆಸಕ್ತಿ ತೀವ್ರವಾಗಿ ಕ್ಷೀಣಿಸುತ್ತದೆ. ಕನ್ನಡವನ್ನು ಶಾಲೆಗಳಲ್ಲೂ ಕಲಿಯದೆ, ಕಾಲೇಜುಗಳಲ್ಲಿಯೂ ಓದದೆ, ಸಂಪೂರ್ಣ ಆಂಗ್ಲ ವಾತಾವರಣದಲ್ಲಿ ಮಕ್ಕಳು ಬೆಳೆಯುತ್ತಾರೆ. ಇಂತಹ ಸಂದರ್ಭ ನಗರದ ವಿದ್ಯಾವಂತ ಮೇಲುವರ್ಗ ಹಾಗೂ ಮಧ್ಯಮ ವರ್ಗದವರಿಗೆ ಸಾಮಾಜಿಕವಾಗಿ ಆಪ್ಯಾಯಮಾನಕಾರಿಯಾದ ಸಂಗತಿಯಾಗುತ್ತದೆ. ಏಕೆಂದರೆ ಅವರ ಮಕ್ಕಳು ಶ್ರೇಷ್ಠಮಟ್ಟದ ಇಂಗ್ಲಿಷ್ ಶಾಲೆಗಳಲ್ಲಿ ಓದಿರುತ್ತಾರೆ; ಬಡವರು ಮತ್ತು ಗ್ರಾಮೀಣ ಪರಿಸರದ ಮಕ್ಕಳು ಕಳಪೆ ಇಂಗ್ಲಿಷ್ ಶಾಲೆ ಅಥವಾ ಕನ್ನಡ ಶಾಲೆಗಳಲ್ಲಿ ಓದಿರುತ್ತಾರೆ. ಇಬ್ಬರೂ ಸ್ಪರ್ಧಿಸುವ ಮಾತೇ ಇಲ್ಲ; ಬಡವರು ಮತ್ತು ಹಳ್ಳಿಯ ಮಕ್ಕಳು ಕೀಳರಿಮೆಯಿಂದ ನಾಶವಾಗಿ ಹೋಗುತ್ತಾರೆ. ಈಗಾಗಲೇ ಈ ಪರಿಸ್ಥಿತಿ ನಿರ್ಮಾಣವಾಗಿದೆಯಾದರೂ, ಅದು ಸ್ಪಷ್ಟವಾಗಿ ಗೋಚರವಾಗಲು ಒಂದೆರಡು ದಶಕಗಳಾಗಬಹುದು. ಇದೆಲ್ಲವೂ ಬೆಂಗಳೂರು ವಿಶ್ವವಿದ್ಯಾಲಯದ ಅಕೆಡೆಮಿಕ್ ಕೌನ್ಸಿಲ್ ನಿರ್ಣಯದಿಂದಲೇ ಸಂಭವಿಸುತ್ತದೆ ಎಂಬಂತಹ ಮೂರ್ಖ ನಂಬಿಕೆ ಸರಿಯಲ್ಲ. ಆದರೂ ಕನ್ನಡವನ್ನು ನುಂಗಿ ನೊಣೆಯುತ್ತಿರುವ ಇಂಗ್ಲಿಷ್ ವ್ಯಾಮೋಹವೆಂಬ ಜ್ವಾಲೆಗೆ, ಬೆಂಗಳೂರು ವಿಶ್ವವಿದ್ಯಾಲಯವೂ ತನ್ನ ನಿರ್ಣಯದ ಮೂಲಕ ಸ್ವಲ್ಪಮಟ್ಟಿಗಾದರೂ ಸೀಮೆಎಣ್ಣೆ ಸುರಿಯುವ ಕೈಂಕರ್ಯ ನಡೆಸಿದೆ ಎಂಬುದನ್ನು ಹೇಳಲೇಬೇಕಾಗಿದೆ. ಬೆಂಗಳೂರು ವಿಶ್ವವಿದ್ಯಾಲಯದಿಂದ ಪದವಿ ಪಡೆಯುವ ಮುಂದಿನ ಕಾಲದ ವಿದ್ಯಾರ್ಥಿಗಳಿಗೆ ಪಂಪ, ರನ್ನ, ಕಾಳಿದಾಸ, ವಚನಕಾರರು, ತಿರುವಳ್ಳುವರ್, ಪ್ರೇಮಚಂದ್, ಕುವೆಂಪು, ಬೇಂದ್ರೆ – ಎಂದರೆ ಯಾರೆಂಬುದು ಗೊತ್ತಿರುವುದಿಲ್ಲ; ಆದರೆ ವರ್ಡ್ಸ್‌ವರ್ತ್, ಷೆಲ್ಲಿ, ಷೇಕ್ಸ್‌ಪಿಯರ್, ಎಲಿಯೆಟ್, ಸಾರ್ತ್ರ್, ಕಾಫ್ಕಾ, ಕಾಮೂ – ಮುಂತಾದವರು ಯಾರೆಂಬುದು ಚೆನ್ನಾಗಿ ತಿಳಿದಿರುತ್ತದೆ. ವಿಶ್ವಮಾನವತೆಯನ್ನು ಸಾರಿದ ಕವಿ ಕುವೆಂಪು ಶತಮಾನೋತ್ಸವಾಚರಣೆಯ ವರ್ಷದಲ್ಲೇ ಇದರ ಅಪವ್ಯಾಖ್ಯಾನವಾಗಬಹುದಾದ ಘಟನೆಯೊಂದು ನಡೆದಿರುವುದು ಒಂದು ನಾಟಕೀಯ ವ್ಯಂಗ್ಯವಾಗಬಹುದೇ ?

■ *ಕೆ. ಮರುಳಸಿದ್ದಪ್ಪ*

## ಮಣಿಪುರದಲ್ಲಿ ಮತಿಭ್ರಷ್ಟ ನೀತಿ

೧೯೪೪ರ ಏಪ್ರಿಲ್-ಮೇ ತಿಂಗಳುಗಳಲ್ಲಿ ಸುಭಾಷ್ ಚಂದ್ರ ಬೋಸರ ನೇತೃತ್ವದಲ್ಲಿದ್ದ ಆಜ಼ಾದ್ ಹಿಂದ್ ಸೈನ್ಯವು ಇಂಫಾಲ್ ಬಳಿಯ ಬೆಟ್ಟಗುಡ್ಡಗಳಲ್ಲಿ, ಕಣಿವೆಗಳಲ್ಲಿ ಬ್ರಿಟಿಷ್ ಸೈನ್ಯವನ್ನೆದುರಿಸಿ ಕಾದಾಡಲು ಸಜ್ಜಾಗಿ ನಿಂತಿತ್ತು. ವಿಪರೀತ ಮಳೆ, ಕೆಸರು. ಆಹಾರವಿಲ್ಲ, ಔಷಧಿಗಳಿಲ್ಲ, ಆಯುಧ ಸಾಮಗ್ರಿಗಳ ಕೊರತೆಯೂ ಇತ್ತು. ನೂರಾರು ಸೈನಿಕರಿಗೆ ಭೇದಿಯ ಬಾಧೆ. ಆನೆಗಳನ್ನು, ಕುದುರೆಗಳನ್ನು ಕೊಂದು ತಿನ್ನಬೇಕಾದ ಪರಿಸ್ಥಿತಿ. ಕೋಹಿಮಾದಲ್ಲಿ ಬ್ರಿಟಿಷರ ಭದ್ರಕೋಟೆ. ಹತ್ತಿರದ ದಿಮಾಪುರಕ್ಕೆ ಹೋದರೆ ಬೇಕಾದಷ್ಟು ಆಹಾರದ ದಾಸ್ತಾನು ದೊರೆಯುವಂತಿತ್ತು. ಆದರೆ ಬ್ರಿಟಿಷ್ ಸೈನ್ಯ ರಸ್ತೆಯನ್ನು ಅಡ್ಡಗಟ್ಟಿತ್ತು. ಇಂಫಾಲ್‌ನ ಕಾಂಗ್ಲಾ ಕೋಟೆಯಿಂದ ಮೌಂಟ್‌ಬ್ಯಾಟನ್ ಯುದ್ಧವನ್ನು ನಿರ್ದೇಶಿಸುತ್ತಿದ್ದಾನೆ. ಇಷ್ಟು ದುಸ್ತರವಾದ ಸನ್ನಿವೇಶದಲ್ಲೂ ನೇತಾಜಿಯವರ ಸೈನ್ಯದ ಭರವಸೆಗೆ ಕಾರಣ ಇಂಫಾಲದ ಜನರಲ್ಲಿ, ಮಣಿಪುರದ ಜನರಲ್ಲಿ ಅವರೆಲ್ಲರಿಗೂ ಇದ್ದ ನಂಬಿಕೆ, ಶ್ರದ್ಧೆ. ''ಹೇಗೋ ಕಷ್ಟಪಟ್ಟು ಇಂಫಾಲ್ ಪ್ರವೇಶಿಸಿದರೆ ಮಿಕ್ಕಿದ್ದನ್ನು ಜನ ನೋಡಿಕೊಳ್ಳುತ್ತಾರೆ, ಇಂಫಾಲ್ ವಶವಾದರೆ ಜನರು ಸೈನ್ಯವನ್ನು ದೆಹಲಿಗೆ ತಲುಪಿಸುತ್ತಾರೆ,'' ಹೀಗಿತ್ತು ನೇತಾಜಿಯವರ ಲೆಕ್ಕಾಚಾರ. ಆದರೆ ಬೆಟ್ಟದ ಮೇಲೇರಿ ಹೋಗಲಾಗಲಿಲ್ಲ, ಕೋಟೆಯಿಂದ ಗುಂಡಿನ ಸುರಿಮಳೆ. ಆಜ಼ಾದ್ ಹಿಂದ್ ಸೈನ್ಯದ ಹಿನ್ನಡೆ ಅಲ್ಲಿಂದ ಆರಂಭವಾಯಿತು. ಹೀಗೆ ಅದಮ್ಯ ಉತ್ಸಾಹದ ಬುಗ್ಗೆಗಳನ್ನೆಬ್ಬಿಸಿದ್ದ ಇಂಫಾಲ್ ಇಂದು ಭಣಗುಟ್ಟುತ್ತಿದೆ, ಅದು ಭಾರತದ ಭಾಗವೇ ಅಲ್ಲವೇನೋ ಎಂಬಷ್ಟು ತಳಮಳ ಉಂಟುಮಾಡಿದೆ.

ಕಾಂಗ್ಲಾ ಕೋಟೆಯು ಮಣಿಪುರದ ಜನರಿಗೆ ತಮ್ಮ ಎರಡು ಸಾವಿರ ವರ್ಷಗಳ ಇತಿಹಾಸದ ಪ್ರತೀಕ. ಅದು ಈಗ ಅಸ್ಸಾಂ ರೈಫಲ್ಸ್ ಎಂಬ ಭಾರತೀಯ ಸೈನ್ಯದ ವಿಭಾಗಕ್ಕೆ ತಾಣವಾಗಿದೆ. ಅದನ್ನು ತೆರವು ಮಾಡಿಕೊಡುವುದಾಗಿ ಭಾರತ ಸರ್ಕಾರ ನೂರಾರು ಸಲ ಘೋಷಿಸಿದೆ. ೧೯೯೨ರ ಆಗಸ್ಟ್‌ನಲ್ಲಿ ಆಗಿನ ಕೇಂದ್ರಮಂತ್ರಿಯೊಬ್ಬ ಈ ಸೈನ್ಯವಿಭಾಗವನ್ನು ಒಂದು ಬೆಳಿಗ್ಗೆ ವಿಧ್ಯುಕ್ತವಾಗಿ ಅಲ್ಲಿಂದ ಹೊರಕ್ಕೆ ಸಾಗಿಸಿದ್ದುಂಟು; ಆದರೆ ರಾತ್ರಿಯ ವೇಳೆಗಾಗಲೆ ಸೈನ್ಯ ಮತ್ತೆ ಹಿಂದಿರುಗಿ ಠಾಣೆ ಹೂಡಿತ್ತು. ಈಗಲೂ ಅದು ಸೈನ್ಯದ ಸುಬರ್ದಿನಲ್ಲಿದೆ. ಮಣಿಪುರದ ಜನಕ್ಕೆ ಇದು ಉಗ್ರಕೋಪಕ್ಕೆ ಕಾರಣವಾಗಿದೆ. ಅದಷ್ಟೇ ಕಾರಣವಲ್ಲ, ಆದರೆ ಅದೂ ಕಾರಣ. ಈಶಾನ್ಯ ಭಾರತದ ಬೇರೆಡೆಗಳಲ್ಲಿರುವಂತೆ ಮಣಿಪುರದಲ್ಲೂ ವಿಮೋಚನಾ ಹೋರಾಟಗಳು ನಡೆಯುತ್ತಾ ಬಂದಿವೆ. ಅವನ್ನು ಹತ್ತಿಕ್ಕಲು ಸೈನ್ಯವು ಎಲ್ಲೆಮೀರಿ ನಡೆದಿರುವುದು ಉಂಟು. ಶಿಕ್ಷಣ, ಆರೋಗ್ಯ, ಸಾರಿಗೆ ಮತ್ತು ನಾಗರಿಕ ಕ್ಷೇಮ ಹಲವು ವರ್ಷಗಳಿಂದ ಅಧೋಗತಿಗೆ ಸರಿಯುತ್ತಲೇ ಇವೆ.

೧೮೯೧ಕ್ಕೆ ಮುಂಚೆ ಮಣಿಪುರ ಒಂದು ಸ್ವತಂತ್ರ ರಾಜ್ಯ. ಟಿಕೇಂದ್ರಜಿತ್ ಸಿಂಗ್ ಆಗಿನ ರಾಜ. ಬ್ರಿಟಿಷರ ವಿರುದ್ಧ ಅವನು ಸೊಲ್ಲೆತ್ತಿದ್ದಕ್ಕಾಗಿ ಇಂಫಾಲದಲ್ಲಿ ದೊಡ್ಡ ದಾಂಧಲೆಯನ್ನು ಬ್ರಿಟಿಷರು ಸೃಷ್ಟಿಸಿದರು. ಕೆಲವು ಮಣಿಪುರಿ ಜನ ಬ್ರಿಟಿಷ್ ಅಧಿಕಾರಿಗಳನ್ನು ಕೊಂದರು. ಕಡೆಗೆ ರಾಜನನ್ನು ಬ್ರಿಟಿಷರು ಅದೇ ವರ್ಷ ಆಗಸ್ಟ್‌ನಲ್ಲಿ ಗಲ್ಲಿಗೇರಿಸಿದರು. ಸ್ವಾತಂತ್ರ್ಯಾನಂತರ ಮಣಿಪುರ ಭಾರತದಲ್ಲಿ ಸೇರಿತು, ತನ್ನದೇ ಸಂವಿಧಾನವೊಂದನ್ನು ರಚಿಸಿಕೊಂಡಿತು, ಶಾಸನಸಭೆಗೆ ಪ್ರತಿನಿಧಿಗಳನ್ನು ಚುನಾಯಿಸಿತು. ೧೯೪೯ರಲ್ಲಿ ಮಣಿಪುರ ಭಾರತದಲ್ಲಿ ಪೂರ್ಣವಾಗಿ ಅಂತರ್ಗತವಾಯಿತು. ಅಂದಿನಿಂದಲೂ ಅಸಮಾಧಾನದ ಹೊಗೆ ಇದ್ದೇ ಇದೆ. ದೆಹಲಿಯ ದಿವಾನರಿಗೆ ಐವತ್ತೈದು ವರ್ಷಗಳಿಂದ ಮಣಿಪುರದ ಜನ ಕಣ್ಣಿಗೆ ಬಿದ್ದಿಲ್ಲ, ಅಲ್ಲಿಯ ಆರ್ಥಿಕ ಬೆಳವಣಿಗೆಗೆ ಗಮನ ಕೊಡಲಾಗಿಲ್ಲ, ಯುವಕ-ಯುವತಿಯರಿಗೆ

*೭ನೇ ಪುಟಕ್ಕೆ....*

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ.೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨




### ಜುಲೈ ಸಂಚಿಕೆ

ನಿರೀಕ್ಷೆಯಂತೆಯೇ ಕಟುಸತ್ಯ, ಮೊನಚು ಬರಹದ ಜಿ. ರಾಮಕೃಷ್ಣ ಭೇಟಿಯಾದರು. ಮುಂದೆ ಹೋದಂತೆ ವೈಚಾರಿಕ ಲೇಖನಗಳು, ಆಕರ್ಷಕ ಕವನಗಳು ಮನತಣಿಸಿದವು. ಅನಸೂಯಾ ದೇವಿ ಬರೆದ ''ಮಹಿಳೆ ಮತ್ತು ಕಾವ್ಯಾಭಿವ್ಯಕ್ತಿ'' ಲೇಖನ ಅರ್ಥಪೂರ್ಣವಾಗಿದೆ. ಆದರೆ ಇಪ್ಪತ್ತನೆಯ ಶತಮಾನದಲ್ಲಿ ಮಹಿಳೆ ಕಾವ್ಯ ರಚನೆಯಲ್ಲಿ ಹಿಂದೆ ಉಳಿದಿದ್ದಾಳೆ ಅನ್ನೋ ಮಾತು ನಾನು ಒಪ್ಪೋದಿಲ್ಲ!

ಕಿತ್ತೂರು **ಖುರ್ಷೀದ್ ಆಲಂ ಮೋಮಿನ**

ದಸ್ತಗೀರ್ ಸಾಬ್ ದಿನ್ನಿಯವರು ವಿಜಯದಾಸರ ಹಾಡನ್ನು ಸರಿಯಾಗಿ ಅರ್ಥೈಸಿಕೊಂಡಿಲ್ಲ. ಭಕ್ತಿ ಪರಂಪರೆಯಲ್ಲಿ ಬೆಳೆದ ವಚನ ಮತ್ತು ದಾಸ ಚಳುವಳಿಗಾರರು ತಮ್ಮ ಆರಾಧ್ಯ ದೇವನನ್ನು ಒಡೆಯನನ್ನಾಗಿ, ಪತಿಯನ್ನಾಗಿ, ಇನ್ನು ಕೆಲವೆಡೆ ಸತಿಯನ್ನಾಗಿ ಭಾವಿಸಿಕೊಂಡು ವಚನ/ಪದ್ಯಗಳನ್ನು ರಚಿಸಿದರು. ಹೀಗಿರುವಾಗ ಲೌಕಿಕ ಜಾಡ್ಯವನ್ನು ಕಿತ್ತೊಗೆಯುವ ಮಾತಾಡುತ್ತ, ಅಲೌಕಿಕ ವಿಷಯದ ಕಡೆ ಚಿಂತಿಸುವ ಮನಸ್ಸು ತಮ್ಮ ಆರಾಧ್ಯ ದೇವನನ್ನು ಕಾಮಿಸುವ, ಲೋಭದ, ಮೋಹದ ಇತ್ಯಾದಿ ಮಾತು ಹೇಳಿರುವರೇ ವಿನಃ ಲೌಕಿಕ ಅರಿಷಡ್ವರ್ಗಗಳಲ್ಲ.

ಮದರಕಲ್ **ರಾಮರೆಡ್ಡಿ. ಜಿ**

ಇಂದು ದಟ್ಟ ದರಿದ್ರರ ಬಗ್ಗೆ ಮಾತನಾಡುವುದು ದೊಡ್ಡ ಅಪರಾಧ. ಬಡವರು ಹಾಗೂ ದುಡಿದು ತಿನ್ನುವವರ ಕಷ್ಟಕೋಟಲೆಗಳನ್ನು ಪ್ರಸ್ತಾಪಿಸುವುದು ಮೂರ್ಖತನವಾದೀತು ಕೂಡ. ಏಕೆಂದರೆ ಈಗ ಮುಕ್ತ ಮಾರುಕಟ್ಟೆಯ ಯುಗ. ಮಾರುಕಟ್ಟೆ ಎಲ್ಲವನ್ನೂ ನಿರ್ಧರಿಸುತ್ತದೆ. ಇಂತಹ ಸನ್ನಿವೇಶದಲ್ಲಿ ಬಡವರಿಗಾಗಿ ಮಿಡಿದ ಹೃದಯವೊಂದನ್ನು ನೆನೆಯುವುದು ಎಷ್ಟು ಪ್ರಸ್ತುತ! ಲೇಖನದಲ್ಲಿ 'ತಾಯಿ' ಕಾದಂಬರಿ ಪ್ರಕಟವಾಗಿ ನೂರು ವರ್ಷಗಳಾಗಿವೆ ಎನ್ನಲಾಗಿದೆ. ಆದರೆ 'ತಾಯಿ'ಗೆ ಇನ್ನೂ ನೂರು ವರ್ಷವಾಗಿಲ್ಲ. ಲಭ್ಯ ನಂಬಲರ್ಹ ಮಾಹಿತಿಗಳ ಪ್ರಕಾರ 'ತಾಯಿ' ಕಾದಂಬರಿಯನ್ನು ಅಲೆಕ್ಸಿ ಮ್ಯಾಕ್ಸಿಮೋವಿಚ್ ಶೆಬಕೋವ್ (ಮಕ್ಸಿಂ ಗೋರ್ಕಿ) ೧೯೦೭ನೇ ಇಸವಿಯಲ್ಲಿ ಅಮೆರಿಕಾದಲ್ಲಿದ್ದಾಗ ಬರೆದಿದ್ದು.

ಬೆಂಗಳೂರು **ತಡಗಳಲೆ ಸುರೇಂದ್ರ ರಾವ್**

### ಮಹಿಳೆ ಮತ್ತು ಕಾವ್ಯಾಭಿವ್ಯಕ್ತಿ

ಸ್ತ್ರೀಯರಿಂದ ಮಹಾಕಾವ್ಯಗಳು ರಚಿತವಾಗದುದಕ್ಕೆ ''ಪುರುಷ ಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಸ್ತ್ರೀ ತುಳಿತಕ್ಕೊಳಗಾಗಲು ಧರ್ಮದ ಅಂಗೀಕಾರದ ಮುದ್ರೆಯೂ ಬಿದ್ದುದೇ'' ಕಾರಣವಾಯಿತೆಂದು ಶ್ರೀಮತಿ ಅನಸೂಯ ಹೇಳಿದ್ದಾರೆ. ಕವಿರಾಜಮಾರ್ಗಕಾರನು ಕಾವ್ಯರಚನೆಗೆ ''ಪ್ರತಿಭಾವತ್ವಮುಂ, ಅಷ್ಟತರ ಚತುರತೆಯುಂ ಪರಮಬುಧಜನೋಪಾಸನಮುಂ ಶ್ರುತ (ಕೃತಿ) ಪರಿಚಯಮುಂ'' ಇರಬೇಕೆಂದು ಹೇಳಿದ್ದಾನೆ. ಆ ಕಾಲದಲ್ಲಿ ಗೃಹಕೃತ್ಯದ ಹೊಣೆ ಸ್ತ್ರೀಯರದ್ದಾಗಿತ್ತು (ಯಂತ್ರಯುಗವಲ್ಲ). ಆಕೆಗೆ ಪ್ರತಿಭೆ, ಚತುರತೆ ಇದ್ದರೂ ಬುಧಜನೋಪಾಸನೆ ಮತ್ತು ಶ್ರುತ (ಕೃತಿ) ಪರಿಚಯದ (ಗುರುಕುಲದ) ಅವಕಾಶವಿಲ್ಲದೆ ''ಕವಿವೃಷಭರ್ಕಳ್'' ಆಗಲಿಲ್ಲ. ಆದರೆ ಜನಪದದ ಗರತಿಯ ತ್ರಿಪದಿಗಳೂ, ಸಂಪ್ರದಾಯದ ಹಾಡುಗಳೂ ಗಾದೆಯ ಮಾತುಗಳೂ ಸ್ತ್ರೀಯರಿಂದಲೇ ರಚಿತವಾಗಿರಬೇಕು. ''ಕುಱಿತೋದದೆಯುಂ ಕಾವ್ಯಪ್ರಯೋಗ''ದ ಪರಿಣತಿಯ ಸೆಲೆ ಅವರಿಂದಲೂ ಹರಿದುಬಂದಿರಬೇಕಲ್ಲವೇ? ಮಹಾಕಾವ್ಯ ರಚನೆಯಲ್ಲಿ ಕವಯಿತ್ರಿಯರ ಕುಂಠಿತಕ್ಕೆ ಪುರುಷರ ತುಳಿತವೇ ಕಾರಣವೆಂದೇಕೆನ್ನಬೇಕು? ಯಾರೂ ಗಣೆಯನ್ನೂ ಹತ್ತಿ, ಡೋಲನ್ನೂ ಬಾರಿಸಲಾರರಲ್ಲವೇ? ಕುಟುಂಬದ ಹೊಣೆಗಾರಿಕೆಯೇ ಮುಖ್ಯವಾದ ಕಾರಣವೆಂದು ನನ್ನ ಅನಿಸಿಕೆ.

ಹೈದರಾಬಾದ್ **ಎಚ್. ವಿ. ಸಾವಿತ್ರಮ್ಮ**




### ಆಗಸ್ಟ್ ಸಂಚಿಕೆ

ಕರ್ನಾಟಕದ ಕಲಾ ಕಂಠೀಹಾರ ರಾಜಪ್ಪನವರನ್ನು ವೀರಪ್ಪನಿಂದ ಮರು ಬಿಕರಿ ಮಾಡಲು, ಉರುಳು ಮರಳು ಸೇವೆಗಳು ಸಾಲದಾಗಿ; ಹಣ ಮಾತ್ರ ತೂಗುವುದೆಂಬ ಸತ್ಯ ದರ್ಶನವಾದ ನಂತರ, ತಿಜೋರಿಯಿಂದ ತಾವು ಕೊಡಬಾರದ್ದನ್ನು ಕೊಡಲಾರದ್ದನ್ನು ಈ 'ಪ್ರಭುತ್ವ'ಗಳು ಕೊಡಲು ಇತರ ಮೂಲಗಳಿಂದ (ಸಹಜವಾಗಿ ತೆಲಗಿಯಂತಹ ಮಿಕಗಳಿಂದ) ಸಂಗ್ರಹಿಸುವ ಕೆಲಸವನ್ನು ಅತೀ ಅನಿವಾರ್ಯದ ಸಂದಿಗ್ಧತೆಯಲ್ಲಿ – ಅವರಿಗೇ ಬಿಡುವ ವಿವೇಕ ತೋರದೆ ತಾವೇ ಮುಂದಾದದ್ದು ಒಂದು ಬದಿಯ ವಿಚಾರವಾದರೆ, ಸಂಗ್ರಾಮನ ಹೇಳಿಕೆಯ 'ಸಾಕ್ಷಿ'ರಾಹಿತ್ಯತೆ, ಅದೆಂತಹ ರಹಸ್ಯ, ಎಲ್ಲಿಗೂ ತಿಳಿದದ್ದೇ, ಎಂಬಂತಹ ನಿಮ್ಮ ಸಂಪಾದಕೀಯ ಸಾಲುಗಳು: ಸಿಕ್ಕಿ ಬೀಳದವರೂ ಮತ್ತು ಪ್ರಹಸನದ ಪರಿಧಿಯಲ್ಲಿನ ಇತರರ ಹಿನ್ನೆಲೆಯಲ್ಲಿ – ದಾರಿ ತಪ್ಪಿದವುಗಳಿಗಾಗಿ ಗೋಚರಿಸುತ್ತವೆ, ಕ್ಷಮಿಸಿ.

ಪಾವಗಡ **ಕೆ. ಪುರುಷೋತ್ತಮ ರೆಡ್ಡಿ**

''ತಮಿಳಿಗೆ ಕ್ಲಾಸಿಕಲ್ ಪಟ್ಟ'' ಎಂಬ ಉತ್ಕೃಷ್ಟ ಲೇಖನವನ್ನು ನಮ್ಮ ಕನ್ನಡದ ವೀರಪುಂಗವ ರಾಜಕಾರಣಿಗಳೆಲ್ಲರೂ ಅಭ್ಯಸಿಸಿ ಒಡನೆ ದೆಹಲಿಯ ದೃಷ್ಟಿದೋಷ ನಿವಾರಿಸಲು ಮುಂದಾಗಬೇಕು.

ಇದೇ ವಿಚಾರದಲ್ಲಿ ೧೯೮೧-೮೨ರ ಅಂದಾಜಿಗೆ ನನಗಾದ ಒಂದು ಅನುಭವ. ಆಗ ನಾನು ಕನ್ನಡ ವಿಶ್ವಕೋಶದ ವಿಜ್ಞಾನ ಮತ್ತು ಕಾರ್ಯನಿರ್ವಾಹಕ ಸಂಪಾದಕನಾಗಿದ್ದೆ. ತಂಜಾವೂರು ತಮಿಳು ವಿಶ್ವವಿದ್ಯಾಲಯದಿಂದ ಒಂದು ನಿಯೋಗ ನಮ್ಮಲ್ಲಿಗೆ ಬಂದಿತು. ಎರಡು ದಿನಗಳ ಗಾಢ ಚರ್ಚಾಸಮಾವೇಶ. ನಮ್ಮ ಹತ್ತೂ ಸಂಪುಟಗಳನ್ನು ಅವರಿಗೆ ತೋರಿಸಿ ನಿರ್ಮಾಣ ತಂತ್ರ ಮತ್ತು ಇತರ ಎಲ್ಲ ವಿವರಗಳನ್ನೂ ಬರವಣಿಗೆಯಲ್ಲಿ ಕೊಟ್ಟೆವು. ತಮಿಳಿನಲ್ಲಿ ಇನ್ನೂ ವಿಶ್ವಕೋಶದ ಕನಸು ಕಾಣುತ್ತಿದ್ದಾಗ ನಮ್ಮ ಪ್ರಗತಿ ನೋಡಿ ಅವರಿಗೆ ಬೆರಗಾಯಿತು. ಕನ್ನಡದ ಹೊರತು ಬೇರೆ ಯಾವುದೇ ಭಾರತೀಯ ಭಾಷೆಯಲ್ಲಿ ಇಂಥ ಬೃಹತ್ ಸ್ವರೂಪದ ವಿಶ್ವಕೋಶ ಅಂದಿನವರೆಗೆ ಪ್ರಕಟವಾಗಿರಲಿಲ್ಲ. ವಿಶೇಷವಾಗಿ ಹಿಂದಿ ಮತ್ತು ತಮಿಳು ಭಾಷಾಂಧರಿಗೆ ಈ ಕಟು ವಾಸ್ತವತೆ ನುಂಗಲಾರದ ತುತ್ತಾಗಿತ್ತು. ಕನ್ನಡಲ್ಲಿ ಈ ಪವಾಡ ಹೇಗೆ ಸಾಧ್ಯವಾಯಿತು? ಸ್ವಾನುಭವದಿಂದ ಮೂಡಿದ ನನ್ನ ಉತ್ತರ: ಅಸ್ಮಿತೆ - ಬದ್ಧತೆ - ನಿರ್ಮೋಹ ಸಂಗಳಿಸಿರುವಲ್ಲಿ ಯಾವುದೂ ಅಸಾಧ್ಯವಲ್ಲ.

ಮೈಸೂರು **ಜಿ. ಟಿ. ನಾರಾಯಣರಾವ್**

ಈ ಸಂಚಿಕೆಯಲ್ಲಿ ಶಿವಮೊಗ್ಗ ಜಿಲ್ಲೆಯ ಹಲವು ಲೇಖಕರ ಲೇಖನಗಳು ಪ್ರಕಟಗೊಂಡಿದ್ದು ನನಗೆ ಹೆಮ್ಮೆಯೆನಿಸಿದೆ. ಸಾಹಿತ್ಯ, ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ಶಿವಮೊಗ್ಗ ಜಿಲ್ಲೆ ತವರೂರು ಎಂದರೆ ತಪ್ಪಾಗಲಾರದು. ಶ್ರೀ ಬಾಲಚಂದ್ರ ಜಯಶೆಟ್ಟಿಯವರ ಲೇಖನ ''ಗುಟಕಾ ಗುಲಾಮನಾಗದ ತನಕ ದೊರೆಯದಣ್ಣ ಮುಕುತಿ'' ಈ ಹವ್ಯಾಸಕ್ಕೆ ಬಲಿಯಾದವರಿಗೆ ಚಾಟಿ ಏಟಿನಂತಿದೆ. ಅವರಿಗೆಲ್ಲಾ ಇದು ಎಚ್ಚರಿಕೆಯ ಗಂಟೆಯೂ ಹೌದು. ಆದರೆ ಕೋಟ್ಯಾಂತರ ರೂಪಾಯಿಗಳು ಸರಕಾರದ ಬೊಕ್ಕಸಕ್ಕೆ ಬರುತ್ತಿರುವುದರಿಂದ ಮದ್ಯಪಾನ, ತಂಬಾಕು ಸೇವನೆ, ಜೂಜು ಇವುಗಳನ್ನು ಸರಕಾರ ಬಹಿಷ್ಕರಿಸುವುದೇ?

ಶಿವಮೊಗ್ಗ **ಎನ್. ಶೇಷಗಿರಿ ರಾವ್**

ಬೆಂಗಳೂರು ವಿಶ್ವವಿದ್ಯಾಲಯದ ಭಾಷಾ ನೀತಿಯ ಬಗೆಗಿನ ಸಂಪಾದಕೀಯ ಅಚ್ಚಾದ ತರುವಾಯದಲ್ಲಿ ಕುಲಪತಿಗಳಾದ ಡಾ॥ ಎಂ. ಎಸ್. ತಿಮ್ಮಪ್ಪನವರ ಹೇಳಿಕೆ ಪತ್ರಿಕೆಗಳಲ್ಲಿ ಪ್ರಕಟವಾಗಿದೆ. ಹಿಂದಿನ ತೀರ್ಮಾನಕ್ಕೆ ಒಂದು ತಿದ್ದುಪಡಿ ತರುವ ಭರವಸೆ ನೀಡಿದ್ದಾರೆ. ಇದು ಸ್ವಾಗತಾರ್ಹವಾದ ನಿಲುವು. ಅವರಿಗೆ 'ಹೊಸತು' ಅಭಿನಂದನೆ ತಿಳಿಸುತ್ತದೆ.

೬ನೇ ಪುಟದಿಂದ .... ಸಂಪಾದಕೀಯ

ಶಿಕ್ಷಣ-ಉದ್ಯೋಗ ದೊರಕಿಸಿಕೊಡಲಾಗಿಲ್ಲ ಮತ್ತು ಛಿದ್ರಕಾರಿ ಶಕ್ತಿಗಳೊಡನೆ ಕೂತು ಮಾತನಾಡಲಾಗಿಲ್ಲ, ಗಣರಾಜ್ಯ ದಿನದಂದು ಮಣಿಪುರದಿಂದ ಕಲಾವಿದರು ಬಂದು ದೆಹಲಿಯ ಉತ್ಸವದಲ್ಲಿ ಭಾಗಿಗಳಾಗಿಬಿಟ್ಟರೆ ಎಲ್ಲಾ ಸುಸೂತ್ರವಾಗಿದೆಯೆಂದು ಅವರು ಭ್ರಮಿಸಿದರು. ಜನರ ಮೇಲಿನ ಹಲ್ಲೆಯು ನಿರಂತರವಾಗಿ ಸಾಗಿದೆ. ಅಲ್ಲಿನವರೆಲ್ಲಾ ವಿಚ್ಛಿದ್ರಕಾರಿಗಳೇ ಎಂಬ ತೀರ್ಮಾನ ದೆಹಲಿಯ ಗಾಳಿಯಲ್ಲಿ ಕೇಳಿಬರುತ್ತಿದೆ.

ಈ ಹಿನ್ನೆಲೆಯಲ್ಲಿ ಇದೇ ಜುಲೈ ೧೧ರ ರಾತ್ರಿ ತಂಗ್‌ಜಾಂ ಮನೋರಮಾ ದೇವಿಯ ಮೇಲೆ ನಮ್ಮ ಸೈನಿಕರು ಎಸಗಿದ ದೌರ್ಜನ್ಯವನ್ನು ಅರ್ಥಮಾಡಿಕೊಳ್ಳಬೇಕು. ಭೂಗತ ದಳಗಳ ಒಡನಾಡಿಯೆಂಬ ಶಂಕೆಯಿಂದ ಆಕೆಯನ್ನು ಸೈನಿಕರು ಮನೆಯಿಂದ ಎಳೆದುತಂದರು, ಆಕೆಯ ಮೇಲೆ ಅತ್ಯಾಚಾರ ಎಸಗಿದರು, ಕೊಂದುಹಾಕಿದರು. ತಪ್ಪಿಸಿಕೊಂಡು ಹೋಗಲು ಓಡಿದ್ದರಿಂದ ಅವಳ ಮೇಲೆ ಗುಂಡು ಹಾರಿಸಿದರೆಂದು ಸೈನ್ಯದ ವಿವರಣೆ. ಅವಳು ತೊಟ್ಟಿದ್ದ ಮಣಿಪುರಿ ಲಂಗವನ್ನು ಹಾಕಿಕೊಂಡು ಓಡಿ ತೋರಿಸಿರೆಂದು ಮಣಿಪುರದ ಜನ ಕೇಳುತ್ತಿದ್ದಾರೆ. ಹಾಗೆ ಓಡಿದವಳನ್ನು ಸೈನಿಕರು ಅಟ್ಟಿಸಿಕೊಂಡು ಹೋಗಿ ಹಿಡಿಯ ಬಹುದಿತ್ತಲ್ಲವೆ, ಎನ್ನುತ್ತಾರವರು. ವಿಚಾರಣೆಗೆ ಹಾಜರಾಗಲು ಸಹ ಸೈನ್ಯದ ಅಧಿಕಾರಿಗಳು ನಿರಾಕರಿಸಿದ್ದಾರೆ. ತಮ್ಮ ಮಾನಭಂಗದ ಪರಾಕಾಷ್ಠೆಯನ್ನು ಸಹಿಸದೆ ಅನೇಕ ಮಹಿಳೆಯರು ಹಾಡುಹಗಲಲ್ಲಿ ನಗ್ನರಾಗಿ ಮೆರವಣಿಗೆ ನಡೆಸಿದ್ದಾರೆ, ಪ್ರತಿಭಟಿಸಿದ್ದಾರೆ. ಆದರೂ ಭಾರತಾಂಬೆಯ ಕಣ್ಣೀರು ಇನ್ನೂ ಹರಿದಿರುವಂತೆ ತೋರುವುದಿಲ್ಲ. ಯಾರು ಬೇಕಾದರೂ ಮಾತುಕತೆಗೆ ಬರಲೆಂದು ಕೇಂದ್ರ ಗೃಹಸಚಿವರು ಆಹ್ವಾನ ನೀಡಿದ್ದಾರೆ. ಕಾಂಗ್ಲಾ ಕೋಟೆಯಿಂದ ಸೈನ್ಯವನ್ನು ದೂರಕ್ಕೆಲ್ಲಾದರೂ ರವಾನಿಸುವುದಾಗಿ ಭರವಸೆ ಕೊಟ್ಟಿದ್ದಾರೆ. ಮನೋರಮಾ ನಂತರ ಇನ್ನೂ ಬೇರೆ ಯುವಕರೂ ಗುಂಡಿಗೆ ಬಲಿಯಾಗಿದ್ದಾರೆ. ನೇತಾಜಿಯವರನ್ನು ದೆಹಲಿಗೆ ಕಳಿಸಬೇಕಾಗಿದ್ದ ಇಂಫಾಲ್ ಇಂದು ದೆಹಲಿಯಿಂದ ಕಳಚಿಹೋಗುವ ಸಂದರ್ಭ ನಮ್ಮ ಮುಂದಿದೆ.

ಈಶಾನ್ಯ ರಾಜ್ಯಗಳನ್ನು ಕಡೆಗಣಿಸಿದ್ದು, ಸಾರಾಸಗಟಾಗಿ ಅಲ್ಲಿನವರನ್ನೆಲ್ಲಾ ವಿಚ್ಛಿದ್ರಕಾರಿಗಳೆಂದು ನಡೆಸಿಕೊಂಡಿದ್ದು, ಅರ್ಥವತ್ತಾದ ಅಭಿವೃದ್ಧಿಗೆ ಗಮನ ಕೊಡುವ ಬದಲು ಸೈನ್ಯದ ತುಕಡಿಗಳನ್ನು ಹೆಚ್ಚಿಸುತ್ತಾ ಹೋಗಿದ್ದು, ಮುಂತಾದ ಹಲವು ಕಾರಣಗಳಿಂದ ಇಂದು ಮಣಿಪುರ ತನ್ನ ರಮ್ಯತೆಯನ್ನು ಕಳೆದುಕೊಂಡು ಬೆಂದುಹೋಗುತ್ತಿದೆ. ತುಪಾಕಿ ಒಂದಿದ್ದರೆ ಎಲ್ಲವನ್ನೂ ಸ್ವಾಧೀನದಲ್ಲಿಟ್ಟುಕೊಳ್ಳಬಹುದೆಂಬ ಸರ್ಕಾರದ ಮೌಢ್ಯ ಮತ್ತು ದುರ್ನಡತೆಯನ್ನು ದೂರಮಾಡಿ ನಾವಿಂದು ಮಣಿಪುರದ ಜನತೆಯ ಜೊತೆ ಒಂದಾಗಬೇಕಾಗಿದೆ, ಅವರ ಸ್ವಾಭಿಮಾನವನ್ನು ಮಾನ್ಯ ಮಾಡಬೇಕಾಗಿದೆ, ಅವರ ಮೇಲೆ ನಡೆದಿರುವ ಹೀನಾಯ ಕೃತ್ಯಗಳಿಗೆ ಕ್ಷಮೆ ಕೇಳಬೇಕಾಗಿದೆ.

## ಇದು ಹಿಂಸೆಯೋ ಪ್ರತೀಕಾರವೋ ಶಿಕ್ಷೆಯೋ ?

**ನಾ**ಗಪುರ ನಮ್ಮ ದೇಶದ ಮಧ್ಯದಲ್ಲಿದೆ. ಅಲ್ಲಿಯ ಜನರೆಲ್ಲಾ ಆರೆಸ್ಸೆಸ್‌ನವರೇ ಇರಬೇಕೆಂಬ ಗುಮಾನಿ ಕೆಲವರದು. ಅದು ಹಾಗಲ್ಲವೆಂದು ಆಗಾಗ ಸಾಬೀತು ಮಾಡುತ್ತಿರುತ್ತಾರೆ ನಾಗಪುರದ ಜನ. ಈಚೆಗೆ ಅಕ್ಕೂ ಯಾದವ್ ಎಂಬ ಗೂಂಡಾ ಹಿಂಸಕನನ್ನು ಒಂದು ಕೊಳಚೆ ಪ್ರದೇಶದ ಇನ್ನೂರು-ಮುನ್ನೂರು ಮಹಿಳೆಯರು ನಾಗಪುರದ ಕೋರ್ಟ್‌ನಲ್ಲಿಯೇ ಸುತ್ತುವರಿದು ಚೆನ್ನಾಗಿ ಮೊಟ್ಟಿದಾಗ ಅವನ ಪ್ರಾಣವೇ ಹೋಯಿತು. ಅನಿಷ್ಟ ಕಳೆಯಿತೆಂದು ಅವರೆಲ್ಲಾ ತಮ್ಮ ಗುಡಿಸಲುಗಳಿಗೆ ಮರಳಿದರು. ಮಾರನೇ ದಿನ ಐದು ಮಹಿಳೆಯರನ್ನು ಬಂಧಿಸಿ ಕೋರ್ಟಿನಲ್ಲಿ ಹಾಜರುಪಡಿಸಿದಾಗ ಕಾನೂನು ತಜ್ಞ ನ್ಯಾಯಾಧೀಶರು ಅವರಿಗೆ ಜಾಮೀನಿನ ಮೇಲೆ ಬಿಡುಗಡೆ ಮಾಡಲಿಲ್ಲ. ಕೂಡಲೇ ಐನೂರು ಮಹಿಳೆಯರು ಅಲ್ಲೇ ಜಮಾಯಿಸಿ ಬಂಧಿತರನ್ನು ಬಿಡಿಸಿಕೊಂಡು ಹೋದರು. ನಮ್ಮ ನ್ಯಾಯಾಲಯಗಳ ಕಾರ್ಯವೈಖರಿಗೆ ಇದಕ್ಕಿಂತಲೂ ಬೇರೆ ನಿದರ್ಶನ ಬೇಕಿಲ್ಲ. ಆ ಗೂಂಡಾ ಮೇಲೆ ಇಪ್ಪತ್ತಕ್ಕೂ ಹೆಚ್ಚು ಮೊಕದ್ದಮೆಗಳಿವೆ, ಪ್ರತಿಯೊಂದರಲ್ಲೂ ಜಾಮೀನು ಪಡೆದಿದ್ದಾನೆ ಮತ್ತು ಮಹಿಳೆಯರಿಗೆ ಉಪದ್ರವ ನೀಡುತ್ತಿದ್ದಾನೆ. ಒಂದರಲ್ಲಾದರೂ ವಿಚಾರಣೆ ಮುಗಿಸಿ ಶಿಕ್ಷೆ ನೀಡಲಿಲ್ಲ. ಇಷ್ಟು ಬಾರಿ ಇವನ ಮೇಲೆ ಆಪಾದನೆಗಳು ಬಂದಿವೆಯಾದ್ದರಿಂದ ಇನ್ನು ಇವನಿಗೆ ಜಾಮೀನು ಬೇಡವೆಂದು ನ್ಯಾಯಾಲಯ ತೀರ್ಮಾನಿಸಲಿಲ್ಲ. ಮಹಿಳೆಯರು ತಾವೇ ಸಮಸ್ಯೆಗೆ ಪರಿಹಾರ ಕಂಡುಕೊಂಡರು. ಈಗ ಅವರು ಜೈಲಿಗೆ ಹೋಗಬೇಕು, ಜಾಮೀನಿಲ್ಲ! ಅದಕ್ಕೇ ಐನೂರು ಜನ ಕೋರ್ಟನ್ನು ಸುತ್ತುವರಿದಿದ್ದು. ಅವರ ಕ್ರಿಯೆಯನ್ನು ಹೇಗೆ ವ್ಯಾಖ್ಯಾನಿಸಬೇಕು ? ಹಿಂಸೆ, ಪ್ರತೀಕಾರ, ಶಿಕ್ಷೆ ಇವುಗಳಲ್ಲಿ ಯಾವುದು ಸರಿ ? ಕಾನೂನು ಪಂಡಿತರಿಂದ ತುಂಬಿದ ನ್ಯಾಯಾಲಯವೇ ಉತ್ತರಿಸಬೇಕು. ಆ ಮಹಿಳೆಯರಿಗೆ ಹಿಂಸೆಯ ಮೀಮಾಂಸೆಯನ್ನು ವಿವರಿಸಿ ಹೇಳುವುದು ಹೇಗೆ ?

[signature]

---

ಸಂಚಿಕೆ ಸುಂದರ ಮುಖಪುಟದೊಂದಿಗೆ ಕಂಗೊಳಿಸುತ್ತಿದೆ. ಶ್ರೀ ಜಯದೇವಪ್ಪ ಜೈನಕೇರಿ ಅವರ ಲೇಖನ 'ಸ್ನೇಹಕ್ಕೆ ಸ್ನೇಹ ಪ್ರೀತಿಗೆ ಪ್ರೀತಿ' ತುಂಬಾ ಚೆನ್ನಾಗಿದೆ. ಅಭಿನಂದನೆಗಳು.

*ಕಳನಾಡು* **ಮಾಲತಿ ಕಮಲಾಕ್ಷ**

ಪತ್ರಿಕೆ ಪುಟಪುಟದಲ್ಲೂ ಜ್ಞಾನಾರ್ಜನೆಯ ವೈವಿಧ್ಯತೆಯ ಮಜಲುಗಳನ್ನು ತುಂಬಿಕೊಂಡ ಸತ್ವಯುತವಾದ ಪತ್ರಿಕೆ. ಕನ್ನಡ ಲೋಕಕ್ಕೇ ಹೆಮ್ಮೆಯ ಪತ್ರಿಕೆ.

*ಹುಣಶ್ಯಾಳ ಪಿ. ಸಿ.* **ಸಂತೋಷ ಮ. ತೋಟದ**

ವಿಜಯಾ ಶ್ರೀಧರ್ ಅವರ 'ರಾತ್ರಿ' ತುಂಬಾ ಇಷ್ಟವಾಯ್ತು. ರಾತ್ರಿಯ ಕಲ್ಪನೆ ಹೇಗೆ ಇರುತ್ತದೆ, 'ರಾತ್ರಿ' ಎಂಬ 'ಮಿತ್ರ' ಯಾರ್ಯಾರಿಗೆ ಇಷ್ಟ ಎಂಬುವುದು ಸುಂದರವಾಗಿ ಮೂಡಿಬಂದಿದೆ. ವಿಭಾ ಅವರ ಕವನ 'ಮೌನ' ತುಂಬಾ ಚೆನ್ನಾಗಿತ್ತು. 'ಮೌನ'ದ ಒಳಗೆ ಒಂದು ಸುಂದರ 'ಕವನ' ಇದೆ.

*ಶಿವಮೊಗ್ಗ* **ಪಿ. ಗೋವಿಂದರಾಜ್**

ಡಾ|| ಮಾಧವಿ ಭಂಡಾರಿಯವರ ಲೇಖನ: ಶತಮಾನಗಳಿಂದ ಅದುಮಿಡಲ್ಪಟ್ಟ ಮಹಿಳೆ ಇತ್ತೀಚೆಗಷ್ಟೆ ಸಮಾನತೆ ಸ್ವಾತಂತ್ರ್ಯಕ್ಕಾಗಿ ಧ್ವನಿ ಎತ್ತುತ್ತಿದ್ದಾಳೆ. ಆದರೆ ಅವಳ ಸ್ವಾತಂತ್ರ್ಯವನ್ನು ನೈತಿಕತೆಗೆ ಜೋಡಿಸಲಾಗುತ್ತಿದೆ. ಸಹಜ-ಅಸಹಜ ಬಯಕೆಗಳನ್ನೆಲ್ಲ ಅನಿರ್ಬಂಧಿತವಾಗಿ ಪೂರೈಸಿಕೊಳ್ಳುವ, ಪುರುಷನನ್ನು ಬೆಂಬಲಿಸುವ, ಸ್ವಂತ ಮಗಳ ಮೇಲೆ ಅತ್ಯಾಚಾರ ವೆಸಗಿದರೂ ಸಹಾನುಭೂತಿ ತೋರುವ ಪುರುಷ ಪ್ರಧಾನ ವ್ಯವಸ್ಥೆ ಮಹಿಳೆಯನ್ನು ಯಾವತ್ತೂ ಸಂಶಯದ ದೃಷ್ಟಿಯಿಂದಲೇ ಕಂಡಿದೆ. ಇಂಥ ಲೇಖನಗಳು ಸಮಾಜದ ಇಬ್ಬಂದಿ ವರ್ತನೆಗೆ ಕಡಿವಾಣ ಹಾಕುವಲ್ಲಿ ಸಹಾಯಕವಾಗಿವೆ.

*ಸೇಡಮ್* **ಬಿದರಿ ಚಂದ್ರಕಲಾ**

ಭೂಮಿಯಲ್ಲಿ ಆಳವಾಗಿ ಬೇರು ಬಿಡಲು ತವಕಿಸುವ ಗರ್ಭಾಶಯ. ಇನ್ನೊಂದೆಡೆ ಸ್ವತಂತ್ರ ಅಸ್ತಿತ್ವಕ್ಕಾಗಿ ಹಪಹಪಿಸುವ ಜಾಗೃತ ಮನಸ್ಸು – ಎರಡನ್ನೂ personal is political ಎಂಬ ತಾತ್ವಿಕತೆಯೊಡನೆ ಸೆರೆ ಹಿಡಿದು – ಬಂಡವಾಳಶಾಹಿ ವ್ಯವಸ್ಥೆಗೆ ಭಿನ್ನಾಭಿಪ್ರಾಯಗಳ ಲಾಭ ಕೊಡಬಾರದೆಂಬ ಎಚ್ಚರದೊಡನೆ "ಮಾನವೀಯ ಸಂಬಂಧಗಳ ಸಾರ್ಥಕತೆಯಿರುವುದು ಬೆಚ್ಚನೆಯ ಮನೆಯಲ್ಲಿ ಮಾತ್ರ" ಎಂಬ ಇತ್ಯಾತ್ಮಕ ಅಪ್ಪಟ ದೇಸೀ ನೆಲೆಯ ದರ್ಶನದ ಶಿಖರದಲ್ಲಿ ಅರಿವಿನ ದೀಪ ಬೆಳಗಿಸಿರುವ ಡಾ|| ಮಾಧವಿ ಭಂಡಾರಿಯವರಿಗೆ, ಪ್ರಕಟಿಸಿದ 'ಹೊಸತು'ಗೆ ಅಭಿನಂದನೆಗಳು.

*ಅರಸೀಕೆರೆ* **ಸ. ಉಷಾ**

### ಮರ್ಲನ್ ಬ್ರಾಂಡೊ

ಜ್ಞಾನದ ಕಂಪಾರ್ಟ್‌ಮೆಂಟಲೈಸೇಶನ್‌ನಿಂದಾಗಿ ವ್ಯಕ್ತಿತ್ವದ ಸಮಗ್ರ ಪರಿಚಯದಲ್ಲಿ ಲೋಪ ದೋಷಗಳು ಉಂಟಾಗುತ್ತವೆ ಎಂಬುದನ್ನು ನಿರೂಪಿಸಿದೆ ಎಸ್. ಸುರೇಂದ್ರರವರ ಬ್ರಾಂಡೊ ಶ್ರದ್ಧಾಂಜಲಿ. ಬ್ರಾಂಡೊ ಶ್ರೇಷ್ಠ ಪ್ರತಿಭೆಯ ದುರಂತ ವ್ಯಕ್ತಿ ಎಂಬುದಾಗಿ ಎಲ್ಲಾ ಲೇಖನಗಳು ತಿಳಿಸಿದವೇ ಹೊರತು ಆತನ ಸಂಪೂರ್ಣ ವ್ಯಕ್ತಿತ್ವದ ಬಗ್ಗೆ ಬೆಳಕು ಚೆಲ್ಲದೆ ಎಲ್ಲರಿಗೂ ಆತ ನಿಗೂಢನಾಗಿದ್ದವನು. ಸಿನಿಮಾ ನಟರಾದರೆ ಸಾಕು ಅವರ ದರ್ಪ ದೌರ್ಜನ್ಯಗಳು, ಉಡಾಫೆತನ ಮತ್ತು ತಾವು ಸಮಾಜದಿಂದ ಮೇಲೇರಿ ನಿಂತವರು ಎಂಬ ಇಂದಿನ ಚಿತ್ರ ಕಲಾವಿದರ ರೀತಿನೀತಿಗಳಿಗೆ ಮಾರ್ಗದರ್ಶಕವಾಗಬಲ್ಲದು ಬ್ರಾಂಡೋನ ಜೀವನ. ಅತ್ಯಂತ ಶ್ರೀಮಂತ ದೇಶದ ಖ್ಯಾತ ನಟನಾದರೂ ಸಹ

೮ನೇ ಪುಟಕ್ಕೆ ....

೩ನೇ ಪುಟದಿಂದ .... ಈ ತಿಂಗಳು

ಹೋಗುವುದಾಗಿ ಬೆದರಿಕೆ ಹಾಕುವಷ್ಟು ಕೀಳುಮಟ್ಟದ ಉದ್ದಿಮೆದಾರರು ಇದರಲ್ಲಿದ್ದಾರೆ. ಈ ವರ್ಷದ ಬಜೆಟ್‌ನಲ್ಲಿ ಇವರಿಗೆ ಸ್ವಲ್ಪ ತೆರಿಗೆ ಹಾಕಿದ್ದಕ್ಕೆ ಬೊಬ್ಬೆಯಿಟ್ಟು ಅರ್ಥಸಚಿವರನ್ನು ಭೇಟಿಯಾಗಿದ್ದಾರೆ. ಪ್ರೇಂಜಿ ಎಂಬ ಉದ್ದಿಮೆದಾರರು ತಮ್ಮ ಮೇಲಿನ ತೆರಿಗೆಯ ಬಗ್ಗೆ ಒಂದು ಅನಪೇಕ್ಷಿತ ಸಲಹೆ ನೀಡಿದ್ದಾರೆ. ವೃತ್ತಿ ತೆರಿಗೆ ಎಂಬುದೊಂದಿದೆ. ಅತಿಸಾಮಾನ್ಯರೂ ಈ ತೆರಿಗೆ ಕೊಡುತ್ತಿದ್ದಾರೆ. ಪ್ರೇಂಜಿ ಬಂಧುಗಳಿಗೆ ತೆರಿಗೆ ವಿನಾಯಿತಿ ನೀಡಿ ಈ ಸಾಮಾನ್ಯರ ವೃತ್ತಿ ತೆರಿಗೆಯನ್ನು ಎರಡು ಪಟ್ಟು ಹೆಚ್ಚಿಸಿಬಿಡಿ ಎಂಬುದು ಅವರ ಸಲಹೆ. ಮೂರು ಪಟ್ಟು ಹೆಚ್ಚಿಸಿ ಒಂದು ಭಾಗ ನಮಗೂ ಕೊಡಿ ಎನ್ನಲಿಲ್ಲವಲ್ಲ, ಸದ್ಯ ! ನೂರಾರು ಎಕರೆ ಭೂಮಿಯನ್ನು ಕಡಿಮೆ ಬೆಲೆಗೆ ಪಡೆದಿರುವ ಈ ಉದ್ಯಮದವರು ಒಂದಿಷ್ಟು ತೆರಿಗೆಯನ್ನೂ ಕೊಡಲು ಸಿದ್ಧರಿಲ್ಲದ ಪರತಂತ್ರಜೀವಿಗಳು, ಮಾರಕ ವಿಷಜಂತುಗಳು. ಇವರಿಗೆ ಛೀ, ಥೂ, ಎನ್ನುವವರು ಯಾರೂ ಇಲ್ಲವೆಂದು ಅವರು ಭಾವಿಸಿದಂತಿದೆ. ಅದೆಲ್ಲಿಗೆ ತೊಲಗುತ್ತೀರೋ ತೊಲಗಿ, ಎಂದರೆ ಇವರೆಲ್ಲಾ ಬೇರೆಲ್ಲೋ ಹೋದರೆ ತಕ್ಷಣವೇ ಏನು ಸೌಲಭ್ಯ ಪಡೆಯಬಲ್ಲರು ? ಸ್ಟಾಕ್ ಮಾರ್ಕೆಟ್‌ನಲ್ಲಿ ಜೂಜಿನಿಂದಲೂ ಹಣ ಶೇಖರಿಸುವ ಈ ಉದ್ದಿಮೆಗಳು ಹೆಣಭಾರವಾಗದಂತೆ ನೋಡಿ ಕೊಳ್ಳಬೇಕಾದ್ದು ನೀತಿಗೆಡದ ಯಾವ ಸರ್ಕಾರವೇ ಆಗಲಿ ಮಾಡಬೇಕಾದ ಕೆಲಸ.

* * *

ಸಾರ್ವಜನಿಕರು ಪ್ರತಿಭಟನೆಗಾಗಿ ಒಂದು ಮೆರವಣಿಗೆ ಮಾಡಬೇಕೆಂದರೆ ಬೆಂಗಳೂರಿನಲ್ಲಿ ಪೊಲೀಸರು, ನ್ಯಾಯಾಲಯ ಎಲ್ಲಾ ತಡೆಯೊಡ್ಡುವವರೇ. ಅದು ಸಾಮಾನ್ಯ ನಾಗರಿಕರಿಗೆ ತೊಂದರೆ ಉಂಟುಮಾಡುತ್ತದಂತೆ. ಪ್ರತಿಭಟನೆ ಮಾಡುವವರು ಇವರ ಪ್ರಕಾರ ಅಸಾಮಾನ್ಯ ನಾಗರಿಕರಿರಬೇಕು ! ಅವರಿಗೆ ಜನರಿಲ್ಲದ ಯಾವುದೋ ರಸ್ತೆ ತೋರಿಸಿ ಅಲ್ಲಿ ಒಂದು ಪಕ್ಕದಲ್ಲಿ ನಡೆಯಬೇಕೆಂಬ ಆಜ್ಞೆ, ಹಳೆಯ ಸೆಂಟ್ರಲ್ ಜೈಲ್ ಬಳಿ ಬೇಕಾದರೆ ಸಭೆ ಮಾಡಿಕೊಳ್ಳಿ ಎಂಬ ಧಾರಾಳತನ. ಇದು ಸಾಂಕೇತಿಕವಾಗಿದೆ. ಜೈಲ್ ಬಳಿ ಸಭೆ ಮಾಡಿ, ಆಮೇಲೆ ಜೈಲಿನೊಳಕ್ಕೆ ತಳ್ಳಿಸಿಕೊಳ್ಳಿ, ಎಂಬುದು ಸಂದೇಶ. ಇದು ನಮ್ಮ ಪ್ರಜಾಪ್ರಭುತ್ವ. ಅದರಲ್ಲಿ ನಾಗರಿಕರು ಶುದ್ಧ ಅಹಿಂಸಾ ಮಾರ್ಗದಲ್ಲಿ ಉಳಿಯಬೇಕು. ಆದರೆ ನಮ್ಮ ರಾಜಧಾನಿಯಲ್ಲಿ ಲೋಕೋತ್ತರರಾದ ಸಾಮಾನ್ಯರು ಕೆಲವರಿದ್ದಾರೆ. ಅವರೂ ಪ್ರೇಂಜಿ ಬಂಧುಗಳು. ಅದು ಚಲನಚಿತ್ರೋದ್ಯಮ. ಅವರಿಗೆ ತೆರಿಗೆ ವಿಧಿಸಿದರೆ ಅದೊಂದು ಸರ್ಕಾರಿ ಅಪರಾಧ. ಆದ್ದರಿಂದ ತುರ್ತಾಗಿ ಮಂತ್ರಿಗಳೆಲ್ಲಾ ಅವರ ಬಳಿ ಧಾವಿಸಿ ಮಾತುಕತೆ ನಡೆಸುತ್ತಾರೆ, ಸಮಿತಿ ರಚಿಸುತ್ತಾರೆ, ತೆರಿಗೆ ಹಿಂತೆಗೆದುಕೊಳ್ಳುತ್ತಾರೆ. ಇತ್ತೀಚೆಗೆ ನಮ್ಮ ಖ್ಯಾತ ಚಿತ್ರನಟ-ನಟಿಯರೆಲ್ಲಾ ಕಾರು - ಬಸ್ಸುಗಳಲ್ಲಿ ಬೀದಿಗೆ ಬಂದು ಪ್ರತಿಭಟಿಸಿದರು, ಮೆರವಣಿಗೆ ತೆಗೆದರು. ಯಾರಿಗೂ ಅವಕಾಶವಿಲ್ಲವೆಂದು ಅಬ್ಬರಿಸುವ ಹೊಲಸು ಸರ್ಕಾರಿ ಯಂತ್ರ ಇವರಿಗೆ ಬೆಂಗಳೂರಿನ ಕೆಂಪೇಗೌಡ ರಸ್ತೆಯಲ್ಲಿ, ಕೆಂಪೇಗೌಡ ವೃತ್ತದಲ್ಲಿ ಗಂಟೆಗಟ್ಟಲೆ ಪ್ರತಿಭಟನಾ ಸಭೆ ನಡೆಸಲು ತರಾತುರಿಯಿಂದ ಅವಕಾಶ ಮಾಡಿಕೊಟ್ಟಿತು. ನ್ಯಾಯಾಲಯಕ್ಕೆ ಇದೆಲ್ಲ ತಿಳಿದಿಲ್ಲವೆಂದು ತೋರುತ್ತದೆ, ಆದ್ದರಿಂದಲೇ ಅದರ ಜಾಣ ಭೀಕರ ಮೌನ. ಪ್ರಜಾಪ್ರಭುತ್ವದಲ್ಲಿ ಸಿನಿಮಾ ತಾರಾ-ತಾರೆಯರು ಬೇರೆಲ್ಲರಿಗಿಂತ ಹೆಚ್ಚು ಸಮಾನರೆಂದು ಈಗಲಾದರೂ ತಿಳಿಯಿತೆ ? ಆಗಾಗ್ಗೆ ಹೀಗೆ ಬಂದು ತೊಂದರೆ ಕೊಡುವ ಆಶ್ವಾಸನೆಯನ್ನು ನಾಗರಿಕರಿಗೆ ಅಂದು ಸ್ವತಃ ಡಾ|| ರಾಜಕುಮಾರ್ ಅವರೇ ನೀಡಿದರಂತೆ. ಅದನ್ನೆಲ್ಲಾ ಕೇಳುತ್ತಿದ್ದ ಪೊಲೀಸರು ನಾಳೆಯಿಂದ ಇತರರಿಗೂ ಈ ಅವಕಾಶ ಕೊಡಬೇಕು, ಇಲ್ಲವೆ ದುರ್ಮಾರ್ಗಿಗಳೆಂಬ ಹಣೆಪಟ್ಟಿ ಧರಿಸಬೇಕು.

* * *

ಲಕ್ಷಗಟ್ಟಲೆ ಡಾಲರುಗಳನ್ನು ಸುರಿದು ಕೋಟಿಗಟ್ಟಲೆ ಹಿರಿದುಕೊಳ್ಳುವ ಉದಾತ್ತ ನೈತಿಕತೆಗೆ ಹೆಸರಾದ ಅಮೆರಿಕಾ ಈಚೆಗೆ ವೆನಿಜ಼ುಲಾದಲ್ಲಿ ಮೂಗು ತುಂಡರಿಸಿ ಕೊಂಡು ಬರಬೇಕಾಯಿತು. ಇರಾಕಿನ ತೈಲಸಂಪತ್ತಿನ ಜೊತೆಗೆ ವೆನಿಜ಼ುಲಾದ್ದೂ ತನ್ನದಾಗಬೇಕೆಂಬ ಹೊಟ್ಟೆಬಾಕ ಸಂಸ್ಕೃತಿ ಅಮೆರಿಕಾದ ಶ್ವೇತಭವನದ ಅಧಿನಾಯಕನದು. ಜನಗಳನ್ನು ಎತ್ತಿಕಟ್ಟಿ ಚುನಾಯಿತ ಅಧ್ಯಕ್ಷ ಶವೇಜ್‌ನನ್ನು ಪದಚ್ಯುತಗೊಳಿಸಲು ಒಂದು ದುರಂತ ನಾಟಕದ ಕರಡನ್ನು ಸಿದ್ಧಗೊಳಿಸಿಕೊಂಡಿದ್ದ ಅಮೆರಿಕಾಕ್ಕೆ ವೆನಿಜ಼ುಲಾದ ಜನತೆ ಪ್ರೌಢಶಿಕ್ಷಣ ನೀಡಿ ಕಳಿಸಿದ್ದಾರೆ. ಅಧಿಕ ಬಹುಮತದಿಂದ ಶವೇಜ್ ಗೆದ್ದಿರುವುದು ಎಲ್ಲ ಪ್ರಜಾಪ್ರಭುತ್ವವಾದಿಗಳಿಗೂ ಹರ್ಷದ ವಿಷಯ. ಆತನ ಬೆಂಬಲಿಗನೊಬ್ಬ ಹೇಳಿದ್ದನ್ನು ಮನನ ಮಾಡೋಣ : ''ನಾವು ಗೆದ್ದಿದ್ದೇವೆ. ಅದಕ್ಕೆ ಒಂದು ಹನಿ ರಕ್ತವನ್ನೂ ನಾವು ಸುರಿಸಿಲ್ಲ, ಗೆದ್ದಮೇಲೂ ಸುರಿಸುವುದಿಲ್ಲ. ನಮ್ಮ ವಿರೋಧಿಗಳು ಗೆದ್ದಿದ್ದರೆ ದೇಶದಲ್ಲಿ ರಕ್ತದ ಕೋಡಿ ಹರಿಸಿಬಿಡುತ್ತಿದ್ದರು. ಜನರೇ, ಎಚ್ಚರದಿಂದಿರೋಣ !''

---

೭ನೇ ಪುಟದಿಂದ .... ಪತ್ರಗಳು

ಹುಚ್ಚುತನದ ಅತಿರೇಕದಲ್ಲಿ ಕಳೆದುಹೋಗದೆ ಸಾಮಾಜಿಕ ಬೆಳವಣಿಗೆಯಲ್ಲಿ ತನ್ನನ್ನು ತೊಡಗಿಸಿಕೊಂಡು ಮಾನವೀಯ ಮೌಲ್ಯಗಳನ್ನು ಎತ್ತಿ ಹಿಡಿಯುವಲ್ಲಿ ಶ್ರಮಿಸಿದ ಬ್ರಾಂಡೊ ಪ್ರಜ್ಞಾವಂತರ ನೆನಪಿನಲ್ಲಿ ಸದಾ ಉಳಿಯುವಂತಹವನು. ಇಂತಹ ಅಪರೂಪದ ಲೇಖನಕ್ಕಾಗಿ 'ಹೊಸತು' ಅಭಿನಂದನೀಯ.

ಬೆಂಗಳೂರು — ***ನರೇಂದ್ರ ಸಿರಕಜೆ***

ಅವನ ಪ್ರತಿಭಾ ಶಕ್ತಿಯನ್ನು ಗುರುತಿಸಲಾರದ್ದು ನಮ್ಮ ಸಮಾಜದ ದುರಂತ. ಈ ಸ್ವಭಾವ ಪ್ರಪಂಚದ ಯಾವ ಮೂಲೆಗೆ ಹೋದರೂ ಇರುವಂಥದ್ದೇ. ಅದೇ ರೀತಿ ಅನುಭವಿಸಿದವರು ಚಾಪ್ಲಿನ್, ರೋಬ್ಸನ್ ಕೂಡ.ನಮ್ಮ ಕನ್ನಡ ಚಿತ್ರರಂಗದಲ್ಲಿ ಬಾಲಣ್ಣ, ಬಸವರಾಜಯ್ಯ (ಮೈಸೂರು)ನಂಥವರು ಸಿಗುತ್ತಾರೆ.

ಆಗಸ್ಟ್ ಸಂಚಿಕೆ ಒಳ್ಳೆಯ ಲೇಖನಗಳಿಂದ ಸಮೃದ್ಧವಾಗಿದೆ.

ಮದರಕಲ್ — ರಾಮರೆಡ್ಡಿ ಜಿ.

ಶಾಂತಿ

ಆಗಸ್ಟ್ ಸಂಚಿಕೆಯ ಮುಖಪುಟವಂತೂ ನಿಜಕ್ಕೂ ಶಾಂತಿಯ ಸಂಕೇತವೆಂಬಂತೆ ಬಿಂಬಿತವಾಗಿದೆ. ಬರಗೂರು ಅವರ ಹೊಸ ಚಿತ್ರವಾದ 'ಶಾಂತಿ' ದೇಶದ ಶಾಂತಿಗಾಗಿ ಆರಿಸಿಕೊಂಡ ಚಿತ್ರವಾಗಿದೆ. ಜನರ ಮನಸ್ಸಿನ ಕೊಳೆಯನ್ನು ತೆಗೆದುಹಾಕುವ ಕೆಲಸ ಇಂತಹ ಚಿತ್ರಗಳಿಂದಲೂ ನಿರ್ಮಾಣವಾಗಬೇಕು. ಇದರ ಜೊತೆಗೆ ಅಬ್ದುಲ್ ಮಜೀದ್ ಖಾನ್‌ರವರು ಹಿರೋಷಿಮ-ನಾಗಾಸಾಕಿಯ ನೆನಪು ಮಾಡಿಕೊಟ್ಟು ಈಗಲೂ ಅಲ್ಲಿನ ಸ್ಥಿತಿಯನ್ನು ಮೆಲುಕು ಹಾಕಿದ್ದಾರೆ.

ಹೂವಿನ ಹಡಗಲಿ — ***ಪಿ. ಕರಿಬಸಪ್ಪ***

ಡಾ|| ರಂಗರಾಜ ವನದುರ್ಗರ ಲೇಖನ ಪ್ರೊ|| ಬರಗೂರ್ ಅವರ 'ಶಾಂತಿ'ಯನ್ನು ಕಣ್ಣಿಗೆ ಕಟ್ಟಿದಂತೆ ಚಿತ್ರಿಸಿದೆ. 'ಶಾಂತಿ'ಯ ಇಂದಿನ ತುರ್ತು ಮತ್ತು ಅಗತ್ಯವನ್ನು ಪ್ರತಿಪಾದಿಸಿರುವ ರೀತಿ ಮಹತ್ತರವಾದುದು. 'ಶಾಂತಿ'ಯ ಕೈಯಲ್ಲಿರುವ ಪಿಸ್ತೂಲು ಮತ್ತು ಪಾರಿವಾಳ ಚಿತ್ರದ ಅಪೂರ್ವ ರೂಪಕಗಳಾಗಿವೆ.

ಶಂಕರಘಟ್ಟ — ***ಮಂಜುಶ್ರೀ ಕಡಕೋಳ***

ಬರಗೂರರು 'ಶಾಂತಿ' ಎಂಬ ಹೊಸ ಚಲನಚಿತ್ರ ತಯಾರಿಸಿ ಒಂದು ರೀತಿಯಲ್ಲಿ ದಾಖಲೆಯನ್ನು ನಿರ್ಮಿಸಿದ್ದಾರೆ. ಏಕಪಾತ್ರ ಚಿತ್ರವಾಗಿರುವ ಶಾಂತಿಯ ಬಿಡುಗಡೆಯ ನಿರೀಕ್ಷೆಯಲ್ಲಿದ್ದೇನೆ. ಇಂತಹ ಚಿತ್ರಗಳು ಕನ್ನಡ ಚಿತ್ರರಂಗದಲ್ಲಿ ಹೆಚ್ಚಲಿ. ಇದೇ ರೀತಿ ಸಂಚಿಕೆಯಲ್ಲಿ ಪ್ರಕಟವಾದ ಆತ್ಮಹತ್ಯೆಯನ್ನು ತಡೆಯಬಹುದೇ ? ಈ ಕುರಿತಾಗಿ ಖ್ಯಾತ ಮನೋತಜ್ಞರಾದ ಡಾ|| ಸಿ. ಆರ್. ಚಂದ್ರಶೇಖರ್‌ರವರು ಮಾರ್ಮಿಕವಾಗಿ ವಿಶ್ಲೇಷಿಸಿದ್ದಾರೆ. ನಿಜ ಇಂದು ಒಂದಲ್ಲ ಒಂದು ಕಾರಣಗಳಿಂದ 'ಆತ್ಮಹತ್ಯೆ'ಗಳ ಸಂಖ್ಯೆ ಹೆಚ್ಚುತ್ತಿದೆ. ಎಲ್ಲದಕ್ಕೂ ಆತ್ಮಹತ್ಯೆಯೇ ಒಂದು ಪರಿಹಾರವಲ್ಲ. ಯಾವುದೇ ಸಮಸ್ಯೆ ತಲೆದೋರಿದರೂ ಅದಕ್ಕೆ ಸರಿಯಾದ ರೀತಿಯಲ್ಲಿ ಸಲಹೆಗಳನ್ನು ಪಡೆಯಬೇಕು. ತಾಳ್ಮೆಗೆಡಬಾರದು. ಸಿಕ್ಕಷ್ಟೇ ಆಯಸ್ಸಿನಲ್ಲಿ ಏನಾದರೊಂದು ರೀತಿಯಲ್ಲಿ ಸಾಧನೆ ಮಾಡುವಂತಾಗಬೇಕು.

ಕಾಳೀಹುಂಡಿ — ***ಕೆ. ವಿ. ಶಿವಕುಮಾರ್***

ಸ್ವಾತಂತ್ರ್ಯೋತ್ಸವದ ಸಂದರ್ಭದಲ್ಲಿ ಲೇಖನ ಸಮರ್ಥನೀಯವೆನಿಸಿತು. ಬರಗೂರರ ಸಾಹಿತ್ಯ ಮತ್ತು ಸಿನಿಮಾಗಳನ್ನು ಸೂಕ್ಷ್ಮವಾಗಿ ಗಮನಿಸುತ್ತಾ ಹೋದಲ್ಲಿ ಸಮಾಜಮುಖೀ ಚಿಂತನೆಗಳು ಗೋಚರಿಸುತ್ತವೆ. ಅಂಥಾ ನಿಟ್ಟಿನಲ್ಲಿ ಏಕಪಾತ್ರದ 'ಶಾಂತಿ' ಹೊಸ ಭರವಸೆ ಮೂಡಿಸುವಂತಿದೆ.

ಕಣಿವೆಬಿಳಚಿ — ***ಸಂತೇಬೆನ್ನೂರು ಫೈಜ್ನಟ್ರಾಜ್***



# ಸ್ವಾತಂತ್ರ್ಯ ಮತ್ತು ಸಾಹಿತ್ಯಗಳನ್ನು ಸಮಾನವಾಗಿ ಕಂಡ ಸಮಾಜ ಚಿಂತಕ ಶರ್ಮಾಜಿ

ಕರ್ನಾಟಕದ ಚಿತ್ರದುರ್ಗ ಜಿಲ್ಲೆಯು ಭಾರತದ ಸ್ವಾತಂತ್ರ್ಯ ಸಂಗ್ರಾಮಕ್ಕೆ ಇಬ್ಬರು ಗಣ್ಯರನ್ನು ಅಣಿಗೊಳಿಸಿಕೊಟ್ಟಿದೆ. ಆ ಇಬ್ಬರೂ ಸರಳತೆಗೆ ಹೆಸರಾದವರು; ಒಬ್ಬರು ಮುಂಬಯಿ ಕರ್ನಾಟಕದೊಡನೆ ಸಂಪರ್ಕ ಇರಿಸಿಕೊಂಡಿದ್ದರೆ ಮತ್ತೊಬ್ಬರು ಹೈದರಾಬಾದ್ ಕರ್ನಾಟಕದೊಡನೆ ಸಂಪರ್ಕ ಪಡೆದಿದ್ದರು. ಪ್ರಸ್ತಾಪಿಸಿದವರಲ್ಲಿ ಮೊದಲನೆಯವರು ಸಿದ್ದವನಹಳ್ಳಿ ನಿಜಲಿಂಗಪ್ಪ; ಎರಡನೆಯವರೇ ಸಿದ್ದವನಹಳ್ಳಿ ಕೃಷ್ಣಶರ್ಮ.

**ಕ**ರ್ನಾಟಕದ ಚಿತ್ರದುರ್ಗ ಜಿಲ್ಲೆಯು ಭಾರತದ ಸ್ವಾತಂತ್ರ್ಯ ಸಂಗ್ರಾಮಕ್ಕೆ ಇಬ್ಬರು ಗಣ್ಯರನ್ನು ಅಣಿಗೊಳಿಸಿ ಕೊಟ್ಟಿದೆ. ಆ ಇಬ್ಬರೂ ಸರಳತೆಗೆ ಹೆಸರಾದವರು; ಒಬ್ಬರು ಮುಂಬಯಿ ಕರ್ನಾಟಕದೊಡನೆ ಹೆಚ್ಚು ಸಂಪರ್ಕ ಇರಿಸಿಕೊಂಡಿದ್ದರೆ ಮತ್ತೊಬ್ಬರು ಹೈದರಾಬಾದ್ ಕರ್ನಾಟಕದೊಡನೆ ಸಂಪರ್ಕ ಪಡೆದಿದ್ದರು. ಪ್ರಸ್ತಾಪಿಸಿದವರಲ್ಲಿ ಮೊದಲನೆಯವರು ಸಿದ್ದವನಹಳ್ಳಿ ನಿಜಲಿಂಗಪ್ಪ; ಎರಡನೆಯವರೇ ಸಿದ್ದವನಹಳ್ಳಿ ಕೃಷ್ಣಶರ್ಮ.

ಕನ್ನಡದಲ್ಲಿ ಗದ್ಯ ಶೈಲಿಯ ಮಾತು ಬಂದಾಗಲೆಲ್ಲಾ, ತಪ್ಪದೆ ನೆನಪಾಗುವವರು ಅಥವಾ ಉಲ್ಲೇಖಗೊಳ್ಳುವವರು ಸಿದ್ದವನಹಳ್ಳಿ ಕೃಷ್ಣಶರ್ಮ. ಇದು ಕ್ಲೀಷೆ ಎನ್ನಿಸುವಷ್ಟು ಒಪ್ಪಿತವಾಗಿರುವ ಮಾತು. ೨೦೦೩ ಕೃಷ್ಣಶರ್ಮರ ಜನ್ಮ ಶತಮಾನೋತ್ಸವ ವರ್ಷ. ಅವರು ಇದ್ದಿದ್ದರೆ, ೩೧ ಜುಲೈಗೆ ಸರಿಯಾಗಿ ೧೦೦ ವರ್ಷ ಮುಗಿದು ೧೦೧ನೆಯ ವರ್ಷಕ್ಕೆ ಕಾಲಿಡುತ್ತಿದ್ದರು. ಆದರೆ, ೧೪-೧೦-೧೯೭೩ರಂದು ತಮ್ಮ ೭೧ನೆಯ ವರ್ಷದಲ್ಲೇ ಅವರು ಇಹ ಲೋಕ ತ್ಯಜಿಸಿದರು. ಅವರ ಸಾಹಿತ್ಯ ಕೃತಿಗಳು ಮತ್ತು ಜನಪರ ಕಾರ್ಯಗಳು ಅವರ ಹೆಸರನ್ನು ಇಂದಿಗೂ ಜೀವಂತವಾಗಿಟ್ಟಿವೆ ಮತ್ತು ಇನ್ನೂ ಹಲವು ಶತಮಾನಗಳ ಕಾಲ ಅವರ ಹೆಸರಿಗೆ ಯಾವ ಧಕ್ಕೆಯೂ ಬರುವ ಸಂಭವ ಇಲ್ಲ. ಅವರು ಕೇವಲ ಸ್ವಾತಂತ್ರ್ಯ ಹೋರಾಟಗಾರರು ಮಾತ್ರ ಆಗಿದ್ದರೆ, ಅವರನ್ನು ಜನತೆ ಕ್ರಮೇಣ ಮರೆಯುತ್ತಿತ್ತೋ ಏನೋ! ಆದರೆ, ಅವರ ಹೆಸರನ್ನು ಅವರ ಸಾಹಿತ್ಯ ಕೃತಿಗಳು ಬಹು ಕಾಲ ಜೀವಂತವಾಗಿಡುತ್ತವೆ.

ಸಿದ್ದವನಹಳ್ಳಿಯ ನಿಜಲಿಂಗಪ್ಪನವರನ್ನು ಹೇಗೆ ಮರೆಯಲಾಗುವುದಿಲ್ಲವೋ, ಅಂತೆಯೇ ಅದೇ ಸಿದ್ದವನಹಳ್ಳಿಯ ಕೃಷ್ಣಶರ್ಮರನ್ನೂ ಮರೆಯುವುದು ಕಷ್ಟ. ಸಮಾಜವನ್ನು ಕುರಿತು ಇಬ್ಬರೂ ಸಮಾನ ಕುತೂಹಲಿಗಳು ಮತ್ತು ಆಸಕ್ತರು. ಸಿದ್ದವನಹಳ್ಳಿ ಕೃಷ್ಣಶರ್ಮರು ಸ್ವಾತಂತ್ರ್ಯ ಸಂಗ್ರಾಮ, ಕರ್ನಾಟಕ ಏಕೀಕರಣ ಮತ್ತು ಹೈದರಾಬಾದ್ ವಿಮೋಚನಾ ಚಳುವಳಿಗಳಲ್ಲಿ ಭಾಗವಹಿಸಿದ್ದುದನ್ನು ಅವರ ಸಾಹಿತ್ಯಿಕ ಮತ್ತು ಸಾಮಾಜಿಕ ಕೆಲಸಗಳು ಮರೆ ಮಾಡಿವೆ.

ತೆಲುಗು ವೈದಿಕ ಮನೆತನಕ್ಕೆ ಸೇರಿದ ಶರ್ಮಾಜಿ ಅವರ ಮನೆತನದ ಭಾಷೆ ತೆಲುಗು. ತೆಲುಗು ಮಾತೃಭಾಷೆಯ ಹಲವು ಕನ್ನಡ ಸಾಹಿತಿಗಳು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಮಾಡಿರುವ ಸಾಧನೆ ಅನುಕರಣೀಯ: ಅದು ತ.ರಾ.ಸು. ಇರಬಹುದು; ವೀರಕೇಸರಿ ಸೀತಾರಾಮಶಾಸ್ತ್ರಿಗಳಾಗಿರಬಹುದು ಅಥವಾ ದೇವುಡು ನರಸಿಂಹಶಾಸ್ತ್ರಿ ಆಗಿರಬಹುದು. ಎಲ್ಲರೂ ಕನ್ನಡ ಕಾದಂಬರಿ ಕ್ಷೇತ್ರದಲ್ಲಿ ಮಹಾಸಾಧಕರು. ಕಾದಂಬರಿ ಕ್ಷೇತ್ರದಲ್ಲಿ ಅಲ್ಲವಾದರೂ ಗದ್ಯ ಸಾಹಿತ್ಯ ಕ್ಷೇತ್ರದಲ್ಲಿ ಅವರ ಸಾಲಿನಲ್ಲಿ ನಿಲ್ಲಬಲ್ಲವರು ಸಿದ್ದವನಹಳ್ಳಿ ಕೃಷ್ಣಶರ್ಮ. ಕೃಷ್ಣಶರ್ಮ ಮತ್ತು ತಿ. ತಾ. ಶರ್ಮ ಇಬ್ಬರೂ ಬಂಧುಗಳು ಮತ್ತು ಸಮಾನ ಆಸಕ್ತರು. ಇಬ್ಬರಲ್ಲೂ ಸಮಾನ ಅನ್ನುವ ಅನೇಕ ಅಂಶಗಳನ್ನು ಗುರುತಿಸಬಹುದು.

ಸಿದ್ದವನಹಳ್ಳಿಯಲ್ಲೇ ಪ್ರಾಥಮಿಕ ಶಿಕ್ಷಣವನ್ನು ಪಡೆದ ಶರ್ಮರು ನಂತರ ತಮ್ಮ ವಿದ್ಯಾಭ್ಯಾಸವನ್ನು ಚಿತ್ರದುರ್ಗ ಮತ್ತು ಮೈಸೂರುಗಳಲ್ಲಿ ಮುಂದುವರಿಸಿ, ಪ್ರಥಮ ಬಿ. ಎ. ತರಗತಿಯವರೆಗೆ ಕಲಿತರು. ಅದು ಅವರ ಶಾಲೆ ಮತ್ತು ಕಾಲೇಜುಗಳ ಓದು; ಆದರೆ, ಅವರು ಇಡೀ ಬದುಕನ್ನೇ ತಮ್ಮ ಕಲಿಕೆಯ ಶಾಲೆ ಮಾಡಿಕೊಂಡಿದ್ದರು ಮತ್ತು ಅದರಲ್ಲಿ ಅವರು ತಮ್ಮ ಅಧ್ಯಯನವನ್ನು ನಿರಂತರವಾಗಿ ಮುಂದುವರಿಸಿದರು. ಹೈದರಾಬಾದ್‌ನ ಮೆಥಾಡಿಸ್ಟ್ ಶಾಲೆಯಲ್ಲಿ ಕೆಲವು ಕಾಲ ಅಧ್ಯಾಪನ ವೃತ್ತಿಯನ್ನೂ ಮಾಡಿದ ಶರ್ಮರು ತಮ್ಮ ಈ ಅಧ್ಯಾಪನ ವೃತ್ತಿಯನ್ನು ಬದುಕಿನುದ್ದಕ್ಕೂ ಸಮಾಜದಲ್ಲಿ ಮುಂದುವರಿಸಿದರು. ಅದರಿಂದಾಗಿಯೇ ಇಂದಿಗೂ ಅವರನ್ನು ಗುರು ಎಂದು ಪರಿಗಣಿಸುವ ಅನೇಕರು ಸರಳ ಹಾಗೂ ಸಾಮಾಜಿಕ ಬದ್ಧತೆಯ ಬದುಕಿಗೆ ತಮ್ಮನ್ನು ತಾವು ಒಪ್ಪಿಸಿಕೊಂಡಿದ್ದಾರೆ. ಇದೇ ಶರ್ಮಾಜಿಯವರ ಬಹು ದೊಡ್ಡ ಸಾಧನೆ.

ತಿಲಕರ ಸಾವು ಭಾರತಾದ್ಯಂತ ನೋವನ್ನು ಹರಡಿತು. ಆ ನೋವಿನಿಂದ ನೊಂದ ಜನರು ಸ್ವಾತಂತ್ರ್ಯಕ್ಕಾಗಿ ತೀವ್ರವಾಗಿ ಹಂಬಲಿಸಿದರು. ಮುಖ್ಯ ನಗರಗಳಲ್ಲಿ ಮೆರವಣಿಗೆಗಳು ನಡೆದವು. ಆ ಸಂದರ್ಭ ಮೈಸೂರಿನಲ್ಲಿ ನಡೆದ ಒಂದು ಮೆರವಣಿಗೆಯಲ್ಲಿ ಪಾಲ್ಗೊಳ್ಳುವುದರ ಮೂಲಕ ಶರ್ಮರು ಹೆಜ್ಜೆಯಿಟ್ಟರು. ಭಾರತದ ಸ್ವಾತಂತ್ರ್ಯ ಹೋರಾಟಕ್ಕೆ ಪ್ರೇರಣೆ ನೀಡಿದ ಹಲವು ಪ್ರಮುಖರ ಪೈಕಿ ತಿಲಕರ ಪಾತ್ರ ಬಹು ಮಹತ್ವದ್ದು.

ಸಿದ್ದವನಹಳ್ಳಿ ಕೃಷ್ಣಶರ್ಮರಿಗೆ ಪಂಡಿತ ತಾರಾನಾಥರ ಪ್ರಭಾವವೂ ಆಗಿತ್ತು. ತಾರಾನಾಥರ ಆಶ್ರಮದಲ್ಲಿ ಹಲವು ಕಾಲ ಇದ್ದ ಶರ್ಮರು, ಹೈದರಾಬಾದ್‌ನ ಮೆಥಾಡಿಸ್ಟ್ ಶಾಲೆಯಲ್ಲಿ ಅಧ್ಯಾಪಕ ವೃತ್ತಿ ಮಾಡುತ್ತಿದ್ದಾಗಲೇ ಹೈದರಾಬಾದ್‌ನ ನಿಜಾಮನ ಆಡಳಿತದ ವಿರುದ್ಧ ಹಲವು ಲೇಖನಗಳನ್ನು ಬರೆದು ಪ್ರಕಟಿಸುವ ಸಾಹಸ ಮಾಡಿದರು. ಬ್ರಿಟಿಷ್ ಆಡಳಿತದ ಪ್ರದೇಶಗಳಲ್ಲಿ ಬ್ರಿಟಿಷ್ ಆಡಳಿತವನ್ನು ಟೀಕಿಸಿ ಲೇಖನಗಳನ್ನು ಬರೆಯುವುದು ಸಾಹಸದ ಮಾತೇನೂ ಆಗಿರಲಿಲ್ಲ. ಅದು ಸಹಜ ವಿರೋಧ ಎನಿಸಿಕೊಳ್ಳುತ್ತಿತ್ತು. ಆದರೆ, ಆ ಕಾಲಕ್ಕೆ ನಿಜಾಮ್ ಸರ್ಕಾರದಲ್ಲಿ ಕ್ರೌರ್ಯ ಮನೆಮಾತಾಗಿತ್ತು. ಆಡಳಿತ ಯಂತ್ರದ ಬಗ್ಗೆ ಯಾವುದೇ ಆಕ್ಷೇಪಣೆಯೂ ಶಿಕ್ಷಾರ್ಹ ಅಪರಾಧವಾಗುತ್ತಿತ್ತು. ಅಂತಹ ಹೊತ್ತಿನಲ್ಲಿ ನಿಜಾಮನ ಆಡಳಿತ ಕೇಂದ್ರದಲ್ಲೇ ಇದ್ದುಕೊಂಡು, ಅದೇ ಆಡಳಿತವನ್ನು ಆಕ್ಷೇಪಿಸುವುದು ಸಾಹಸದ ಮಾತೇ ಆಗಿತ್ತು. ಸಿಕಂದರಾಬಾದ್‌ನಲ್ಲಿ ಕೋಲಾರದ ತಾತಾಚಾರ್ಯರು ಆರಂಭಿಸಿದ್ದ ರಾಜಕೀಯ ಮತ್ತು ಸಾಮಾಜಿಕ ಜಾಗೃತಿಯ ಕೆಲಸದಲ್ಲಿ ತೊಡಗಿಕೊಂಡ ಶರ್ಮರು ನಿಜಾಮನ ಆಡಳಿತವನ್ನು ಟೀಕಿಸುವುದು ಸುಲಭವಾಗಿತ್ತು. ಏಕೆಂದರೆ, ಆಗ ಸಿಕಂದರಾಬಾದ್ ಬ್ರಿಟಿಷರ ಆಡಳಿತ ವ್ಯಾಪ್ತಿಯಲ್ಲಿತ್ತು. ಆ ಕಾಲಕ್ಕೆ ಸಾಹಿತ್ಯಿಕ ಕಾರ್ಯಕ್ರಮಗಳ ಮೂಲಕ ಜನರಲ್ಲಿ ಜಾಗೃತಿ ಮೂಡಿಸುತ್ತಿದ್ದ ಹೈದರಾಬಾದ್‌ನ ಕನ್ನಡ ಸಾಹಿತ್ಯ ಮಂದಿರದ ಬಹುತೇಕ ಕಾರ್ಯಕ್ರಮಗಳಲ್ಲಿ ಶರ್ಮರ ಪಾತ್ರ ಇರುತ್ತಿತ್ತು. ೧೯೩೮ರಲ್ಲಿ ಹೈದರಾಬಾದ್ ತಂತಿ ಕಛೇರಿಯ ಮುಂದೆ ನಡೆದ ಮೊದಲ ಸತ್ಯಾಗ್ರಹವನ್ನು ಸಂಘಟಿಸಿದ ಶರ್ಮರು ಮೋತಿಲಾಲ್ ನೆಹರೂ ಅವರ ನಿಧನದ ಮೊದಲ ವಾರ್ಷಿಕ ಸಭೆಯಲ್ಲಿ ಭಾಷಣ ಮಾಡಿದರು. ನಿಜಾಮ್ ಸರ್ಕಾರ ಶರ್ಮರನ್ನು ಬಂಧಿಸಲು ಮಾಡಿದ ಪ್ರಯತ್ನಗಳೆಲ್ಲ ವಿಫಲವಾಗಿ, ಕೊನೆಗೆ ಗಡೀಪಾರು ಶಿಕ್ಷೆ ವಿಧಿಸಿತು.

ಗಡೀಪಾರಿನ ಸಮಯದಲ್ಲಿ ವಾರ್ಧಾಕ್ಕೆ ಹೋಗಿ, ಅಲ್ಲಿ ಗಾಂಧೀಜಿಯವರ ಜೊತೆಗಿದ್ದ ಶರ್ಮರು ಪಡೆದ ಅನುಭವ ಅವರನ್ನು ಅವರ ಇಡೀ ಜೀವನದ ಉದ್ದಕ್ಕೂ ನಡೆಸಿತು. ಅವರ ವಾರ್ಧಾ ಅನುಭವಗಳು ಅವರ ಕೃತಿಗಳಲ್ಲಿ ಅಭಿವ್ಯಕ್ತಿಗೊಂಡಿವೆ. ಮೋತಿಲಾಲ್ ನೆಹರೂ ಅವರ ಅಧ್ಯಕ್ಷತೆಯಲ್ಲಿ ರಚಿತವಾಗಿದ್ದ ರಾಜ್ಯ ಪುನರ್ವಿಂಗಡಣಾ ಆಯೋಗದಲ್ಲಿ ಮೂರು ವರ್ಷಗಳ ಕಾಲ ಮೋತಿಲಾಲರಿಗೆ ಕಾರ್ಯದರ್ಶಿಯೂ ಆಗಿದ್ದ ಶರ್ಮರು ೧೯೪೨ರ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಭಾಗವಹಿಸಿ, ಸೆರೆಮನೆಯ ಶಿಕ್ಷೆಗೂ ಗುರಿಯಾದರು. ಕರ್ನಾಟಕ ಏಕೀಕರಣ ಚಟುವಟಿಕೆಗಳಲ್ಲೂ ಪಾಲುಗೊಂಡರು. ಮೈಸೂರು ಸಂಸ್ಥಾನದಲ್ಲಿ ಡಾ॥ ಬಿ. ಶಿವಮೂರ್ತಿ ಶಾಸ್ತ್ರಿ ಅವರೊಂದಿಗೆ

**ಡಾ॥ ಎಚ್. ಎಸ್. ಗೋಪಾಲ ರಾವ್**

ಹಲವು ಸ್ಥಳಗಳಿಗೆ ಹೋಗಿ, ಏಕೀಕರಣದ ಔಚಿತ್ಯದ ಬಗ್ಗೆ ಜನರಿಗೆ ಮನವರಿಕೆ ಮಾಡಿದರು.

ಸಿದ್ದವನಹಳ್ಳಿ ಕೃಷ್ಣಶರ್ಮರು ಕನ್ನಡ ಪತ್ರಿಕೋದ್ಯಮದಲ್ಲೂ ವಿಶೇಷ ಹಾಗೂ ಮಹತ್ವದ ಸಾಧನೆ ಮಾಡಿದ್ದಾರೆ. ವಾರ್ಧಾದಲ್ಲಿನ ಅನುಭವ ಮತ್ತು ಗಾಂಧೀಜಿಯವರ ಪ್ರಭಾವದಿಂದಾಗಿ ಕನ್ನಡದಲ್ಲಿ 'ಹರಿಜನ' ಪತ್ರಿಕೆಯನ್ನು ಪ್ರಕಟಿಸಿದರು. ತಿ. ತಾ. ಶರ್ಮರ 'ವಿಶ್ವ ಕರ್ನಾಟಕ' ಪತ್ರಿಕೆಗೂ ಕೆಲಸ ಮಾಡಿದ ಕೃಷ್ಣಶರ್ಮರು ಅಲ್ಲಿನ ಕೆಲವು ಲೇಖನಗಳಿಂದ ಜನಪ್ರಿಯರಾದರು. ಅಲ್ಲಿಂದಲೇ ಅವರ ಗದ್ಯ ಶೈಲಿ ಹೆಚ್ಚು ಮನ್ನಣೆ ಪಡೆಯಿತು. ಸ್ವಲ್ಪ ಕಾಲ 'ವಿಶ್ವ ಕರ್ನಾಟಕ' ಪತ್ರಿಕೆಯ ಸಂಪಾದಕರಾಗಿ ಕಾರ್ಯ ನಿರ್ವಹಿಸಿದರು.

'ಜಯ ಕರ್ನಾಟಕ', 'ವಾಹಿನಿ', 'ನವೋದಯ', 'ಭೂದಾನ', 'ಕನ್ನಡ ನುಡಿ' ಇತ್ಯಾದಿ ಹಲವು ಪತ್ರಿಕೆಗಳ ಸಂಪಾದಕತ್ವದ ಜವಾಬ್ದಾರಿ ಹೊತ್ತಿದ್ದ ಶರ್ಮರು ಅವೆಲ್ಲವನ್ನೂ ಹೇಗೆ ನಿಭಾಯಿಸಿದರು ಎಂದು ಕಲ್ಪನೆ ಮಾಡಿಕೊಳ್ಳುವುದೂ ಕಷ್ಟವಾಗುತ್ತದೆ. ಜೊತೆಗೆ ಹಲವು ಪತ್ರಿಕೆಗಳಿಗೆ ಅಂಕಣಕಾರರಾಗಿಯೂ ಶರ್ಮರು ಬರೆದಿದ್ದಾರೆ. ಇವರ ಕನ್ನಡ ಭಾಷಾ ಶೈಲಿಯಿಂದ ಪ್ರಭಾವಿತರಾಗಿದ್ದ ಅನೇಕ ಓದುಗರಿದ್ದರೆಂದು ತಿಳಿದವರು ಹೇಳುತ್ತಾರೆ. ಸಾಮಾನ್ಯವಾಗಿ ಪತ್ರಿಕೆಗಳಲ್ಲಿ ಅವರು ವಿವಿಧ ವಿಷಯಗಳನ್ನು ಕುರಿತು ಲೇಖನಗಳನ್ನು ಬರೆಯುತ್ತಿದ್ದರು. ಪ್ರಾಂತ ಭಾಷೆ ಕನ್ನಡ ಮತ್ತು ಮನೆತನದ ಭಾಷೆ ತೆಲುಗು ಅಲ್ಲದೆ ಶರ್ಮರಿಗೆ ಸಂಸ್ಕೃತ, ಇಂಗ್ಲಿಷ್, ಹಿಂದಿ, ಉರ್ದು, ತಮಿಳು ಮತ್ತು ಬಂಗಾಳಿ ಭಾಷೆಗಳು ಚೆನ್ನಾಗಿ ತಿಳಿದಿದ್ದುವು.

ಸಿದ್ದವನಹಳ್ಳಿ ಕೃಷ್ಣಶರ್ಮರು ಸಂಪರ್ಕ ಇರಿಸಿಕೊಂಡಿದ್ದ ಸಂಘ-ಸಂಸ್ಥೆಗಳು ಹಲವಾರು. ಈಗಾಗಲೇ ಪ್ರಸ್ತಾಪಿಸಿರುವಂತೆ ಹೈದರಾಬಾದ್‌ನ ಕನ್ನಡ ಸಾಹಿತ್ಯ ಮಂದಿರದ ಜೊತೆಗೆ ಶರ್ಮರಿಗೆ ಮೊದಲಿನಿಂದಲೂ ನಂಟಿತ್ತು. ಬೆಂಗಳೂರಿಗೆ ಬಂದ ನಂತರ ಕನ್ನಡ ಸಾಹಿತ್ಯ ಪರಿಷತ್ತಿನ ಸಂಪರ್ಕ ಪಡೆದ ಶರ್ಮರು ಎರಡು ವರ್ಷಗಳ ಅವಧಿಗೆ ಪರಿಷತ್ತಿನ ಕಾರ್ಯದರ್ಶಿಯಾಗಿಯೂ ಕಾರ್ಯ ನಿರ್ವಹಿಸಿದರು. ಇವೆಲ್ಲದರ ಜೊತೆಗೆ ಅವರೇ ಕಟ್ಟಿ, ಬೆಳೆಸಿದ ಸಂಸ್ಥೆಗಳು ಮುಖ್ಯವಾಗಿ ಎರಡು. ಅವುಗಳೆಂದರೆ, ಬೆಂಗಳೂರಿನ ಮಲ್ಲೇಶ್ವರದ ಎಂಟನೆಯ ಅಡ್ಡ ರಸ್ತೆಯಲ್ಲಿ ಈಗಲೂ ಸಾರ್ಥಕ ಕಾರ್ಯ ಮಾಡುತ್ತಿರುವ ಗಾಂಧೀ ಸಾಹಿತ್ಯ ಸಂಘ, ಶ್ರೀರಾಮ ಕೋಆಪರೇಟಿವ್ ಸೊಸೈಟಿ ಮತ್ತು ಆಂಜನೇಯ ಕೋಆಪರೇಟಿವ್ ಬ್ಯಾಂಕ್. ಇಂದಿಗೂ ಸರಳವಾಗಿ ಸಭೆ, ಸಮಾರಂಭಗಳನ್ನು ನಡೆಸುತ್ತಾ, ಅಂತಹುದೇ ಸಭೆ, ಸಮಾರಂಭಗಳಿಗೆ ಅವಕಾಶಗಳನ್ನೂ ಕಲ್ಪಿಸುತ್ತಾ, ಮಲ್ಲೇಶ್ವರದ ಆಸುಪಾಸಿನಲ್ಲಿ ಸಾಹಿತ್ಯ ಮತ್ತು ಸಾಂಸ್ಕೃತಿಕ ವಾತಾವರಣವನ್ನು ಹಸಿರಾಗಿಡುವುದರಲ್ಲಿ ಗಾಂಧೀ ಸಾಹಿತ್ಯ ಸಂಘದ ಪಾತ್ರ ವಿಶೇಷವಾದುದು. ಶರ್ಮರೊಡನೆ ಕೈ ಜೋಡಿಸಿ ಕೆಲಸ ಮಾಡಿದ್ದ ಹಲವರು ಇಂದಿಗೂ ಅವರ ನೆನಪಿನಲ್ಲೇ, ಅವರು ಆರಂಭಿಸಿದ್ದ ಕೆಲಸಗಳನ್ನು ಮುಂದುವರಿಸಿಕೊಂಡುಬಂದಿದ್ದಾರೆ. ಗಾಂಧೀ ಸಾಹಿತ್ಯ ಸಂಘವು ಹೆಸರಿಗೆ ತಕ್ಕಂತೆ ಗಾಂಧೀಜಿ ಅವರ ಆದರ್ಶಗಳನ್ನು ಮುಂದುವರಿಸಿಕೊಂಡು ಬಂದಿದೆ.

ಸಿದ್ದವನಹಳ್ಳಿ ಕೃಷ್ಣಶರ್ಮರು ಮಲ್ಲೇಶ್ವರದ ಶ್ರೀರಾಮ ಮಂದಿರದ ಉಪಾಧ್ಯಕ್ಷರಾಗಿದ್ದಾಗ, ಬಡವರು ತಮ್ಮ ಆರ್ಥಿಕ ತೊಂದರೆಗಳನ್ನು ತಾತ್ಕಾಲಿಕವಾಗಿ ಬಗೆಹರಿಸಿಕೊಳ್ಳಲು ಚೀಟಿ ವ್ಯವಹಾರ ನಡೆಸುತ್ತಿದ್ದರು. ದುಬಾರಿ ಬಡ್ಡಿ ನೀಡಿ ಚೀಟಿಯ ಮೂಲಕ ಹಣ ಪಡೆಯುತ್ತಿದ್ದ ಬಡ ಕಾರ್ಮಿಕರ ಅನುಕೂಲಕ್ಕೆ ಏನಾದರೂ ಸೂಕ್ತ ವ್ಯವಸ್ಥೆ ಮಾಡಬೇಕು ಎಂದು ಆಲೋಚಿಸಿದ ಶರ್ಮರ ಎದುರಿಗೆ ಕಂಡದ್ದು ಮಲ್ಲೇಶ್ವರಂ ಕೋ ಆಪರೇಟಿವ್ ಸೊಸೈಟಿ. ಇದು ಮೇಲ್ವರ್ಗದ ಜನರ ಕಷ್ಟಕ್ಕೆ ಮಾತ್ರ ನೆರವಾಗುತ್ತಿದೆ ಎಂದು ತಿಳಿದ ಶರ್ಮರು, ಮಲ್ಲೇಶ್ವರ ಮತ್ತು ಅದಕ್ಕೆ ಹೊಂದಿಕೊಂಡ ಪ್ರದೇಶಗಳಲ್ಲಿ ವಾಸ ಇದ್ದ ಕಾರ್ಮಿಕರ ಅನುಕೂಲಕ್ಕೆಂದು ಸ್ಥಾಪಿಸಿದ ಸಂಸ್ಥೆಯೇ ಶ್ರೀರಾಮ ಕೋ ಆಪರೇಟಿವ್ ಸೊಸೈಟಿ. ಆರಂಭದ ಹದಿನೈದು ವರ್ಷಗಳ ಕಾಲ ಶರ್ಮರೇ ಶ್ರೀರಾಮ ಕೋ ಆಪರೇಟಿವ್ ಸೊಸೈಟಿಯ ಅಧ್ಯಕ್ಷರಾಗಿದ್ದರು. ಸಂಸ್ಥೆಯ ದಶವಾರ್ಷಿಕ ಸಮಾರಂಭದ ಸಮಯದಲ್ಲಿ ಸಂಸ್ಥೆಗೆ ಐದು ಲಕ್ಷ ರೂಪಾಯಿಗಳ ಸಹಾಯ ಧನ ನೀಡಲು ಆಗಿನ ಸರ್ಕಾರವು ಮುಂದೆ ಬಂದಾಗ, ಅದನ್ನು ನೇರವಾಗಿ ನಿರಾಕರಿಸಿ, ಸರ್ಕಾರದ ಕೃಪಾಕಟಾಕ್ಷಕ್ಕೆ ಬೀಳದೆ ಸದಸ್ಯರ ಬಲದ ಮೇಲೆಯೇ ಸಂಸ್ಥೆಯನ್ನು ಕಟ್ಟಿ ಬೆಳೆಸುವ ತೀರ್ಮಾನ ತೆಗೆದುಕೊಂಡ ಸಾತ್ವಿಕ ಜೀವ ಶರ್ಮರದು. ಶ್ರೀರಾಮ ಕೋ ಆಪರೇಟಿವ್ ಸೊಸೈಟಿಯ ಸ್ಥಾಪನೆ ಆದ ೧೦ ವರ್ಷಗಳ ನಂತರ ಶರ್ಮರು ಸ್ಥಾಪಿಸಿದ ಮತ್ತೊಂದು ಸಂಸ್ಥೆಯೇ ಆಂಜನೇಯ ಕೋ ಆಪರೇಟಿವ್ ಬ್ಯಾಂಕ್. ಸಮಾಜದ ಮುನ್ನಡೆಗೆ ಶ್ರಮಿಸಿದ ಸಾರ್ಥಕ ಜೀವಿ ಹಾಗೂ ಯಾವುದೇ ಕೆಲಸಕ್ಕೆ ಕೈಹಾಕಿದರೂ ಸಾಧಿಸುವುದರಲ್ಲಿ ಸಿದ್ಧಹಸ್ತರಾಗಿದ್ದವರು ಸಿದ್ದವನಹಳ್ಳಿ ಕೃಷ್ಣಶರ್ಮರು. ಆದ್ದರಿಂದಲೇ ಅವರ ಅಭಿಮಾನಿಗಳು ಅವರಿಗೆ ಒಪ್ಪಿಸಿದ ಸಂಭಾವನಾ

**ಸಿದ್ದವನಹಳ್ಳಿಯ ನಿಜಲಿಂಗಪ್ಪನವರನ್ನು ಹೇಗೆ ಮರೆಯಲಾಗುವುದಿಲ್ಲವೋ, ಅಂತೆಯೇ ಅದೇ ಸಿದ್ದವನಹಳ್ಳಿಯ ಕೃಷ್ಣಶರ್ಮರನ್ನೂ ಮರೆಯುವುದು ಕಷ್ಟ. ಸಮಾಜವನ್ನು ಕುರಿತು ಇಬ್ಬರೂ ಸಮಾನ ಕುತೂಹಲಿಗಳು ಮತ್ತು ಆಸಕ್ತರು.**

ಗ್ರಂಥದ ಹೆಸರು 'ಸಿದ್ಧಹಸ್ತ'. ಅವರು ಸ್ಥಾಪಿಸಿದ ಎಲ್ಲ ಸಂಸ್ಥೆಗಳೂ ಸಾರ್ಥಕವಾಗಿವೆ. ಮಲ್ಲೇಶ್ವರದ ಜನರು ಅಕಸ್ಮಾತ್ತಾಗಿ ಕಾಡು ಮಲ್ಲೇಶ್ವರನನ್ನು ಮರೆತರೂ ೮ನೆಯ ಕ್ರಾಸಿನ ಗಾಂಧೀ ಸಾಹಿತ್ಯ ಸಂಘವನ್ನು ಮರೆಯುವಂತಿಲ್ಲ. ಇಂದಿನ ವಿದ್ಯಾರ್ಥಿ ಪೀಳಿಗೆಗೂ ಗಾಂಧೀ ಸಾಹಿತ್ಯ ಸಂಘ ಗೊತ್ತು. ವಿವಿಧ ವರ್ಗದ ವಿದ್ಯಾರ್ಥಿಗಳಿಗೆಂದೇ ಗಾಂಧೀ ಸಾಹಿತ್ಯ ಸಂಘವು ಸಾಹಿತ್ಯಿಕ ಸ್ಪರ್ಧೆಗಳನ್ನು ನಡೆಸಿ, ಬೆಳೆಯಲು ಪ್ರೋತ್ಸಾಹ ನೀಡಿ, ಶರ್ಮರು ಜನತೆಯಲ್ಲಿ ಇಟ್ಟಿದ್ದ ಭರವಸೆಯು ಹುಸಿಯಾಗದಂತೆ ಗಮನ ಹರಿಸುತ್ತಿದೆ.

ಸಾಹಿತಿಯಾಗಿ ಶರ್ಮರನ್ನು ಕನ್ನಡ ಓದುಗರು ಎಂದಿಗೂ ಮರೆಯಲು ಸಾಧ್ಯವಿಲ್ಲ. ಅವರ ಯಾವುದೇ ಒಂದು ಬರಹದ ಪರಿಚಯವಾದ ಯಾವ ಓದುಗನೇ ಆದರೂ ಶರ್ಮರನ್ನು ಮರೆಯುವ ಪ್ರಸಂಗ ಬರುವುದೇ ಇಲ್ಲ. ಅವರ ಮೊದಲ ಕೃತಿ ಯತಿರಾಜ ರಾಮಾನುಜ. ನಂತರ ಅವರು ಬರೆದ ಪರ್ಣಕುಟಿ ಮತ್ತು ವಾರ್ಧಾ ಯಾತ್ರೆ ಕೃತಿಗಳು ಅವರನ್ನು ಸಾಹಿತಿಯನ್ನಾಗಿ ಬೆಳೆಸಿದುವು.

ಪರ್ಣಕುಟಿ ಮತ್ತು ವಾರ್ಧಾಯಾತ್ರೆಗಳಲ್ಲಿ ಶರ್ಮರಿಗೆ ಆಗಿದ್ದ ಗಾಂಧೀಜಿ ಅವರ ಪ್ರಭಾವ ತಿಳಿಯುತ್ತದೆ. ಆ ಎರಡೂ ಕೃತಿಗಳು ಶರ್ಮರಿಗೆ ಗದ್ಯ ಶೈಲಿಯಲ್ಲಿ ದೊರೆತಿದ್ದ ಸಿದ್ಧಿಯನ್ನು ಪರಿಚಯಿಸುತ್ತವೆ. ಮಹಾತ್ಮಾ ಗಾಂಧಿ ಅವರಂತೆಯೇ ಅವರ ಮೇಲೆ ಪ್ರಭಾವ ಬೀರಿದ್ದ ಮತ್ತೊಬ್ಬ ವ್ಯಕ್ತಿ ವಿನೋಬಾ ಭಾವೆ. ಅವರ ಪ್ರೇರಣೆಯಿಂದ ಬರೆದ ನವೋದಯ ಯಾತ್ರೆ ಮತ್ತು ಭೂದಾನ ಕೃತಿಗಳು ಭೂದಾನದ ಮಹತ್ವ ಮತ್ತು ಔಚಿತ್ಯವನ್ನು ಕುರಿತು ಪ್ರಸ್ತಾಪಿಸಿವೆ. ವಿನೋಬಾ ಅವರ ಗೀತಾ ಪ್ರವಚನವನ್ನು ಶರ್ಮರು ಕನ್ನಡಕೆ ಅನುವಾದಿಸಿ, ಕನ್ನಡ ಓದುಗರಿಗೆ ಉಪಕಾರ ಮಾಡಿದ್ದಾರೆ. ಬೆಂಗಳೂರಿನಲ್ಲಿ ವಿನೋಬಾ, ಕನ್ನಡದ ಕಿಡಿಗಳು, ದೀಪಮಾಲೆ, ಕುಲ ದೀಪಕರು ಇವರ ಇನ್ನೂ ಕೆಲವು ಕೃತಿಗಳು. ರಾಜೇಂದ್ರಪ್ರಸಾದ್, ಮೋತಿಲಾಲ್ ನೆಹರೂ, ಜವಹರಲಾಲ್ ನೆಹರೂ, ಕಸ್ತೂರ ಬಾ ಇವು ಇವರು ಬರೆದಿರುವ ಜೀವನ ಚರಿತ್ರೆಗಳು.

ಅನುವಾದ ಎನ್ನುವುದು ಒಂದು ಕಲೆ ಎನ್ನುವ ಮಾತಿಗೆ ಸಿದ್ದವನಹಳ್ಳಿ ಕೃಷ್ಣಶರ್ಮರ ಅನುವಾದಗಳು ಉತ್ತಮ ಉದಾಹರಣೆ. ಗಾಂಧೀಜಿ ಅವರ ಹಿಂದ್ ಸ್ವರಾಜ್, ಆರೋಗ್ಯ ರಹಸ್ಯ, ಸಂವಾದ ಮಾಲೆ, ಆತ್ಮಕಥೆ, ಮೀನೂ ಮಸಾನಿ ಅವರ ನಮ್ಮ ಹಿಂದೂಸ್ಥಾನ, ಆಚಾರ್ಯ ಕೃಪಲಾನಿ ಅವರ ಮೂಲ ಶಿಕ್ಷಣಗಳನ್ನು ಶರ್ಮರು ಅನುವಾದಿಸಿದ್ದಾರೆ. ಅವರು ಅನುವಾದಿಸಿರುವ ಮತ್ತೊಂದು ಅಮೂಲ್ಯ ಕೃತಿ ಜವಹರಲಾಲ್ ನೆಹರೂ ಅವರ 'ಗ್ಲಿಂಪ್ಸಸ್ ಆಫ್ ವರ್ಲ್ಡ್ ಹಿಸ್ಟರಿ'. 'ಜಗತ್ ಕಥಾವಲ್ಲರಿ' ಎಂಬ ಹೆಸರಿನ ಈ ಅನುವಾದವು ಅವರಿಗೆ ಇಂಗ್ಲಿಷ್ ಮತ್ತು ಕನ್ನಡ ಭಾಷೆಗಳ ಮೇಲೆ ಇದ್ದ ಅಗಾಧ ಹಿಡಿತವನ್ನು ಮನದಟ್ಟುಮಾಡುತ್ತದೆ.

ಜವಹರಲಾಲ್ ನೆಹರೂ ಅವರ 'ಗ್ಲಿಂಪ್ಸಸ್ ಆಫ್ ವರ್ಲ್ಡ್ ಹಿಸ್ಟರಿ'ಯ ೧೦೩ನೆಯ ಪತ್ರದ ಕೊನೆಯ ಪ್ಯಾರಾದ ಅನುವಾದಿತ ಭಾಗವನ್ನು ಮೂಲ ಪಠ್ಯ ಸಹಿತ ಈ ಕೆಳಗೆ ನೀಡಲಾಗಿದೆ. ಇದರಿಂದ ಶರ್ಮರ ನುರಿತ ಅನುವಾದದ ಪರಿಚಯ ಆಗುತ್ತದೆ.

ಇಂಗ್ಲಿಷ್ ಪಠ್ಯ: I intended telling you of Napolean in this letter. But my mind has wandered and my pen run on to other subjects, and Napolean still awaits inspection. He must await till the next letter.

ಕನ್ನಡ ಅನುವಾದ: ಈ ಪತ್ರದಲ್ಲಿ ನೆಪೋಲಿಯನ್ ವಿಷಯ ಹೇಳಬೇಕೆಂದಿದ್ದೆ. ಆದರೆ ನನ್ನ ಮನಸ್ಸು ಅತ್ತಿತ್ತ ಸುಳಿದಾಡಿತು: ಲೇಖನಿ - ಅನ್ಯ ವಿಷಯಗಳಲ್ಲಿ ಹರಿದೋಡಿತು. ನೆಪೋಲಿಯನ್ ಇನ್ನೂ ಕಾದಿದ್ದಾನೆ. ಮುಂದಿನ ಪತ್ರದವರೆಗೆ ಅವನು ನಮ್ಮ ಚಿತ್ತವನ್ನು ಕಾದಿರಬೇಕು.

ಶರ್ಮರು ಇಂದಿಗೂ ಮತ್ತು ಮುಂದಿಗೂ ಅನೇಕ ವಿಷಯಗಳಲ್ಲಿ ಅನುಕರಣೀಯರು.

ಡಾ|| ಎಚ್. ಎಸ್. ಗೋಪಾಲ ರಾವ್
'ಸ್ವಸ್ತಿಶ್ರೀ ಸ್ಕಂದ', ಅರಸಿನಕುಂಟೆ, ನೆಲಮಂಗಲ ತಾಲ್ಲೂಕು
ಬೆಂಗಳೂರು ಗ್ರಾಮಾಂತರ ಜಿಲ್ಲೆ - ೫೬೨ ೧೨೩

# ೨೦೦೩ರಲ್ಲಿ ಸರ್ ಎಂ. ವಿ. ಭಾರತಕ್ಕೆ ಭೇಟಿ

ಎ. ವಿ. ಶಂಕರರಾವ್

೨೦೦೩ರಲ್ಲಿ ಡಾ॥ ಎಂ. ವಿಶ್ವೇಶ್ವರಯ್ಯನವರು ಭಾರತಕ್ಕೆ ಭೇಟಿ ನೀಡಿದರೆನ್ನಿ. ದೇಶವನ್ನು ನೋಡಿ ಅವರಿಗೇನೆನ್ನಿಸಬಹುದು ? ಅಥವಾ ಮಹಾತ್ಮಾ ಗಾಂಧಿ ಬಂದು ನೋಡಿದರೆ ? ಇಬ್ಬರೂ ಗಾಢವಾದ ಭಾವನೆಗಳನ್ನು ತಾಳಿ ಪ್ರತಿಕ್ರಿಯಿಸುವುದು ನಿಸ್ಸಂದೇಹ. ಅವರು ದಂಗಾಗಿ, ತಾವು ಬದುಕಿ ಬಾಳಿದ ದೇಶ ಇದೇ ಏನು ಎಂದು ಹತಾಶರಾದಾರು. ಗಾಂಧೀಜಿ ೧೯೪೮ರಲ್ಲಿ ಮತ್ತು ಎಂ. ವಿ. ಏಪ್ರಿಲ್ ೧೯೬೨ರಲ್ಲಿ ನಿರ್ಗಮಿಸಿದ್ದು. ದೇಶವನ್ನು ಉತ್ತಮಗೊಳಿಸಲು ಇಬ್ಬರೂ ಬೇರೆಬೇರೆ ರೀತಿಗಳಲ್ಲಿ ಶ್ರಮಿಸಿ ಜನರ ಸೇವೆಗೆ ತಮ್ಮನ್ನು ಮುಡಿಪಾಗಿಟ್ಟುಕೊಂಡಿದ್ದರು. ಆದ್ದರಿಂದ ಹತಾಶೆಯು ಭಿನ್ನವಾಗಿರಲು ಸಾಧ್ಯ. ಗಾಂಧೀಜಿಗೆ ಜೀವನವೆಂಬುದು ಸತ್ಯದ ಅರಸುವಿಕೆ; ಅವರ ಸಾಮಾಜಿಕ-ಆರ್ಥಿಕ ಗುರಿ ಅಂತ್ಯೋದಯ. ಸರ್ ಎಂ. ವಿ. ಅವರದು ಸರಳ ಜೀವನ ಮತ್ತು ಉದಾತ್ತ ಚಿಂತನೆ. ಜನರ ಭೌತಿಕ ಜೀವನ ಉತ್ತಮಗೊಳ್ಳಬೇಕೆಂಬುದು ಅವರ ಆಶಯ. ಅವರ ತತ್ತ್ವವನ್ನು ಅವರ ಮಾತುಗಳಲ್ಲೇ ಹೇಳುವುದಾದರೆ, ''ನಮ್ಮ ಸುತ್ತಣ ಜನ ಆನಂದದಿಂದಿದ್ದರೆ ನಾವೂ ಸುಖಿಗಳಾಗುತ್ತೇವೆಂಬುದನ್ನು ಕೆಲವೊಮ್ಮೆ ಮರೆತುಬಿಡುತ್ತೇವೆ.''

ಸರ್ ಎಂ. ವಿ. ಅವರ ಸೂತ್ರ ಇದು : ''ಉತ್ತಮ ವ್ಯಕ್ತಿಗಳ ನಿರ್ಮಾಣವಾದರೆ ಉತ್ತಮ ದೇಶದ ರಚನೆಯಾಗುತ್ತದೆ.'' ಅವರು ಗತಿಸಿದ ೪೦ ವರ್ಷಗಳ ನಂತರ ನಮ್ಮ ದೇಶದ ಜನರ ವ್ಯಕ್ತಿತ್ವ ಕುಂಠಿತವಾಗಿರುವುದನ್ನು ಕಂಡು ಅವರಿಗೆ ಅತೀವ ಆಘಾತವಾದೀತು. ನಾಯಕರು, ಆಳುವವರು, ಶಿಕ್ಷಕರು, ಲೇಖಕರು, ಶಿಕ್ಷಿತರು, ಕಲಾವಿದರು, ವಕೀಲರು, ನ್ಯಾಯಮೂರ್ತಿಗಳು, ವೈದ್ಯರು, ಅಧಿಕಾರಿಗಳು, ವ್ಯಾಪಾರಸ್ಥರು, ಉದ್ಯಮಿಗಳು ಹೀಗೆ ಎಲ್ಲ ವೃತ್ತಿಯವರೂ ಆಪಾದನೆಯನ್ನು ಹೊರಬೇಕಾಗಿದೆ. ಎಲ್ಲಿಂದ ಮತ್ತು ಹೇಗೆ ಆರಂಭಿಸಿ ಈ ಕೊಳಕನ್ನು ತೊಳೆಯಬೇಕೆಂದು ವಿಶ್ವೇಶ್ವರಯ್ಯನವರಿಗೆ ಸವಾಲಾದೀತು.

ಸರ್ಕಾರಿ ನೌಕರರು ಕೆಲಸಕ್ಕೆ ಕ್ಲುಪ್ತವಾಗಿ ಹಾಜರಾಗಬೇಕೆಂದು ಅವರ ನಿರೀಕ್ಷೆಯಾಗಿತ್ತು. ಅದು ಅವರಿಂದ ಕನಿಷ್ಠ ನಿರೀಕ್ಷೆ. ಜೊತೆಗೆ ಅವರಿಗೆ ವಹಿಸಿದ ಕೆಲಸವನ್ನು ಅಚ್ಚುಕಟ್ಟಾಗಿ ಮಾಡಬೇಕು. ಇಂದು ಯಾವ ಕಚೇರಿಯು ಈ ಬಗ್ಗೆ ಹೆಮ್ಮೆಪಡಲು ಸಾಧ್ಯ ? ಅದರ ಕೆಲಸದಲ್ಲಿ ನ್ಯೂನತೆ ಇಲ್ಲವೆಂದು ಎಷ್ಟು ಕಚೇರಿಗಳು ಹೇಳಿಕೊಳ್ಳಬಲ್ಲವು ? ಕಚೇರಿಗಳು ದೊಡ್ಡದಾಗಿವೆ, ಬೇಕಾದಷ್ಟಕ್ಕಿಂತ ಹೆಚ್ಚು ನೌಕರರಿದ್ದಾರೆ, ಆವರಣ ಅಸ್ತವ್ಯಸ್ತವಾಗಿ ಕಾಣುತ್ತದೆ. ಸಾರ್ವಜನಿಕರ ಕೆಲಸದಲ್ಲಿ ನಿರಾಸಕ್ತಿ ಎದ್ದು ಕಾಣುತ್ತದೆ. ಅವರಿಗೆ ಅವರದೇ ಬೇರೆ ವ್ಯವಹಾರಗಳು. ''ನೀನು ಕೆಲಸ ಮಾಡದಿದ್ದರೆ ನೀನು ಉಣಲೂಬಾರದು'' ಎಂಬ ಮಂತ್ರವನ್ನು ಉಸಿರಾಗಿಸಿಕೊಂಡಿದ್ದ ಎಂ. ವಿ. ಅವರಿಗೆ ಇದು ತಲ್ಲಣದ ವಿಷಯವಾದೀತು.

ಭ್ರಷ್ಟಾಚಾರದಂತೆ ಸ್ವಜನ ಪಕ್ಷಪಾತ ಇಂದಿನ ಒಂದು ಪಿಡುಗು. ಇಂದು ವಶೀಲಿ ಮೂಲಕ ಸ್ವಾರ್ಥದ ಪೂರೈಕೆಗೆ ಕಪ್ಪುಚುಕ್ಕೆ ಅಂಟುವುದಿಲ್ಲ. ಸರ್ ಎಂ. ವಿ. ಕಾಲದಲ್ಲೂ ಅವು ಇದ್ದಿರ ಬಹುದು, ಆದರೆ ಸಮಾಜ ಅದನ್ನು ಅಸಹ್ಯವೆಂದು ಪರಿಗಣಿಸಿ ಎಂ. ವಿ. ಯವರಂತಹವರ ಆದರ್ಶಗಳನ್ನು ಮೈಗೂಡಿಸಿಕೊಳ್ಳಲು ಯತ್ನಿಸುತ್ತಿತ್ತು. ಇಂದಿನ ಭಾರತೀಯ ಸಮಾಜದಲ್ಲಿ ಅಂತಹ ಲಾಲಸೆ ಉಳಿದಿಲ್ಲ. ರಾಜಕಾರಣಿ, ಅಧಿಕಾರಿ, ಶ್ರೀಮಂತ, ಮಧ್ಯಮ ವರ್ಗದವರು ಹೀಗೆ ಗ್ರಾಮ ಮತ್ತು ನಗರಗಳಲ್ಲಿ ಎಲ್ಲರಿಗೂ ಈ ಪಿಡುಗು ತಟ್ಟಿದೆ.



ಇದೇ ಸೆಪ್ಟೆಂಬರ್ ೧೫ ಡಾ॥ ಎಂ. ವಿಶ್ವೇಶ್ವರಯ್ಯನವರ ೧೪೪ನೆಯ ಜನ್ಮದಿನ. ಈ 'ಭಾರತ ರತ್ನ'ರಿಗೆ ಹೊಸತು' ಪ್ರೀತಿಪುರಸ್ಸರವಾದ ಗೌರವ ಸಮರ್ಪಿಸುತ್ತದೆ

ಮೈಸೂರಿನ ದಿವಾನರಾಗಿ ಅಧಿಕಾರ ವಹಿಸಿಕೊಳ್ಳುವ ಮೊದಲು ಸರ್ ಎಂ. ವಿ. ತಮ್ಮ ನೆಂಟರನ್ನೆಲ್ಲಾ ಊಟಕ್ಕೆ ಕರೆದರು. ಆಕಾಂಕ್ಷೆಗಳನ್ನು ಚಿಗುರಿಸಿಕೊಂಡು ಎಲ್ಲಾ ಬಂದರು. ಆದರೆ ಹಿಂದಿರುಗುವಾಗ ಎಲ್ಲರೂ ಸಪ್ಪಗಾಗಿದ್ದರು. ಕೆಲವರಿಗೆ ಈರ್ಷೆ ಕೂಡ. ಏಕೆಂದರೆ ಊಟದ ನಂತರ ಎಂ. ವಿ. ಹೇಳಿದರು : ''ನೀವು ಯಾರೂ ನೌಕರಿ ಮುಂತಾದ ಅನುಕೂಲ ಪಡೆಯಲು ಬರುವುದಿಲ್ಲವೆಂದು ಆಶ್ವಾಸನೆ ನೀಡಿದರೆ ನಾನು ಈ ಅಧಿಕಾರ ವಹಿಸಿಕೊಳ್ಳುತ್ತೇನೆ.'' ಅವರ ಚಿಕ್ಕಪ್ಪನಿಗೂ ಇಂಥದೇ ಸೂಚನೆ ಕೊಟ್ಟಿದ್ದರು. ೨೦೦೩ರ ಭಾರತವನ್ನು ನೋಡಿದರೆ ಎಂ. ವಿ. ಹೌಹಾರದಿರಲು ಹೇಗೆ ತಾನೆ ಸಾಧ್ಯ !

ತಮ್ಮ ನೆಚ್ಚಿನ ಯೋಜನೆ ಕೃಷ್ಣರಾಜಸಾಗರದಡಿ ನೀರಾವರಿಯ ವೈಖರಿಯನ್ನವರು ಕಂಡಿದ್ದರೆ, ತಮ್ಮ ಹೆಸರಿನ ಕಾಲುವೆಯ ಸಿಂಹಾವಲೋಕನ ಮಾಡಿದ್ದರೆ, ಏನೆಂದಿದ್ದಾರು ? ಕಾಲುವೆಯಲ್ಲದೆ ಹಲವು ಕೆರೆಗಳು ಮತ್ತು ಒಳಗಾಲುವೆಗಳೂ ಈ ಆಯಕಟ್ಟಿಗೆ ಆಧಾರ. ಇಡೀ ಗ್ರಾಮಾಂತರ ಪ್ರದೇಶ ನೀರಿನಲ್ಲಿ ಅದ್ದಿದಂತಿದೆ. ನೀರಾವರಿಗೆ ಒಳಗಾದ ಭಾಗ ದ್ವಿಗುಣಗೊಂಡಿದೆ, ಎಲ್ಲೆಲ್ಲೂ ಕಬ್ಬಿನ ಬೆಳೆ. ಅವರು ಯೋಜಿಸಿದ್ದುದು ಹಾಗಲ್ಲ. ಅದು ಕಾಲುವೆಯ ಸನಿಹದ ಮೇಲ್ಭಾಗದಲ್ಲಿ ಮಾತ್ರ ಇರಬೇಕಾಗಿತ್ತು. ಈಗ ಮಧ್ಯೆ ಮತ್ತು ಕಡೆಯಲ್ಲೂ ಅದೇ ಬೆಳೆ! ಕಾಲುವೆಯಲ್ಲಿ ಹನ್ನೆರಡು ತಿಂಗಳೂ ನೀರು ಹರಿಯುತ್ತದೆ. ೧೯೦೮-೧೨ರಲ್ಲಿ ಅವರು ಮುಖ್ಯ ಇಂಜಿನಿಯರ್ ಆಗಿದ್ದಾಗ ಯೋಜನೆ ಹಾಕಿದ್ದುದೇ ಬೇರೆ. ಸಹಜವಾಗಿಯೇ ಇಂದು ಎಂ. ವಿ. ಆತಂಕಗೊಂಡಾರು. ನೀರನ್ನು ಪೋಲು ಮಾಡಿ, ಮಣ್ಣನ್ನು ಹಾಳುಗೆಡುವುದನ್ನು ಕಂಡು ಅವರಿಗೆ ಕೋಪ ಬಂದೀತು, ನಿಟ್ಟುಸಿರು ಬಿಟ್ಟಾರು. ಮಂಡ್ಯ ಜಿಲ್ಲೆಯ ಆರ್ಥಿಕ ಅಭಿವೃದ್ಧಿಯನ್ನು ಗಮನಿಸಿ ಶ್ರೀಮಂತರ ಹಿತಾಸಕ್ತಿಗಳ ರಕ್ಷಣೆ ಹಾಗೂ ಅಧಿಕ ಸಂಖ್ಯೆ ಭೂರಹಿತರ ಮತ್ತು ಕೃಷಿಕಾರ್ಮಿಕರ ಬವಣೆ ಕಂಡು ಮರುಗಿಯಾರು.




ಅವರ ಹೆಸರಿನ ಉಕ್ಕು ಮತ್ತು ಕಬ್ಬಿಣದ ಕಾರ್ಖಾನೆಯ ಸ್ಥಿತಿಯನ್ನು ಕಂಡರೆ ಅವರ ಕರುಳು ಕಿತ್ತು ಬಂದೀತು. ದೈತ್ಯಾಕಾರಕ್ಕೆ ಬೆಳೆದಿದೆ ಮತ್ತು ಮೇರು ತಂತ್ರಜ್ಞಾನವೂ ಅಳವಡಿಸಲ್ಪಟ್ಟಿದೆ. ಆದರೆ, ಅಯ್ಯೋ! ಉತ್ಪಾದನಾ ವೆಚ್ಚವು ಗಗನಕ್ಕೇರಿದೆಯಲ್ಲಾ! ಸಾರ್ವಜನಿಕ ಉದ್ದಿಮೆಯಾಗಿ ಇಷ್ಟು ಕಳಪೆಯ ಉಸ್ತುವಾರಿಯೆ ? ನೆಹರು ಮಾದರಿಗೆ ಇಂಥಾ ಗತಿ ಬಂದೊದಗಿದೆಯಲ್ಲ! ನೆಹರು ಆರ್ಥಿಕ ನೀತಿಯ ನಿರ್ವಹಣೆಯು ಸರ್ ಎಂ. ವಿ. ಅವರಿಗೆ ಹಿಡಿಸಿರಲಿಲ್ಲ. ರಾಜಾಜಿಯಂತೆ ಇವರೂ ಮೊದಲೇ ಮನಗಂಡಿದ್ದರು, ಇದು ಪರವಾನಗಿ ಅಧಿಕಾರಶಾಹಿಯಾಗಿ ದಿಕ್ಕೆಟ್ಟು ಹೋಗುತ್ತದೆಂದು. ನೆಹರು ಮತ್ತು ವಿಶ್ವೇಶ್ವರಯ್ಯನವರ ನಡುವೆ ಘರ್ಷಣೆಯೊಂದು ಜರುಗಿತ್ತು. ಸರ್ ಎಂ. ವಿ. ಅವರ ಜೀವನ ಚರಿತ್ರೆ ಬರೆದಿರುವ ವಿ. ಎಸ್. ನಾರಾಯಣ ರಾವ್ ಅದನ್ನು ಹೀಗೆ ದಾಖಲಿಸಿದ್ದಾರೆ : ''ಅದು ೧೯೪೭. ಅಖಿಲ ಭಾರತ ಉದ್ದಿಮೆದಾರರ ಸಂಘದ ಉದ್ಘಾಟನೆಗೆ ಪ್ರಧಾನಿ ನೆಹರು ಬಂದಿದ್ದರು.

ಅಧ್ಯಕ್ಷರಾಗಿ ಎಂ. ವಿ. ಭಾರತ ಸರ್ಕಾರದ ಉದ್ಯಮ ನೀತಿಯನ್ನು ಕಟುವಾಗಿ ಮತ್ತು ತೀವ್ರವಾಗಿ ಟೀಕಿಸಿದರು. ನೆಹರುಗೆ ಕೋಪ ಉಕ್ಕಿಬಂದು ಮುಖ ಕೆಂಪಾಯಿತು. ಸಮಾವೇಶದ ಇಡೀ ಸಭಾಗೃಹದಲ್ಲಿ ಉದ್ವಿಗ್ನತೆ ಕಂಡುಬಂದಿತ್ತು. ಉತ್ತರ ಕೊಡುವಾಗ ನೆಹರು ಸಹ ಬಹಳ ಗಡುಸು ಪದಗಳನ್ನೇ ಬಳಸಿದರು. ಆದರೆ ನೆಹರು ಭಾಷಣದ ಮಧ್ಯದಲ್ಲೇ ಸರ್ ಎಂ. ವಿ. ಮತ್ತೆ ತಮ್ಮ ಪ್ರತಿಪಾದನೆ ಮುಂದುವರಿಸಲು ಅಂಜಲಿಲ್ಲ. ಸಭಾಗೃಹದಲ್ಲಿ ಉದ್ವಿಗ್ನತೆ ಇನ್ನೂ ಅಧಿಕವಾಯಿತು.''

೨೦೦೩ರಲ್ಲಿ ಎಂ. ವಿ. ನಮ್ಮ ಉದ್ದಿಮೆಯ ಸ್ವರೂಪ ಕಂಡು ನಿರಾಶರಾಗುವುದು ಖಚಿತ; ಸ್ವಲ್ಪ ಸಂತೋಷವನ್ನೂ ಅನುಭವಿಸಿಯಾರು. ಟೆಲಿಕಾಂ ಕ್ರಾಂತಿಯನ್ನು ಕಂಡು ಅವರು ಪುಲಕಿತರಾಗುತ್ತಾರೆ. ಮಾಹಿತಿ ತಂತ್ರಜ್ಞಾನ ಮತ್ತು ಜೀವ-ತಂತ್ರಜ್ಞಾನದಿಂದಲೂ ಅಷ್ಟೆ. ಆದರೆ ನಮ್ಮ ಪ್ರಜಾಪ್ರಭುತ್ವದ ಅನುಷ್ಠಾನ, ಪ್ರಬಲ ಮಾಧ್ಯಮಗಳು, ವಿಶೇಷತಃ ಎಲೆಕ್ಟ್ರಾನಿಕ್ ಮಾಧ್ಯಮ, ಕಂಡು ದಿಗ್ಭ್ರಮೆಗೊಂಡಾರು. ಇನ್ನು ಶಿಕ್ಷಣದ ವ್ಯಾಪಾರೀಕರಣ ಕಂಡು ಏನೆನ್ನಬೇಕು !

ನೂರು ಕೋಟಿ ಜನಸಂಖ್ಯೆಯಿಂದ ಅಚ್ಚರಿಗೊಂಡು, ಭಾರತದ ಭವಿಷ್ಯದ ಬಗ್ಗೆ ಅವರು ತವಕಗೊಂಡು ಚಿಂತೆಗೀಡಾಗುತ್ತಾರೆ.

ಕತ್ತಲಾಗುವ ಸಮಯ. ಬೆಂಗಳೂರಿನ ಗೊಂದಲದ ವಾಹನ ಸಂಚಾರ, ರಸ್ತೆಗಳಲ್ಲಿ ದೀಪಗಳಿಲ್ಲದಿರುವುದು, ನಗರದ ಅಪರಾಧ ಸರಮಾಲೆ, ಇವನ್ನೆಲ್ಲಾ ಕಂಡು ಅಸಹಾಯ ಕತೆಯ ಭಾವನೆಯನ್ನು ತಾಳಿಯಾರು. ಬೆಂಗಳೂರಿನಲ್ಲಿ ಮಾಹಿತಿ ತಂತ್ರಜ್ಞಾನದ ಫಸಲು ಅಗಾಧವಾಗಿದೆ; ಆದರೆ ಇವೇನು ದೇವಸ್ಥಾನಗಳೆಂಬ ಹಣಬೆಗಳು ? ಸಾರ್ವಜನಿಕ ಅನುಕೂಲಕ್ಕೆಂದು ಮೀಸಲಾಗಿರುವ ಜಾಗವನ್ನು ಇವೇ ಆಕ್ರಮಿಸಿವೆಯಲ್ಲ ಮತ್ತು ರಸ್ತೆಯೊಳಕ್ಕೆಲ್ಲಾ ನುಸುಳಿಬಿಟ್ಟಿವೆಯಲ್ಲಾ! ಈ ಪವಿತ್ರ ಸ್ಥಳಗಳಿಗೆ ಭಕ್ತರು ನುಗ್ಗುತ್ತಿದ್ದಾರೆ; ಆದರೆ ಅವನ್ನು ಕಟ್ಟಿದ್ದು ಮಾತ್ರ ಅತ್ಯಂತ ಅಪವಿತ್ರ ರೀತಿಗಳಲ್ಲಿ. ಬೆಂಗಳೂರಿಗೆ ಇಂತಹ ದುಃಸ್ಥಿತಿ ಒದಗಿತೇ ಎಂದು ಸರ್ ಎಂ. ವಿ. ಅವರಿಗೆ ಅತ್ಯಂತ ನೋವಿನ ಅನುಭವ. ದೇವಸ್ಥಾನಗಳ ಗಂಟೆಗಳ ಶಬ್ದ, ನಗಾರಿಗಳ ಬಾರಿಸುವಿಕೆ, ಎಲ್ಲಾ ಕಿವಿ ಗಡಚಿಕ್ಕುವಂತಿವೆ. ಹಸಿದವರಂತೆ ಭಕ್ತರು ಪ್ರಸಾದಕ್ಕೆ ಕೈ ಚಾಚುತ್ತಿದ್ದಾರೆ. ಈ ಎಲ್ಲ ಅವ್ಯವಸ್ಥೆಯ ಹುಯಿಲಿನ ನಡುವೆ ಸರ್ ಎಂ. ವಿ. ಎಲ್ಲೋ ಗಾಳಿಯಲ್ಲಿ ಸೇರಿಹೋಗಿದ್ದಾರೆ.

**ಎ. ವಿ. ಶಂಕರರಾವ್**
ನಂ. ೧೭೦, ೩ನೇ ಮುಖ್ಯರಸ್ತೆ, ೪೩ನೇ ಅಡ್ಡರಸ್ತೆ, ಜಯನಗರ ೮ನೇ ಬ್ಲಾಕ್, ಬೆಂಗಳೂರು - ೫೬೦ ೦೮೨

## ಹೊಸ ಬದುಕೆಂದರೆ......

ದೇವರು ಹೇಳಿದ
ಮಕ್ಕಳೇ ಪ್ರಳಯವಾಗುವುದು ಖಚಿತ
ನಾನಿಷ್ಟು ಸಹಾಯ ಮಾಡಬಲ್ಲೆ
ನಿಮ್ಮ ಭೂ ಬಟ್ಟಲನ್ನೆತ್ತಿ
ಗಾಳಿ ನೀರಿರುವ ಇನ್ನೊಂದು ಕಾಯದ ಮೇಲೆ ಬೋರಲು ಹೊಯ್ಯುತ್ತೇನೆ
ಅಲ್ಲಿ ನೀವೂ ಉಳಿದು, ಆ ಗ್ರಹವನ್ನೂ ಉಳಿಸಿ

ಅದೇನು ಇಷ್ಟ ಬಂದಷ್ಟು ವಾಲ್ಯೂಮಿನಲಿ ಕೇಳಿದ ವಾರ್ತೆಯೇ
ದೈವವಾಣಿ, ಏಳು ಖಂಡಗಳಲ್ಲೂ ಮೊರೆದು ಮಿಕ್ಕಿತು
ಎಂತೆಂತಹ ಸೋಮಾರಿಗಳೂ ಎದ್ದರು, ಮೈಮುರಿದರು
ಅಲ್ಲಿ ಬೋರಲು ಬಿದ್ದಾಗ ಹೊದೆಯಲೆಂದು ಕಂಬಳಿ ಸುತ್ತಿಟ್ಟುಕೊಂಡರು
ಬುದ್ಧಿವಂತರು ಬೆಂಕಿಪೊಟ್ಟಣ
ಹಣವಂತರು ಹೊರುವಷ್ಟೂ ಹಣ

ಸುಂದರಿಯರು ಕನ್ನಡಿಪೆಟ್ಟಿಗೆ
ಇತರೆ ಹೆಂಗಸರು ಕೆಡದಂಥ ಉಪ್ಪಿನಕಾಯಿ ಮರಿಗೆ
ಹೀಗೆ ಅವರವರ ಆದ್ಯತೆಯ ಮೇರೆಗೆ

ದೇವರು ಕೂಗಿದ
ಒಂದು, ಎರಡು, ಮೂರು
ಎಲ್ಲರೂ ಎದ್ದು ನಿಲ್ಲಿ ನಾನು ಈ ಬೋಗುಣಿಯನ್ನೆತ್ತಿದಾಗ
ತುಳುಕಾಡದಿರಿ; ನಾನು ಈ ಬೋಗುಣಿಯನ್ನು ಮಗುಚಿದಾಗ
ಹೆದರದಿರಿ; ಶುಭವಾಗಲಿ ನಿಮಗೆ ಹೊಸ ಜಾಗದಲಿ

ಎಲ್ಲಾ ಮುಗಿದು ಹೋಯಿತು ಕಣ್ ರೆಪ್ಪೆ ಹೊಡೆವಷ್ಟರಲ್ಲಿ
ದೇವರೆಂದರೆ ಸಾಮಾನ್ಯವೇ, ಅವನಿಗಿದೊಂದು ಕಷ್ಟವೇ
ನೀರಿದ್ದ ಕಡೆ ನೆರಳಿದ್ದ ಕಡೆ
ಗುಂಪು ಗುಂಪಾದರು ನರಮಾನವರು
ಬುತ್ತಿಯ ಬಿಚ್ಚಿ ಉಂಡರು
ಆರತಿ ಎತ್ತಿದರು ಹಾಡು ಹೇಳಿದರು
ಅವರವರ ಕಸುಬಿಗೆ ಲಗತ್ತಾದ ಕಡೆ ಚದುರಿದರು
ಆರು ತಿಂಗಳು ಕಳೆಯಿತು ತಂದ ದಿನಸಿ ಮುಗಿಯಿತು

ದೇವರು ಕೇಳಿದ
ಮುಂದೇನು ಮಾಡುತ್ತೀರಿ ಹೊಟ್ಟೆಗೆ
ಬೀಜ ತಂದಿದ್ದೀರಾ ಬಿತ್ತನೆಗೆ



ರೈತ ಹೆಂಡತಿಯನ್ನು ಕೇಳಿದ, ಅವಳು ಸೊಸೆಯನ್ನು
ಸನ್ಯಾಸಿ ಶಿಷ್ಯರನ್ನು, ಗುರು ವಿದ್ಯಾರ್ಥಿಗಳನ್ನು
ಮಾಲೀಕ ಕಾರ್ಮಿಕರನ್ನು, ಮಂತ್ರಿ ಅಧಿಕಾರಿಗಳನ್ನು
ನಾಯಕ ಅನುಯಾಯಿಗಳನ್ನು, ಜಡ್ಜಿ ವಕೀಲರನ್ನು
ವಕೀಲರು ಪೊಲೀಸರನ್ನು, ಪೊಲೀಸರು ಕೈಗೆ ಸಿಕ್ಕವರನ್ನು
ಬಿತ್ತನೆ ಬೀಜ, ಬಿತ್ತನೆ ಬೀಜ, ಬಿತ್ತನೆ ಬೀಜ, ಬಿತ್ತನೆ ಬೀಜ

ದೇವರು ಹೇಳಿದ ಮತ್ತು ಅಂತರ್ಧಾನನಾದ
''ಮಣ್ಣು ತಿನ್ನಿ''
ಹೊಸ ಬದುಕೆಂದರೆ ಹಳೆಯ ಬೀಜ

ಲಲಿತಾ ಸಿದ್ದಬಸವಯ್ಯ, ೫೨೧೭, ಗುರುಸನ್ನಿಧಿ, ೨ನೇ ತಿರುವು, ಅಶೋಕನಗರ, ತುಮಕೂರು - ೫೭೨ ೧೦೩

# ಪ್ರೊ॥ ಹಿರೇನ್ ಮುಖರ್ಜಿ

೧೯೭೦ರ ದಶಕದಲ್ಲಿ ಒಮ್ಮೆ ಬೆಂಗಳೂರು ವಿಶ್ವವಿದ್ಯಾಲಯವು ಪ್ರೊ॥ ಹಿರೇನ್ ಮುಖರ್ಜಿಯವರನ್ನು ಉಪನ್ಯಾಸವೊಂದನ್ನು ನೀಡಲು ಕರೆಸಿತ್ತು. ಅದರ ಉಪಯೋಗ ಪಡೆದು ಮಾರನೆಯ ದಿನ ಇಲ್ಲಿನ ಒಂದು ಅಧ್ಯಯನ ಕೇಂದ್ರದ ವತಿಯಿಂದ ಸೆಂಟ್ರಲ್ ಕಾಲೇಜಿನ ಆವರಣದಲ್ಲೇ ಅವರ ಇನ್ನೊಂದು ಉಪನ್ಯಾಸವನ್ನೇರ್ಪಡಿಸಲಾಗಿತ್ತು. ವಿಷಯ : ''ಮಾರ್ಕ್ಸ್‌ವಾದಿ ದೃಷ್ಟಿಯಲ್ಲಿ ಮತಧರ್ಮ.'' ಹಿರಿಯರಾದ ಎಸ್. ಆರ್. ಭಟ್ ಅಧ್ಯಕ್ಷತೆ ವಹಿಸಿ ಪ್ರಾಸ್ತಾವಿಕವಾಗಿ ಎರಡು ಮಾತನಾಡಿ ಧರ್ಮದ ಹೆಸರಿನಲ್ಲಿ ನಡೆಯುವ ಕೆಲವು ಅನಾಚಾರಗಳನ್ನು ಪ್ರಸ್ತಾಪಿಸಿದರು. ಹಿರೇನ್ ಮುಖರ್ಜಿಯವರು ಮೊದಲಿಗೆ ಹೇಳಿದರು : ''ಏನಿದು, ಮಾರ್ಕ್ಸ್‌ವಾದಿ ದೃಷ್ಟಿ? ಇರುವುದೊಂದೇ ಸರಿಯಾದ ದೃಷ್ಟಿ, ಅದು ವೈಜ್ಞಾನಿಕ ದೃಷ್ಟಿ. ಮಾರ್ಕ್ಸ್‌ವಾದಿಗಳಲ್ಲದವರಿಗೂ ಚಾರಿತ್ರಿಕ ವಿಕಾಸ ಬೇರೆಯವಿಗಿದ್ದಂತೆಯೇ ಇರುತ್ತದೆ. ಅದನ್ನು ಸ್ವೀಕರಿಸಿದರೆ ಅವರು ಮಾರ್ಕ್ಸ್‌ವಾದಿಗಳಾಗಲೇಬೇಕೆಂದೇನೂ ಇಲ್ಲ; ಏಕೆಂದರೆ ಈ ವಾದಕ್ಕೆ ಬೇರೆ ಆಯಾಮಗಳೂ ಇವೆ. ಆದರೆ, ಸ್ವೀಕರಿಸದಿದ್ದರೆ ಅವರು ಚರಿತ್ರೆಯ ಪ್ರಜ್ಞೆಯಿಲ್ಲದ ಅಜ್ಞರಾಗುತ್ತಾರೆ.'' ಮುಂದುವರಿದು ಅವರು ಆಗ ತಾನೆ ಕಲ್ಕತ್ತಾದಲ್ಲಿ ಮದರ್ ತೆರೇಸಾ ಹೇಳಿದ್ದ ಒಂದು ಮಾತನ್ನು ಉದ್ಧರಿಸುತ್ತಾ ನುಡಿದರು : ''ಎಲ್ಲರ ಗೌರವಕ್ಕೂ ಪಾತ್ರರಾದವರು ನಮ್ಮ ಊರಿನ ಮದರ್ ತೆರೇಸಾ. ಅವರ ಸೇವಾದೃಷ್ಟಿ ಅದ್ಭುತವಾದುದು. ಯಾರೇ ಆದರೂ ಅವರ ಬಗ್ಗೆ ಹೆಮ್ಮೆ ಪಡುವುದು ಸಹಜ. ಆದರೆ ಆ ತಾಯಿ ಇತ್ತೀಚೆಗೆ ಬಹಳ ಪ್ರಶ್ನಾರ್ಹವಾದ ಮಾತು ಹೇಳಿದ್ದಾರೆ. ಏನದು? ಅವರು ಭಗವಂತನಿಗೆ ಚಿರಋಣಿಗಳಂತೆ. ಬಹಳ ಸಂತೋಷ. ಆದರೆ ಏಕೆ ಋಣಿ? ಕುಷ್ಠರೋಗಿಗಳ ಸೇವೆ ಮಾಡಲು ಆ ದಯಾಮಯ ಇವರಿಗೆ ಅವಕಾಶ ಕಲ್ಪಿಸಿಕೊಟ್ಟಿರುವುದಕ್ಕೆ. ಇದು ಮತಧರ್ಮದ ಶ್ಲಾಘ್ಯ ಮತ್ತು ಅವಹೇಳನೀಯವಾದ ಎರಡು ಮಗ್ಗುಲುಗಳನ್ನೂ ತೋರಿಸುತ್ತದೆ. ಒಂದು, ಸೇವಾತತ್ಪರತೆ. ಅದಕ್ಕೆ ನಾವು ತಲೆಬಾಗಬೇಕು. ಧರ್ಮವಿಲ್ಲದೆಯೂ ಅದು ಸಾಧ್ಯ. ಆದರೆ ಮದರ್ ತೆರೇಸಾಗೆ ಪ್ರೇರಣೆ ದೊರಕಿರುವುದು ಧರ್ಮದಿಂದ. ಎರಡನೆಯದು, ಈ ಭಗವಂತ ಕುಷ್ಠರೋಗಿಗಳನ್ನು ಸೃಷ್ಟಿಸಿ ಇವರಿಗೆ ಸೇವೆ ಮಾಡುವ ಅವಕಾಶ ಮಾಡಿಕೊಟ್ಟಿದ್ದಾನೆ. ಅದಕ್ಕಾಗಿ ಇವರು ಅವನಿಗೆ ವಂದಿಸಬೇಕೆ? ಕುಷ್ಠರೋಗಿಗಳಿಲ್ಲದಿದ್ದರೆ ಸೇವೆ, ದಾನ, ಧರ್ಮ ಸಾಧ್ಯವಿಲ್ಲ. ಆದ್ದರಿಂದ ಅವರಿರಬೇಕು. ಎಂತಹ ವಿಪರ್ಯಾಸವಿದೆ ಇದರಲ್ಲಿ. ಅತಿ ಮಾನವೀಯತೆ ಮತ್ತು ಅಮಾನವೀಯತೆಗಳ ಮಿಶ್ರಣ!''

ವಿಶ್ವದ ಇತಿಹಾಸದಿಂದ ಹತ್ತಾರು ನಿದರ್ಶನಗಳನ್ನು ನೀಡುತ್ತಾ ತಮ್ಮ ವಿದ್ವತ್ಪೂರ್ಣವಾದ ಉಪನ್ಯಾಸ ನೀಡುತ್ತಾ, ಅಲ್ಲಿ ಧ್ವನಿವರ್ಧಕವನ್ನು ಸಹ ಆಯೋಜಿಸಿರಲಿಲ್ಲವೆಂಬುದು ಸಭಿಕರಿಗೆ ಗೊತ್ತಾಗದಷ್ಟು ಆಳವಾಗಿ ಅವರು ಚರ್ಚೆ ನಡೆಸಿದರು. ತುಂಬಿದ್ದ ಸೆನೆಟ್ ಹಾಲಿನಲ್ಲಿ ಅಷ್ಟು ಮೌನದಿಂದ ತದೇಕಚಿತ್ತರಾಗಿ ಎಲ್ಲರೂ ಉಪನ್ಯಾಸ ಕೇಳಿದರು. ಅಂತಹ ಪಾಂಡಿತ್ಯ, ಅಂತಹ ಅಭಿವ್ಯಕ್ತಿ, ಅಷ್ಟು ಉದ್ದುದ್ದದ ಆದರೆ ಮನೋಹರವಾದ ವಾಕ್ಯರಚನೆ, ಅಷ್ಟು ತರ್ಕಬದ್ಧವಾದ ಮತ್ತು ಮನಸ್ಸನ್ನು ಮುಟ್ಟುವ ಶೈಲಿ, ಅಷ್ಟು ಮೃದುವಾದ ಆದರೆ ಮಧುರವಾದ ಕಂಠ, ಇವು ಹಿರೇನ್ ಮುಖರ್ಜಿಯವರ ವೈಶಿಷ್ಟ್ಯ. ಸಹಜವಾಗಿಯೇ ತಮ್ಮ ೨೫ ವರ್ಷಗಳ ಲೋಕಸಭಾ ಸದಸ್ಯತ್ವದ ಅವಧಿಯಲ್ಲಿ (೧೯೫೨-೧೯೭೭) ಅವರು ಮೇರು ಸದಸ್ಯರಾಗಿ ಕಂಗೊಳಿಸಿದರು, ಎಲ್ಲ ಪಕ್ಷಗಳವರ ಆದರಾಭಿಮಾನಗಳನ್ನು ಗಳಿಸಿಕೊಂಡರು. ಇವರು ಮತ್ತು ಶ್ರೀಮತಿ. ರೇಣು ಚಕ್ರವರ್ತಿ ಇಬ್ಬರೂ ಭಾರತೀಯ ಕಮ್ಯುನಿಸ್ಟ್ ಪಕ್ಷದ ಪ್ರತಿನಿಧಿಗಳಾಗಿ ಲೋಕಸಭೆಯಲ್ಲಿ ನೆಹರುವಿನಿಂದ ಹಿಡಿದು ಎಲ್ಲರ ಆಸಕ್ತಿ ಕೆರಳಿಸುತ್ತಿದ್ದರು, ವಾದಕ್ಕೆ ಕಿವಿಗೊಡುವಂತೆ ಮಾಡುತ್ತಿದ್ದರು. ಭಾರತೀಯ ಜನತಾ ಪಕ್ಷವೂ ಸೇರಿದಂತೆ ವಿರೋಧ ಪಕ್ಷಗಳು ಹಿರೇನರನ್ನು ರಾಷ್ಟ್ರದ ಉಪಾಧ್ಯಕ್ಷ ಸ್ಥಾನಕ್ಕೆ ಉಮೇದುವಾರನನ್ನಾಗಿ ಒಮ್ಮೆ ಆಯ್ಕೆ ಮಾಡಿದ್ದವು. ಸೋಲು ಬಹುಮಟ್ಟಿಗೆ ಖಚಿತವಾಗಿತ್ತು, ಏಕೆಂದರೆ ಕಾಂಗ್ರೆಸ್‌ನ ಬಲ ಅಷ್ಟಿತ್ತು. ಸ್ವಾರಸ್ಯದ ಸಂಗತಿಯೆಂದರೆ ಕಲ್ಕತ್ತಾದಲ್ಲಿ ಮತದಾರರ ಪಟ್ಟಿಯಲ್ಲಿ ಇವರ ಹೆಸರೇ ಮಾಯವಾಗಿತ್ತು! ೧೯೭೭ರ ಚುನಾವಣೆಯಲ್ಲಿ ಪ್ರತಾಪ್‌ಚಂದ್ರ ಚಂದರ್ ಇವರನ್ನು ಕಲ್ಕತ್ತೆಯ ಒಂದು ವಿಭಾಗದಲ್ಲಿ ಸೋಲಿಸಿದರು. ಆವರೆಗೆ ಕಾಂಗ್ರೆಸ್ ವಿರುದ್ಧ ಸ್ಪರ್ಧಿಸುತ್ತಿದ್ದ ಹಿರೇನ್‌ಗೆ ಆ ವರ್ಷ ಕಾಂಗ್ರೆಸ್‌ನ ಬೆಂಬಲವಿತ್ತು. ಆ ಪಕ್ಷದವರು ಪ್ರಚಾರ ಮಾಡಲು ಹೋದಾಗ ಕೆಲವು ಹಿರಿಯ ಮತದಾರರು ಕಮ್ಯುನಿಸ್ಟ್ ಪಕ್ಷದ ಕಚೇರಿಗೆ ಹೋಗಿ ಹೇಳಿದರಂತೆ : ''ಹಿರೇನ್ ಬಾಬು ಸೋಲಬೇಕೆಂದು ನಿಮ್ಮ ಅಭಿಮತವೆ? ಹಾಗಿಲ್ಲದಿದ್ದರೆ ಆ ಕಾಂಗ್ರೆಸ್ ಹುಡುಗರನ್ನೇಕೆ ಪ್ರಚಾರಕ್ಕೆ ಕಳಿಸುತ್ತಿದ್ದೀರಿ? ಅವರನ್ನು ನೋಡಿದರೆ ಯಾರೂ ಹಿರೇನ್ ಬಾಬೂಗೆ ಮತ ಕೊಡುವುದಿಲ್ಲ.''



ಉನ್ನತ ಸಂಸದ, ಮಹಾನ್ ಇತಿಹಾಸ ತಜ್ಞ, ಮಾರ್ಕ್ಸ್‌ವಾದದ ಮೇಧಾವಿ ಮತ್ತು ಅನುಯಾಯಿ, ಅತ್ಯಾಕರ್ಷಕ ಹೃದಯವಂತ ಹಾಗೂ ಹಾಸ್ಯಪ್ರಜ್ಞೆಯ ಪ್ರತೀಕ ಪ್ರೊ॥ ಹೀರೇಂದ್ರನಾಥ ಮುಖರ್ಜಿ ತಮ್ಮ ೯೭ನೆಯ ವಯಸ್ಸಿನಲ್ಲಿ ಇದೇ ಜುಲೈ ೩೦ರಂದು ನಿಧನರಾದರು. ಅವರು ಬರೆದ ಪುಸ್ತಕಗಳು, ಲೇಖನಗಳು ಅಪಾರ. ಗಾಂಧೀಜಿ ಹಾಗೂ ಟಾಗೋರ್ ಬಗೆಗಿನ ಅವರ ಎರಡು ಪುಸ್ತಕಗಳು ಅತ್ಯಂತ ಮೌಲಿಕವಾದುವು. ಅವರು ಕಟ್ಟಿದ ಸಂಸ್ಥೆಗಳು ಹತ್ತಾರು : ಸೋವಿಯೆತ್ ಒಕ್ಕೂಟದ ಮಿತ್ರರು (ನಂತರ ಇದೇ ಇಸ್ಕಸ್ ಆಯಿತು), ಇಪ್ಟಾ (ನಾಟಕರಂಗದಲ್ಲಿ ಒಂದು ಪ್ರಗತಿಪರ ಒಕ್ಕೂಟ), ಶಾಂತಿ ಸಮಿತಿ, ಹಾಗೂ ಹಲವು ಕಾರ್ಮಿಕ ಸಂಘಗಳು. ಸುರೇಂದ್ರನಾಥ್ ದಾಸ್‌ಗುಪ್ತ (ತತ್ತ್ವಶಾಸ್ತ್ರದ ಇತಿಹಾಸಕಾರ), ಜಗದೀಶ್ ಚಂದ್ರ ಬೋಸ್ (ವಿಜ್ಞಾನಿ), ಪ್ರಫುಲ್ಲ ಚಂದ್ರ ರೇ (ವಿಜ್ಞಾನಿ), ಅವನೀಂದ್ರನಾಥ ಟಾಗೋರ್ (ಕಲಾವಿದ) ಮುಂತಾದವರು ಇವರ ನೆಚ್ಚಿನ ಗೆಳೆಯರು. ಕಲ್ಕತ್ತಾ ಮತ್ತು ಆಕ್ಸ್‌ಫರ್ಡ್‌ಗಳಲ್ಲಿ ವ್ಯಾಸಂಗ ಮಾಡಿದ್ದ ಹಿರೇನ್ ಡಾ॥ ರಾಧಾಕೃಷ್ಣನ್ ಅವರ ಅಚ್ಚುಮೆಚ್ಚಿನ ಶಿಷ್ಯನಾಗಿ ಆಂಧ್ರ ವಿಶ್ವವಿದ್ಯಾಲಯದಲ್ಲಿ ಉಪನ್ಯಾಸಕನಾಗಿ ನೇಮಕಗೊಂಡು ನಂತರ ಕಲ್ಕತ್ತಾದಲ್ಲಿ ಅಧ್ಯಾಪಕರಾಗಿದ್ದರು. ಕಣ್ಣಿನ ದೋಷದಿಂದಾಗಿ ಅವರು ಐ. ಸಿ. ಎಸ್. ಪರೀಕ್ಷೆಯಲ್ಲಿ ಉತ್ತೀರ್ಣರಾಗಲಿಲ್ಲವಂತೆ. ಆಗಿದ್ದರೆ ನಂತರ ಒಂದು ದಿನ ಸುಭಾಷರಂತೆ ಅದನ್ನು ಬಿಟ್ಟುಬರುತ್ತಿದ್ದರೇನೋ! ಅದರ ಬದಲು ಕಮ್ಯುನಿಸ್ಟ್ ದಿಗ್ಗಜರಾಗಿ ಅಪೂರ್ವ ಸಾಧನೆಗೈದ ಹಿರೇನ್ ಮುಖರ್ಜಿಯಂತಹ ವ್ಯಕ್ತಿಗಳನ್ನು ಬಹುಶಃ ಕಮ್ಯುನಿಸ್ಟ್ ಚಳುವಳಿಯ ಭವ್ಯ ಕೊಡುಗೆಗಳೆಂದು ಹೇಳಬಹುದು.

ಪ್ರೊ॥ ಹಿರೇನ್ ಮುಖರ್ಜಿಯವರಿಗೆ 'ಹೊಸತು' ತನ್ನ ಗೌರವಪೂರ್ವಕವಾದ ನಮನಗಳನ್ನು ಸಲ್ಲಿಸುತ್ತದೆ.

## ದೇವರು

ಕಣ್ಣಿದ್ದೂ ಕುರುಡರಾಗಿ
ಕಾಂಚಾಣದ ಮೇಲೆ
ನಿಂತಿರುವ ಕೆಲವರಿಗೆ
ತಕ್ಷಣ ದರುಶನ ನೀಡಿ
ಉಳಿದವರಿಗೆ ನಂತರ
ಕಾಣಿಸಿಕೊಳ್ಳುವನು
ಹಲವು ದೇಗುಲಗಳಲ್ಲಿ

* * *

ಅನ್ನದಾಸೋಹದಲ್ಲೂ
ಪ್ರತ್ಯೇಕಿಸುವ ಪರಿಯ
ಕಂಡು ಬೇಸರದಿಂದ
ಯಾರಿಗೂ ಕಾಣದಂತೆ
ದೂರ ಸರಿದಿರುವನು

■ ಎನ್. ಶ್ರೀನಿವಾಸ್



# ಮಂಗಳೂರಿನ ಇಲಿಗಳು ಮತ್ತು ಕೋಸಯ್ಯನ ಕುಟುಂಬ

■

**ಡಾ|| ಬಿ. ಎಸ್. ಶೈಲಜಾ**

ಮಂಗಳೂರಿನಲ್ಲಿ ತರಕಾರಿ ಮಾರುವವನೊಬ್ಬನಿದ್ದಾನೆ. ಸುಲ್ತಾನ್ ಬತೇರಿಯಿಂದ ಅರ್ಧ ಕಿ. ಮೀ. ದೂರದಲ್ಲಿ ಅವನ ಅಂಗಡಿ ಮತ್ತು ಮನೆ. ಅವನ ಹೆಸರು ಸರಿಯಾಗಿ ಯಾರಿಗೂ ತಿಳಿಯದು. ಬಹುಶಃ ಮಾರಪ್ಪ ಎಂದಿರಬೇಕು. ಎಲ್ಲರೂ ಅವನನ್ನು ಕೋಸಯ್ಯ ಎಂದೇ ಕರೆಯುತ್ತಿದ್ದರು. ಅವನು ಬೆಳೆದು ಮಾರುತ್ತಿದ್ದ ಕೋಸುಗಳು ಅಷ್ಟು ಪ್ರಸಿದ್ಧಿ.

ಕೋಸಯ್ಯನಿಗೆ ನಾಲ್ಕು ಜನ ಗಂಡು ಮಕ್ಕಳು; ಒಬ್ಬಳು ಮಗಳು. ದೊಡ್ಡ ಮಗನಿಗೆ ಅವನು ಕೃಷ್ಣರಾಜ ಎಂದು ಹೆಸರಿಟ್ಟಿದ್ದ. ಮೈಸೂರಿನ ದೊರೆಗಳ ಹೆಸರು. ತನ್ನ ಮಗನೂ ಮುಂದೊಂದು ದಿನ ದೊರೆಯಾಗಲಿ ಎಂದಿರಬಹುದು. ಕೋಸಯ್ಯನ ಅಂಗಡಿಯ ಹಕ್ಕು ಮತ್ತು ಜವಾಬ್ದಾರಿ ಈತನಿಗೇ ಎಂದು ಹುಟ್ಟಿದ ದಿನವೇ ಇತ್ಯರ್ಥವಾಗಿ ಹೋಗಿತ್ತು. ಆದ್ದರಿಂದ ಈ ಕೃಷ್ಣರಾಜ ಶಾಲೆ



ಮುಗಿಸಿದ ಮೇಲೆ ಬಾಟನಿ ಕಲಿಯಲು ಹೊರಟ. ನೂರ ಐವತ್ತು ಜಾತಿಯ ಕೋಸುಗಳು, ನಲವತ್ತನಾಲ್ಕು ಜಾತಿಯ ದಂಟಿನಸೊಪ್ಪು ಇದೆ ಎಂದು ಕಲಿತ. ಅಷ್ಟೇ ಅಲ್ಲ ಜ಼ೂಆಲಜಿ ತರಗತಿಗೆ ಹೋಗಿ ಕೋಸನ್ನು ತಿನ್ನಲು ಬರುವ ಎಪ್ಪತ್ತೇಳು ಜಾತಿಯ ಕಂಬಳಿ ಹುಳುಗಳ ಬಗ್ಗೆಯೂ ತಿಳಿದುಕೊಂಡ. ಸಾಬೂನಿನ ನೀರಿನಿಂದ ಹಸಿರು ಹುಳುಗಳನ್ನು ತೆಗೆಯುವ ವಿಧಾನ; ತಂಬಾಕು ನೀರಿನಿಂದ ಪಟ್ಟೆಪಟ್ಟೆ ಹುಳುಗಳನ್ನು ತೆಗೆಯುವ ವಿಧಾನ; ಉಪ್ಪುನೀರಿನಿಂದ ದಪ್ಪದ ಕಂದು ಬಣ್ಣದ ಹುಳುಗಳನ್ನು ತೆಗೆಯುವುದು, ಇವೆಲ್ಲವನ್ನೂ ಕರಗತ ಮಾಡಿಕೊಂಡ. ಮುಂದಿನದನ್ನು ನೀವು ಸುಲಭವಾಗಿ ಊಹಿಸಬಹುದಷ್ಟೇ. ಅಪ್ಪನ ಅಂಗಡಿಯ ಜವಾಬ್ದಾರಿ ವಹಿಸಿಕೊಂಡ. ಮಂಗಳೂರು ಸುತ್ತಮುತ್ತಲೆಲ್ಲೂ ಸಿಗದ ಚೆಂದದ ಕೋಸುಗಳನ್ನು ಮಾರತೊಡಗಿದ. ಅವನ ಹೆಸರು ಚಿಕ್ಕೋಸಯ್ಯ ಆಗಿ ಬರುಬರುತ್ತಾ ಚಿಕ್ಕೋಸ ಆಯಿತು. ತನ್ನ ಹೆಸರು ಕೃಷ್ಣರಾಜ ಎಂಬುದು ಅವನಿಗೆ ಮರೆತೇ ಹೋಯಿತು.

ಕೋಸಯ್ಯನಿಗೆ ಇದ್ದುದು ಒಂದೇ ಅಂಗಡಿ. ಆದ್ದರಿಂದ ಉಳಿದ ಮೂರು ಮಕ್ಕಳು ಬೇರೆ ಬೇರೆ ದಾರಿ ಹಿಡಿದರು. ಎರಡನೆಯವನು ಜಗ್ಗು. ಅವನು ಶಾಲೆಯಲ್ಲಿ ಮಹಾಜಾಣನೆಂದು ಹೆಸರು ಪಡೆದ. ಪ್ರಬಂಧ ಸ್ಪರ್ಧೆಗಳಲ್ಲಿ ಬಹುಮಾನ ಪಡೆದ. ಹಾಫ್‌ಬ್ಯಾಕ್ ಆಡಿ ಫುಟ್‌ಬಾಲ್ ಟೀಮ್ ನಾಯಕನಾಗಿ ಶಾಲೆಗೆ ಬೇಕಾದಷ್ಟು ಟ್ರೋಫಿ ತಂದು ಕೊಟ್ಟ. ತುಂಟತನವನ್ನು ಮಾಡುತ್ತಿದ್ದ. ಬೀಗದ ಕೈತೂರಿಸುವ ರಂಧ್ರದೊಳಗೆ ಲೆಪ್ಪ ತುಂಬುವುದು ಅಥವಾ ಮಾಸ್ತರರ ಜೇಬಿಗೆ ಸತ್ತ ಇಲಿಯನ್ನು ಹಾಕುವುದು – ಇವೆಲ್ಲಾ ತೀರಾ ಸಾಧಾರಣವಾದವು. ಜಗ್ಗು ಇವನ್ನೆಲ್ಲಾ ಮಾಡುತ್ತಿರಲಿಲ್ಲ. ಆಗ ಬರುತ್ತಿದ್ದ ಬೆಂಕಿಕಡ್ಡಿಗಳು ಇಂದಿನಂತಹ 'ಸೇಫ್ಟಿ ಮಾಚಸ್' ಅಲ್ಲ. ಯಾವುದರ ಮೇಲೆ ಗೀಚಿದರೂ ಬೆಂಕಿ ಹೊತ್ತು ಕೊಳ್ಳುತ್ತಿತ್ತು. ಇಂಥದೊಂದು ಕಡ್ಡಿಯ ತಲೆಯನ್ನು ಅವನು ಚಾಕ್‌ಪೀಸ್‌ಗೆ ಅಂಟಿಸಿದ. ಮಾಸ್ತರರು ಚಾಕ್‌ನಿಂದ ಬರೆದ ತಕ್ಷಣ ಏನಾಯಿತು ಎಂದು ನೀವು ಊಹಿಸಿಕೊಳ್ಳಬಹುದು. ಮುಂದಿನ ಐದು ನಿಮಿಷ ಶಾಲೆಯಲ್ಲೆಲ್ಲಾ ಗುಲ್ಲೋಗುಲ್ಲು. ಅವನಿಗೆ ಇಂಗ್ಲಿಷ್ ಮಾಸ್ತರರನ್ನು ಕಂಡರೂ ಅಷ್ಟಕ್ಕಷ್ಟೇ. ಅಂದು ಎಲ್ಲಾ ಇಂಕ್‌ಬಾಟಲಿಗಳಲ್ಲಿ ಮೆಥಿಲೇಟೆಡ್ ಸ್ಪಿರಿಟ್ ತುಂಬಿಸಿಟ್ಟ. ಯಾರೊಬ್ಬರಿಗೂ ಬರೆಯಲೇ ಆಗುತ್ತಿಲ್ಲ ! ಈ ಕಿಡಿಗೇಡಿತನವನ್ನು ಕಂಡು ಹಿಡಿದು ಸ್ಪಿರಿಟ್ ಅನ್ನು ಕೆಮಿಸ್ಟ್ರಿಲ್ಯಾಬ್‌ಗೆ ಕಳಿಸಿ, ಎಲ್ಲರಿಗೂ ಹೊಸ ಇಂಕ್ ಕೊಡಿಸುವಷ್ಟರಲ್ಲಿ ಅರ್ಧಗಂಟೆ ಕಳೆದುಹೋಯಿತು.

ಮೂರನೆಯ ಮಗ ಚಿನ್ನು. ಇವನು ಗಣಿತ ಮತ್ತು ಇತಿಹಾಸ ವಿಷಯಗಳಲ್ಲಿ ತುಂಬ ಜಾಣ. ಎಡಗೈ ಬೌಲರ್ ಆಗಿ ಕ್ರಿಕೆಟ್ ಟೀಂಗೆ ಖ್ಯಾತಿ ತಂದುಕೊಟ್ಟ. ಕೆಮಿಸ್ಟ್ರಿ ಎಂದರೆ ಮಹಾ ಆಸಕ್ತಿ. ಪಾರಾಡೀಮಿಥೈಲ್ ಅಮಿನೋಬೆನ್‌ಜಾಲ್ಡ್ ಹೈಡ್ ಎಂಬುದೊಂದು ವಸ್ತುವನ್ನು (ರ‍್ಯಾಬಿಟ್ ಅಂದರೆ ಮೊಲಕ್ಕೆ ಸಂಬಂಧಿಸಿಲ್ಲದ) ಅರಾಬಿಡಾಲ್ ಎಂಬುದೊಂದು ವಸ್ತುವನ್ನು ಇಡೀಶಾಲೆಯೇ ಏಕೆ ಇಡೀ ಊರಿನಲ್ಲೇ ಮೊದಲ ಬಾರಿ ತಯಾರು ಮಾಡಿದ್ದ ಇವನು. ಯಾವುದನ್ನು ಬೆರೆಸಿದರೆ ಕೆಟ್ಟ ಕೆಟ್ಟ ದುರ್ನಾತಗಳನ್ನು ಸೃಷ್ಟಿಸಬಹುದು ಎಂದು ಪ್ರಯೋಗಮಾಡಿ ತಿಳಿದಿದ್ದ. ಆದರೆ ಒಳ್ಳೆಯ ಹುಡುಗ – ಎಂದೂ ಪ್ರಯೋಗಿಸಲಿಲ್ಲ.

ನಾಲ್ಕನೆಯ ಮಗ ಜನ್ನು. ಇವನು ಪಾಠದಲ್ಲೂ ಅಷ್ಟೇನೂ ಮುಂದಿರಲಿಲ್ಲ. ಆಟದಲ್ಲೂ ಅಷ್ಟೇ. ಅವನಿಗೆ ನೇರವಾಗಿ ಚೆಂಡು ಒದೆಯಲು ಬರುತ್ತಿರಲಿಲ್ಲ.

ಕ್ರಿಕೆಟ್ ಆಡುವಾಗ ಫೀಲ್ಡ್ ಮಾಡಲು ಕಳಿಸಿದರೆ, ನಿಂತೇ ನಿದ್ದೆ ಮಾಡಿಬಿಡುತ್ತಿದ್ದ. ಆದರೆ ಇವನಿಗೆ ವೈರ್‌ಲೆಸ್ ಎಂದರೆ ತುಂಬಾ ಆಸಕ್ತಿ. ಮನೆಯಲ್ಲಿ ವಿದ್ಯುತ್ ಆಟಿಕೆಗಳನ್ನು ಮಾಡುತ್ತಿದ್ದ. ಇದು ಉಳಿದವರಿಗೆ ತಲೆನೋವು ಎಂದರೂ ಅಜ್ಜಿಗೆ ಮಾತ್ರ ಪ್ರಿಯವಾಗಿತ್ತು. ಅದಕ್ಕೆ ಕಾರಣವೂ ಇತ್ತು. ಶಿವಮೊಗ್ಗದಿಂದ ತಾಳಗುಪ್ಪೆಗೆ ರೈಲು ಓಡಿಸಿದ ಮೊದಲ ದಿನವನ್ನು ನೆನಪಿನಲ್ಲಿಟ್ಟುಕೊಳ್ಳುವಷ್ಟು ವಯಸ್ಸಾದ ಈ ಅಜ್ಜಿಗೆ ಸರಸರನೆ ಇರಲಿ ನಿಧಾನವಾಗಿ ನಡೆಯುವುದೂ ಕಷ್ಟವಾಗಿತ್ತು. ಆಕೆಗೆ ಕುಳಿತಲ್ಲಿಂದಲೇ ಮಾತನಾಡಲು, ಕೇಳಿಸಿಕೊಳ್ಳಲು ಸಾಧ್ಯವಾಗುವ ಇಯರ್‌ಫೋನ್ ವ್ಯವಸ್ಥೆ ಮಾಡಿಕೊಟ್ಟಿದ್ದ ಜನ್ನು. ಇದರಿಂದ ಆಕೆಗೆ ತುಂಬಾ ಸಂತೋಷ. ಎಲೆಕ್ಟ್ರಿಕ್ ಮೀಟರ್ ಓಡಿಸದೆಯೇ ಎಲೆಕ್ಟ್ರಿಕ್ ದೀಪ ಹತ್ತಿಸುವ ವಿಧಾನವನ್ನು ಮೊದಲು ಕಲಿತವನೇ ಆತ (ಈಗ ಇದು ಸರ್ವೇಸಾಧಾರಣವಾದ ಕಳ್ಳತನವಾಗಿಬಿಟ್ಟಿದೆ). ಮೀಟರ್ ಕೆಟ್ಟಿರಬಹುದೇ ಎಂದು ಅಪ್ಪ ಪ್ರಶ್ನಿಸಿದಾಗ ಇವನು ಹಲ್ಲು ಕಿರಿದ. ''ಇದು ಕಳ್ಳತನ; ನಾವು ಹೀಗೆ ಮಾಡಬಾರದು'' ಎಂದು ಅಪ್ಪ ಆ ಕನೆಕ್ಷನ್ ಕಿತ್ತುಹಾಕಿದ. ''ಇದೇನೂ ಕಳ್ಳತನವಲ್ಲ'' ಎಂದು ಜನ್ನುನ ವಾದ. ''ನಾವೇನೂ ಕರೆಂಟನ್ನು ಹಿಡಿದಿಟ್ಟುಕೊಳ್ಳುವುದಿಲ್ಲವಲ್ಲ; ಈ ತಂತಿಯಿಂದ ಬರುತ್ತದೆ ಆ ತಂತಿಯಿಂದ ವಾಪಸ್ ಹೋಗುತ್ತದೆ'' ಎನ್ನುತ್ತಾನೆ ಅವನು.

ಕೋಸಯ್ಯನ ಮಗಳು ಲಲ್ಲಿ. ಅವಳ ಬಗ್ಗೆ ಹೆಚ್ಚು ಹೇಳಬೇಕಾಗಿಲ್ಲ. ನಾಲ್ಕೂ ಅಣ್ಣಂದಿರ ಚಮತ್ಕಾರಗಳನ್ನೂ ಅವಳು ಕಲಿತಿದ್ದಳು; ಅಷ್ಟೇ ಅಲ್ಲ ಅವರ ಹುಳುಕುಗಳೂ ಅವಳಿಗೆ ಗೊತ್ತಿದ್ದವು. ಒಮ್ಮೆ ಚೇಷ್ಟೆಯೊಂದರಲ್ಲಿ ತಾನೂ ಸೇರಿ ಹಲ್ಲು ಮುರಿದುಕೊಂಡಿದ್ದಳು.

ಇಷ್ಟು ಕೋಸಯ್ಯನ ಸಂಸಾರದ ವಿಷಯ. ಇನ್ನು ಮಂಗಳೂರಿನ ಸುದ್ದಿಗೆ ಬರೋಣ. ಹಡಗಿನಲ್ಲಿ ಸಾಮಾನುಗಳು – ಅಕ್ಕಿ ಬೇಳೆ ಮೊದಲಾಗಿ ಎಲ್ಲವೂ – ಬಂದಿಳಿಯುತ್ತಿದ್ದ ಕಾಲ. ರೈಲಂತೂ ಇಲ್ಲ. ಘಟ್ಟದ ಮೇಲಿಂದ ಬಸ್ಸೂ ಸುಗಮವಾಗಿ ಬಾರದಿದ್ದುದರಿಂದ ಹಡಗುಗಳೇ ಎಲ್ಲ ವ್ಯಾಪಾರಕ್ಕೆ ಆಧಾರವಾಗಿದ್ದವು. ಹೀಗೊಂದು ಹಡಗು ಬಂದು ನಿಂತಾಗ ಸಾಮಾನುಗಳ ಜೊತೆ ಕೆಲವೊಂದು ಅತಿಥಿಗಳೂ ಇಳಿದರು - ಇಳಿದವು. ಅವೇ – ಇಲಿಗಳು !

ಈ ಇಲಿಗಳು ಹಾಂಗ್‌ಕಾಂಗ್‌ನಿಂದ ಬಂದವಂತೆ. ಇವು ತಿನ್ನದ ವಸ್ತುವೇ ಇಲ್ಲ. ಬರುಬರುತ್ತಾ ಮಂಗಳೂರು ತುಂಬಾ ಇವುಗಳ ಸಂತಾನವೇ ತುಂಬಿಹೋಯಿತು. ಕಿಂದರಜೋಗಿಯ ಪದ್ಯದ ಎಲ್ಲ ಘಟನೆಗಳೂ ವಾಸ್ತವವಾಗತೊಡಗಿದವು. ಅಷ್ಟೇ ಏಕೆ ? ಲಂಗರು ಹಾಕಿ ನಿಂತಿರುತ್ತಿದ್ದ ಹಡಗುಗಳಿಗೇ ಹೋಗಿ ಕೆನಡಾದ ಗೋಧಿ, ನೆದರ್‌ಲ್ಯಾಂಡ್ಸ್‌ನ ಬೆಣ್ಣೆ, ಜಮೈಕಾದ ಬಾಳೆಹಣ್ಣು ಹೀಗೆ ವಿದೇಶೀ ಮಾಲುಗಳಿಗೇ ಏಟು ಹಾಕುತ್ತಿದ್ದವು. ಎಷ್ಟೇ ಭದ್ರವಾಗಿ 'ಪ್ಯಾಕ್' ಮಾಡಿದ್ದರೂ ಬಿಡುತ್ತಿರಲಿಲ್ಲ. ದುಬಾರಿ ವೆಚ್ಚದ ಪರ್ಷಿಯಾದ ರತ್ನಗಂಬಳಿಗಳು ಚೀನಾದ ಸಿಲ್ಕ್ ಎಲ್ಲವನ್ನೂ ಚಿಂದಿ ಮಾಡುತ್ತಿದ್ದವು.

ಬಂದರಿನ ಅಧಿಕಾರಿಗಳಿಗೆ ದೊಡ್ಡ ತಲೆನೋವು ಆರಂಭವಾಯಿತು. ಇತರ ದೇಸೀ ಇಲಿಗಳಂತೆ ಇವೂ ಊರಲ್ಲಿ ಸಿಗುವುದನ್ನೇ ತಿನ್ನಬಾರದೇಕೆ ? ಎಂದವರು ಶಪಿಸುತ್ತಿದ್ದರು. ಇಲಿಗಳಿಗೆ ಪರದೇಸಿ ಮಾಲಿನ ರುಚಿ ಹತ್ತಿಬಿಟ್ಟಿತ್ತು ! ಟೌನ್‌ಹಾಲ್‌ನ ಪಕ್ಕದ ದೊಡ್ಡ 'ಪಾಷ್' ಆಫೀಸಿನಲ್ಲಿ ಕುಳಿತ 'ನೇವಲ್ ಚೀಫ್' ಎಂಬುವವನಿಗಂತೂ ತಲೆಯೇ ಕೆಟ್ಟಂತಾಗಿತ್ತು. ನಗರಕ್ಕೆ ಬರುತ್ತಿದ್ದ ಸರಕುಗಳಿಗೆ ಮಾತ್ರವಲ್ಲದೆ ಎಲ್ಲಿಂದಲೋ ಎಲ್ಲಿಗೋ ಹೋಗುತ್ತಿದ್ದ ಸರಕುಗಳಿಗೂ ನಷ್ಟವನ್ನು ತುಂಬಿ ಕೊಡಬೇಕಾಗಿ ಬಂದದ್ದರಿಂದ ಹಣಕಾಸಿನ ವ್ಯವಸ್ಥೆಯೆಲ್ಲಾ ಏರುಪೇರಾಗಿತ್ತು.

ಇಲಿಗಳನ್ನು ಹಿಡಿಯಲು ಜನ ಮುಂದಾದರು. ಮಂಗಳೂರೇ ಏಕೆ ಸುತ್ತಮುತ್ತಲ ಹಳ್ಳಿಗಳಿಂದೆಲ್ಲಾ ಹಕ್ಕಿಪಿಕ್ಕಿ ಜನರು ಓಡೋಡಿ ಬಂದರು. ಎಲ್ಲರೂ ಸೇರಿ ಹಿಡಿದದ್ದು ಸುಮಾರು ಒಂದು ನೂರು ಇಲಿಗಳಷ್ಟೇ !



ಈ ಇಲಿಗಳಿಗೊಬ್ಬ ಜಾಣ ರಾಜ ನಿದ್ದ. ಬಂದರಿನ ಸಮೀಪವೇ ಅವನ ಅರಮನೆ (ಬಿಲ). ಪ್ರತಿನಿಮಿಷಕ್ಕೂ ಅವನಿಗೆ ಸುದ್ದಿ ವರದಿಯಾಗುತ್ತಿತ್ತು. ಅವನಿಗೆ ಸ್ವಿಟ್ಜರ್ಲೆಂಡ್‌ನ ಚಾಕೋಲೇಟ್‌ಗಳನ್ನು ಸೇವಕರು



ಒಯ್ದು ಕೊಡುತ್ತಿದ್ದುದನ್ನು ಅನೇಕರು ಕಂಡಿದ್ದರು. ಹಾಗೆಯೇ ಅರೇಬಿಯಾದ ಖರ್ಜೂರ, ಫ್ರಾನ್ಸ್‌ನ ಟರ್ಕಿಗಳು ಎಲ್ಲವೂ ಸರಬರಾಜಾಗುತ್ತಿದ್ದವು. ವರದಿಗಳನ್ನು ಕೇಳಿ ಮುಂದಿನ ಕಾರ್ಯಕ್ರಮ ಏನು ಎಂದು ಆದೇಶ ಕೊಡುತ್ತಿದ್ದ ಈ ಜಾಣ.

ಯಾವುದಾದರೂ ಒಂದು ಇಲಿ ಬೋನಿನಲ್ಲಿ ಬಿದ್ದ ಕೂಡಲೇ ಅವನಿಗೆ ವರದಿ ಹೋಗುತ್ತಿತ್ತು. ತಕ್ಷಣವೇ ಅವನು ಅಪಾಯದ ಸಂದೇಶ ಕಳುಹಿಸಿ ಉಳಿದವು ಸಿಕ್ಕಿ ಬೀಳದಂತೆ ತಡೆಯುತ್ತಿದ್ದ. ಅವನದೊಂದು ದೊಡ್ಡ ಸೈನ್ಯವೇ ಇತ್ತು. ಈ ಸೈನಿಕರು ದಿನವಿಡೀ ಕಲ್ಲು, ಕಬ್ಬಿಣಗಳನ್ನು ಕಡಿಯುತ್ತಾ ಹಲ್ಲು ಚೂಪಾಗಿಟ್ಟುಕೊಂಡಿದ್ದರು. ಸುಮಾರು ೧೦೦೦೦ ಸೈನಿಕರು ಇದ್ದಾರೆಂದು ಒಂದು ಅಂದಾಜು. ಇದು ಉತ್ಪ್ರೇಕ್ಷೆಯಲ್ಲ. ಒಮ್ಮೆ ಒಂದು ಬೇಟೆನಾಯಿಯನ್ನು ರಾಜನ ಬಿಲದತ್ತ ಛೂಬಿಡಲಾಗಿತ್ತು. ಈ ನಾಯಿ ಎರಡು ಇಲಿಗಳನ್ನು ಕೊಂದು ಬೀಗುವಷ್ಟರಲ್ಲಿ ರಾಜನಿಗೆ ಸಂದೇಶ ಮುಟ್ಟಿತು. ಸೈನ್ಯ ಆಕ್ರಮಣ ಮಾಡಿತು. ನಾಯಿಯ ಹೆಸರೇ ಇಲ್ಲದಂತೆ ಆಗಿಹೋಯಿತು.

ಈ ಸೈನಿಕರ ಹಲ್ಲುಗಳು ಬಹಳ ಚೂಪಾಗಿದ್ದವು. ತಂತಿಯ ಬೋನುಗಳನ್ನ ಮುರಿದುಬಿಡುತ್ತಿದ್ದವು. ಆದ್ದರಿಂದ ಸುಮಾರು ೬೧೮ ಬೋನುಗಳು ಗುಜರಿ ಸೇರಿದವು.




ನಗರಪಾಲಿಕೆಯವರಿಗೆ ಹೊಸದೊಂದು ಸಮಸ್ಯೆ ಉದ್ಭವವಾಯಿತು. ಒಂದೇ ತಿಂಗಳಲ್ಲಿ, ಸಾಕಿಕೊಂಡಿದ್ದ ೧೮೧ ಬೆಕ್ಕುಗಳು, ೪೯ ನಾಯಿಗಳು ಮತ್ತು ೬೫ ಮುಂಗುಸಿಗಳು ಸತ್ತುಬಿದ್ದವು. ಇವುಗಳ ಅಂತ್ಯ ಸಂಸ್ಕಾರದ್ದೊಂದು ಚಿಂತೆ. ಇಲಿಗಳಿಂದ ಕಡಿಸಿಕೊಂಡ ಸಾಕಿದ ನಾಯಿಗಳು, ಬೆಕ್ಕುಗಳ ಶುಶ್ರೂಷೆಗೆ ಹೊರಗಡೆಯಿಂದ ತುರ್ತಾಗಿ ಪಶುವೈದ್ಯರನ್ನು ಕರೆಸಬೇಕಾದದ್ದು ಇನ್ನೊಂದು ಚಿಂತೆ. ಊರಲ್ಲಿದ್ದ ಬೀಡಾಡಿ ನಾಯಿಗಳು ಜೀವಭಯದಿಂದ ಮನೆಗಳೊಳಗೆ ನುಗ್ಗುತ್ತಿದ್ದವು. ಆಮೇಲೆ ಊರುಬಿಟ್ಟು ಓಡಿಹೋದವು.

ಬಂದರಿನಲ್ಲಿದ್ದ ಅಧಿಕಾರಿಗಳಿಗೊಂದು ಉಪಾಯ ಹೊಳೆಯಿತು. ಎಲ್ಲ ಬಗೆಯ ಇಲಿ ಪಾಷಾಣ ತರಿಸಿ, ತಿಂಡಿಗಳ ಮೇಲೆ ಉದುರಿಸಿ ಅಲ್ಲಲ್ಲಿ ಇಟ್ಟರು. ''ಹೀಗೆ ಹೊರಗಿಟ್ಟಿರುವ ತಿಂಡಿಗಳನ್ನು ತಿನ್ನಬೇಡಿ'' ಎಂದು ಇಲಿಗಳ ರಾಜ ಮೊದಲೇ ಆದೇಶ ಹೊರಡಿಸಿದ್ದುದು ಅವರಿಗೆ ಗೊತ್ತಿರಲಿಲ್ಲ. ಒಟ್ಟಿನಲ್ಲಿ ಈ ಉಪಾಯ ಫಲಿಸಲಿಲ್ಲ. ಭದ್ರವಾಗಿ 'ಪ್ಯಾಕ್' ಆಗಿದ್ದ ಪೆಟ್ಟಿಗೆಗಳಿಂದಲೇ ಇಲಿಗಳು ಮಾಲನ್ನು ಎಳೆಯುತ್ತಿದ್ದವು. ಕೆಲವು ''ಅವಿಧೇಯ'' ಇಲಿಗಳು ಈ ತಿಂಡಿ ತಿಂದು ಸತ್ತಾಗ, ರಾಜ, ''ಅವುಗಳಿಗೆ ಹಾಗೇ ಆಗಬೇಕು'' ಎಂದನಂತೆ.

ಈಗೊಂದು ತುರ್ತು ಸಭೆ ನಡೆಯಿತು. ಬಂದರಿನ ಅಧಿಕಾರಿಗಳೆಲ್ಲಾ ಒಮ್ಮತದ ತೀರ್ಮಾನಕ್ಕೆ ಬಂದರು. ಪತ್ರಿಕೆಯಲ್ಲಿ ದೊಡ್ಡ ಜಾಹೀರಾತು ಕೊಡುವುದು – ಯಾವುದೇ ನಿಬಂಧನೆ ಇಲ್ಲದೆ ಎಲ್ಲರೂ ತಮಗೆ ತೋಚಿದ ಉಪಾಯಗಳನ್ನು ಕಾರ್ಯಗತಗೊಳಿಸಲು ಅವಕಾಶ ಕೊಡುವುದು ಎಂಬುದು ಠರಾವು. ಪ್ರತಿಯೊಂದು ಪತ್ರಿಕೆಯಲ್ಲೂ ಮರುದಿನ ಪೂರ್ತಿಪುಟದ ಜಾಹೀರಾತು ಅಚ್ಚಾಯಿತು. ಇಲಿಗಳ ಕಾಟ ನಿಲ್ಲಿಸುವವರಿಗೆ ಒಂದು ಕೋಟಿ ರೂಪಾಯಿ ಬಹುಮಾನ ! ಇಂತಹ ಸ್ಪರ್ಧೆಯನ್ನು ಯಾರೂ ಎಲ್ಲೂ ಕೇಳಿರಲಿಲ್ಲ. ಬಂದರಿನ ಚೇರ್ಮನ್ನರಿಂದ ವಿಶೇಷ ಕೊಡುಗೆ – ತನ್ನ ಮಗಳ ಜೊತೆ ವಿವಾಹ ! (ಅಕಸ್ಮಾತ್ ಗೆದ್ದವನಿಗೆ ಈಗಾಗಲೇ ವಿವಾಹವಾಗಿದ್ದರೆ ಅವನ ಹೆಂಡತಿಗೆ ವಜ್ರದ ಹಾರದ ಉಡುಗೊರೆ !) ಈ ಹುಡುಗಿಯೋ - ಸೌಂದರ್ಯರಾಣಿ ಎಂದೇ ಹೆಸರು ಪಡೆದವಳು. ಕಾಲೇಜಿನಲ್ಲಿ ಎಲ್ಲ ಸ್ಪರ್ಧೆಗಳಲ್ಲೂ ಬಹುಮಾನ ಪಡೆದವಳು. ವಯೊಲಿನ್ ನುಡಿಸಬಲ್ಲಳು. ಈಜುವುದರಲ್ಲೂ ಪ್ರವೀಣೆ. ಕ್ರಿಕೆಟ್ ಚೆನ್ನಾಗಿ ಆಡುವಳು – ಒಟ್ಟಿನಲ್ಲಿ ಮಂಗಳೂರಿನ ಯುವಕರ ಕನಸಿನ ಕನ್ಯೆ.



ಈ ಜಾಹೀರಾತನ್ನು ಪ್ರತಿಯೊಬ್ಬನೂ/ಳೂ ಓದಿರಲೇಬೇಕು. ಕೋಸಯ್ಯನ ಅಜ್ಜಿ ಓದಿರಲಾರಳು. ಏಕೆಂದರೆ ಅವಳಿಗೆ ಪತ್ರಿಕೆಗಳ ಮೇಲೆ ನಂಬಿಕೆ ಇರಲಿಲ್ಲ. ಆಕಾಶವಾಣಿ ಸುದ್ದಿ ಅವಳಿಗೆ ಅಚ್ಚುಮೆಚ್ಚು. ಆದ್ದರಿಂದ ವಿಷಯವಂತೂ ಅವಳಿಗೆ ತಿಳಿಯಿತು.

ಈ ಸ್ಪರ್ಧೆಯಲ್ಲಿ ಭಾಗವಹಿಸುವವರು ತಮ್ಮ ತಮ್ಮ ಸಾಮಗ್ರಿಗಳನ್ನು ತಾವೇ ಒದಗಿಸಿಕೊಳ್ಳಬೇಕಾಗಿತ್ತು. ಇದು ವೆಚ್ಚದ ಬಾಬ್ತು. ಆದರೂ ಈ ಸ್ಪರ್ಧೆಗೆ ಇಳಿದವರೆಷ್ಟು ಗೊತ್ತೆ?

ಮರುದಿನ ಮಂಗಳೂರಿನ ಅಂಚೆಪೆಟ್ಟಿಗೆಗಳೆಲ್ಲಾ ಅರ್ಜಿಗಳಿಂದ ತುಂಬಿಹೋದವು. ಮೂರು ಅಂಚೆಪೇದೆಗಳಿಗೆ ಅಂದು ''ಓಟ''. ಡಬ್ಬಗಳನ್ನು ಖಾಲಿ ಮಾಡಿ ಬಂದರು – ಕಚೇರಿಗೆ ಅರ್ಜಿಗಳನ್ನು ಮುಟ್ಟಿಸುವುದು ಅವರಿಗೆ ಇಡೀ ದಿನದ ಕೆಲಸವಾಯಿತು. ಟೆಲಿಫೋನ್ ಮೂಲಕವೂ ಅರ್ಜಿ ಸಲ್ಲಿಸಬಹುದಾಗಿತ್ತು. ನಿರಂತರ ಕರೆಗಳಿಂದ ಟೆಲಿಫೋನ್ ತಂತಿಗಳು ಬಿಸಿಯಾಗಿ ಕರಗತೊಡಗಿದವು.

ಅರ್ಜಿದಾರರಲ್ಲಿ ಜಾದೂಗಾರರೂ, ಹಕ್ಕಿಪಿಕ್ಕಿಗಳು, ಕೆಮಿಸ್ಟ್‌ಗಳು, ಬ್ಯಾಕ್ಟೀರಿಯಾಲಜಿಸ್ಟ್‌ಗಳು, ಜೀವವಿಜ್ಞಾನಿಗಳು, ಬೇಟೆಗಾರರೂ ಅಲ್ಲದೆ ವೇದಾಂತಿಗಳೂ ಸೇರಿದ್ದರು. ಎಲ್ಲರಿಗೂ ಅವಕಾಶವಿತ್ತು. ಆದರೂ ಮುಂದಿನ ಒಂದು ತಿಂಗಳಲ್ಲಿ ಕೇವಲ ಹತ್ತಿಪ್ಪತ್ತು ಇಲಿಗಳು ಸತ್ತವು. ಇಷ್ಟೆಲ್ಲ ಜನಗಳ ಪ್ರಯೋಗಗಳಿಂದ ಸತ್ತವೋ ಅಥವಾ ತಿಂದಿದ್ದು ಹೆಚ್ಚಾಗಿ ಸತ್ತವೋ – ಅಥವಾ ವಯೋಧರ್ಮಕ್ಕನುಗುಣವಾಗಿ ಸತ್ತವೋ – ಅಂತೂ ಸತ್ತವು.




ಪುಸ್ತಕ ಪ್ರದರ್ಶನ

ಬೆಂಗಳೂರು ರಾಜಾಜಿನಗರ ಬಡಾವಣೆಯಲ್ಲಿ ನವಕರ್ನಾಟಕ ಪುಸ್ತಕ ಪ್ರದರ್ಶನ ಯಶಸ್ವಿಯಾಗಿ ಜರುಗಿತು.

ಚಿಕ್ಕೋಸನಿಗೆ ಇದು ತಮಾಷೆ ಎನ್ನಿಸಿತು. ಆದರೆ, ಜಗ್ಗು ಚಿನ್ನು ಮತ್ತು ಜನ್ನು ಗಂಭೀರವಾಗಿ ಆಲೋಚಿಸತೊಡಗಿದರು.

ಮೊದಲು ಹೊರಟವನು ಜಗ್ಗು. ಶಾಲೆಯಲ್ಲಿ ಮಾಸ್ತರರನ್ನು ಬೇಸ್ತು ಬೀಳಿಸಿದ ಹಾಗೆ ಈ ಇಲಿಗಳನ್ನು ಹಿಡಿಯಲು ಸಾಧ್ಯವಿಲ್ಲ ಎಂದಾತನಿಗೆ ಗೊತ್ತಿತ್ತು. ಗುಜರಿಯಲ್ಲಿ ಬಿದ್ದಿದ್ದ ಅಸಂಖ್ಯಾತ ಬೋನುಗಳನ್ನೂ ಅವನು ನೋಡಿದ್ದ. ಬೋನುಗಳನ್ನೇ ಬಳಸಬೇಕು; ಆದರೆ ಅವು ನೋಡಲು ಬೋನಿನಂತಿರಬಾರದು; ತಂತಿಗಳಿರಬಾರದು; ಅವುಗಳಲ್ಲಿ ಬೀಳುವುದು ಮಾತ್ರ ಸಾಧ್ಯವಾಗಬೇಕು; ಹೊರಗೆ ಬಾರದಂತಿರಬೇಕು – ಇಷ್ಟೆಲ್ಲಾ ಲೆಕ್ಕಾಚಾರ ಹಾಕಿ ಅವನು ಬಳ್ಳದಂತೆ ಉದ್ದುದ್ದನೆಯ ಬೋನು ರಚಿಸಿದ. ಹಳೆಯ ತಗಡಿನ ಡಬ್ಬಿಗಳನ್ನು ಸೇರಿಸಿ ಉದ್ದುದ್ದನೆಯ ಡಬ್ಬಿ ಮಾಡಿದ. ಇದು ನೆಟ್ಟಗೆ ನಿಲ್ಲಿಸಿದ ಚಪ್ಪಲಿಗಳ ಪೆಟ್ಟಿಗೆಯಂತೆ ಕಾಣುತ್ತಿತ್ತು. ಮೇಲೆ ಮುಚ್ಚಳ. ಎಂಥ ಮುಚ್ಚಳ ? ಒಳಕ್ಕೆ ಮಾತ್ರ ತೆರೆದುಕೊಳ್ಳುವಂತಹದು. ಒಳಗಿನಿಂದ ಏನೇ ಮಾಡಿದರೂ ತೆಗೆಯಲಾಗದು. ಈ ಉಪಾಯವೇನೋ ಹೊಸದೇ. ಆದರೆ ದುಡ್ಡು ? ಜಗ್ಗು ಅಪ್ಪನಿಂದ ಸಾಲ ಪಡೆದ. ಊರಲ್ಲಿದ್ದ ಹಳೆಯ ತಗಡುಗಳನ್ನೆಲ್ಲಾ ಜಮಾಯಿಸಿದ.

ಕೆಲಸವಿಲ್ಲದೆ ಆಕಳಿಸುತ್ತ ಕುಳಿತಿದ್ದ ಕಮ್ಮಾರ ತಿಮ್ಮನಿಗೆ ಈಗ ಕೈ ತುಂಬಾ ಕೆಲಸ. ಒಟ್ಟು ೧೯೩೧ ಬೋನುಗಳು ತಯಾರಾದವು.

ಹದಿನೇಳು ಬೋನುಗಳು ಸರಿಯಾಗಿ ಕೆಲಸ ಮಾಡುತ್ತಿರಲಿಲ್ಲ. ಉಳಿದವನ್ನು ಗಾಡಿಯ ಮೇಲೆ ಹೇರಿಕೊಂಡು ಜಗ್ಗು ನಗರ ಕಛೇರಿಗೆ ಬಂದ. ಅಧಿಕಾರಿಗಳ ಪರವಾನಿಗೆ ಪಡೆದು ಬಂದರಿಗೆ ನಡೆದ. ಬಂದರಿನ ಅಧಿಕಾರಿ ''ಇಷ್ಟೇ ಬೋನುಗಳೇ ? ಏನೇನೂ ಸಾಲದು'' ಎಂದನಾದರೂ ಇಳಿಸಿಕೊಟ್ಟ. ಬೋನುಗಳನ್ನು ಉದ್ದುದ್ದವಾಗಿ ನಿಲ್ಲಿಸಿ ಒಳಗೆ ಪರಿಮಳಭರಿತ ತಿಂಡಿಗಳನ್ನು ಇರಿಸಿದ. ಡಬ್ಬ ಹತ್ತುವ ಇಲಿ ಬಾಗಿಲು ಹುಡುಕಲು ಮೇಲೇರುತ್ತದೆ. ಮುಚ್ಚಳದ ಮೇಲೆ ಕಾಲಿಟ್ಟ ಕೂಡಲೇ ಒಳಗೆ ಬೀಳುತ್ತದೆ. ಎಷ್ಟೇ ಎಗರಿದರೂ ಮುಚ್ಚಳ ತೆಗೆಯಲಾರದು. ಏಕೆಂದರೆ ಮುಚ್ಚಳವನ್ನು ಒಳಗಿನಿಂದ ತೆಗೆಯುವಂತೆಯೇ ಇಲ್ಲ. ಎಲ್ಲ ಬೋನುಗಳೂ ತಯಾರಾಗುವಾಗ ಸಂಜೆಯಾಯಿತು.

ಜಮೈಕಾದಿಂದ ಹಡಗೊಂದು ಬಂದು ನಿಂತಿತ್ತು. ಬಾಳೆಹಣ್ಣು, ಸಕ್ಕರೆ ಇನ್ನೂ ಏನೇನೋ ತುಂಬಿದ್ದವು. ಜಗ್ಗು ಹಡಗಿನುದ್ದಕ್ಕೂ ಬೋನುಗಳನ್ನು ಇರಿಸಿದ. ರಾತ್ರಿ ಇಲಿಗಳು ಬರುವ ಹೊತ್ತಿಗೆ ಬೋನುಗಳು ಸಿದ್ಧವಾಗಿದ್ದವು.

ಆ ರಾತ್ರಿ ಒಂಭೈನೂರ ಹದಿನೆಂಟು ಇಲಿಗಳು ಬೋನುಗಳಲ್ಲಿ ಸಿಕ್ಕಿಬಿದ್ದವು. ಜಗ್ಗು ಖುಷಿಯಾಗಿ ಕುಣಿದಾಡಿದ. ಕೋಟಿರೂಪಾಯಿ ಬಹುಮಾನ ಸಿಕ್ಕಂತೆಯೇ ಎಂದು ಆನಂದಪಟ್ಟ. ಆದರೆ ಮರುರಾತ್ರಿ ಕೇವಲ ಮೂರು ಇಲಿಗಳು ಬಿದ್ದವು; ಆ ಮುಂದಿನ ರಾತ್ರಿ ಕೇವಲ ಎರಡು ! ಇಲಿಗಳ ರಾಜನಿಗೆ ಆಗಲೇ ತಗಡಿನ ಡಬ್ಬಗಳ ಗುಟ್ಟು ತಿಳಿದಿತ್ತು; ಅವುಗಳಿಂದ ದೂರವಿರಿ ಎಂದು ಆದೇಶವನ್ನೂ ಹೊರಡಿಸಿಬಿಟ್ಟಿದ್ದ. ಈ ಐದು 'ತಲೆಹರಟೆ' ಇಲಿಗಳು ಮಾತ್ರ ಸಿಕ್ಕಿಬಿದ್ದವು.

ಜಗ್ಗು ನಿರಾಶನಾದ. ಈಗ ಚಿನ್ನು ಹೊರಟ. ಇವನು ತನ್ನ ಕೆಮಿಸ್ಟ್ರಿಯ ಜ್ಞಾನವನ್ನೆಲ್ಲಾ ಉಪಯೋಗಿಸಿ ಹೊಸಬಗೆಯ ವಿಷವೊಂದನ್ನು ತಯಾರಿಸಿದ. ಇದಕ್ಕೆ ರುಚಿಯೂ ಇಲ್ಲ; ವಾಸನೆಯೂ ಇಲ್ಲ. ಇದನ್ನು ಹೇಗೆ ಮಾಡಿದ ಎಂದು ನಾನು ನಿಮಗೆ ಹೇಳುವುದಿಲ್ಲ. ಏಕೆಂದರೆ ಇದನ್ನು ಉಪಯೋಗಿಸಿ ನಿಮ್ಮಲ್ಲಿ ಯಾರಾದರೂ ಭಯಂಕರ ಕೊಲೆಗಡುಕರಾಗಿಬಿಡಬಹುದು. ಜೊತೆಗೆ ಅವನು ಇನ್ನೊಂದು ಪರಿಮಳವನ್ನೂ ತಯಾರಿಸಿದ. ಫ್ರಾನ್ಸ್‌ನಿಂದ ಬರುವ 'ಚೀಸ್'ನಲ್ಲಿ ಮಾತ್ರ ಈ ಪರಿಮಳವಿರುತ್ತದೆ. ಮಿಥೈಲ್-ಹೆಪ್ಟಡಿಸೈಲ್- ಕೀಟೋನ್- ಎಂಬುದರಿಂದ ಈ ಪರಿಮಳ ಬರುತ್ತದೆ ಎಂದು ಚಿನ್ನು ಕಂಡುಹಿಡಿದುಕೊಂಡ. ಇಲಿಗಳಿಗೆ ವಿಶೇಷವಾಗಿ ಈ ಪರಿಮಳ ಪ್ರಿಯವಂತೆ.

ಹೊಸ ಪರಿಮಳವನ್ನು ತಯಾರಿಸಲು ಅವನಿಗೆ ಹೆಚ್ಚು ವೆಚ್ಚವಾಗಲಿಲ್ಲ. ಆದರೆ

ಅಪ್ಪನ ಬಳಿ ಸಾಲ ಕೇಳಲೇಬೇಕಾಯಿತು. ಮಂಗಳೂರಿನ ಬೇಕರಿಗಳಲ್ಲಿದ್ದ ಎಲ್ಲ 'ಚೀಸ್'ಗಳನ್ನೂ ಕೊಂಡು ಬಂದರಿಗೆ ನಡೆದ. ಹತ್ತು ಸಾವಿರ ಪೆಟ್ಟಿಗೆಗಳಲ್ಲಿ ಚೀಸ್‌ಗಳನ್ನು ಓರಣವಾಗಿ 'ಪ್ಯಾಕ್' ಮಾಡಿದ. ಈಚೆ ಬಿದ್ದಿರುವ ಚೀಸ್‌ಗಳನ್ನು ಇಲಿಗಳು ಮುಟ್ಟುವುದಿಲ್ಲವಲ್ಲ, ಅದಕ್ಕೇ ಈ ಉಪಾಯ. ಈ ಡಬ್ಬಿಗಳನ್ನು ನೂಕುಗಾಡಿಯ ಮೇಲೆ ಇಟ್ಟುಕೊಂಡು ಬಂದರಿನ ನೌಕರ ಹೊರಟ. ಅವನ ಹಿಂದೆ ಜಗ್ಗು - ಅವನ ಕೈಯಲ್ಲಿ ಎರಡು ಪಿಚಕಾರಿಗಳು, ಒಂದರಿಂದ ವಿಷ, ಇನ್ನೊಂದರಿಂದ ಪರಿಮಳ ಹೀಗೆ ಎರಡನ್ನೂ ಡಬ್ಬಿಗಳ ಮೇಲೆ ಸಿಂಪಡಿಸುವುದೇ ಉದ್ದೇಶ. ಡಬ್ಬಿಗಳನ್ನು ಅಲ್ಲಲ್ಲಿ ಉದುರಿಸಿಕೊಂಡು ಹೊರಟರು ಇಬ್ಬರೂ. ಬಂದರು ಕಟ್ಟೆಯಲ್ಲೆಲ್ಲಾ ಪರಿಮಳವೋ ಪರಿಮಳ. ವಿಷಯ ತಿಳಿಯದ ಇಲಿಗಳು, "ಇದ್ಯಾವುದೋ ವಿದೇಶೀ ಚೀಸ್ ; ಆಹಾ ! ಎಂಥ ಪರಿಮಳ" ಎಂದು ಮಾತನಾಡಿಕೊಂಡು ರಾತ್ರಿ ಆದರೆ ಸಾಕೇ ಎಂದು ಕಾಯತೊಡಗಿದವು. ರಾತ್ರಿಯಾದೊಡನೆ ಡಬ್ಬಿಗಳ ಬೇಟೆ ಆರಂಭವಾಯಿತು. ಒಂದೆರಡು ಡಬ್ಬಿಗಳು ರಾಜನನ್ನೂ ಮುಟ್ಟಿದವು. ಆದರೆ ಆಗ ತಾನೇ ಪುಷ್ಕಳ ಭೋಜನ ಮುಗಿಸಿದ್ದ ರಾಜ ಅದನ್ನು ತಿನ್ನಲಿಲ್ಲ.

ವಿಷ ಕೆಲಸ ಆರಂಭಿಸಿದ್ದು ನಿಧಾನವಾಗಿ, ಬೆಳಗಿನ ಜಾವ ಮೂರುಗಂಟೆಯ ಹೊತ್ತಿಗೆ ಇಲಿಗಳು ಸಾಯತೊಡಗಿದವು. ರಾಜನಿಗೆ ಹೊಸ ಡಬ್ಬಿಯ ಮೇಲೆ ಅನುಮಾನ ಬಂದಿತು. ಜೈಲಿನಲ್ಲಿದ್ದ ಖೈದಿ ಇಲಿಯೊಂದನ್ನು ಕರೆಸಿದ. ಈ ಖೈದಿ ಅತಿ ಕ್ರೂರ ಕೊಲೆಗಡುಕ. ಹೆಂಡತಿ ಮಕ್ಕಳನ್ನೇ ಕೊಂದು ಹಾಕಿದ್ದವ. ಇವನಿಗೆ ರಾಜ 'ಚೀಸ್' ತಿನ್ನಲು ಕೊಟ್ಟ (ಗಲ್ಲಿಗೇರಿಸುವ ಮೊದಲು ಪಾಯಸ ಕೊಡುತ್ತಾರಂತಲ್ಲ ಹಾಗೆ). ಆ ಖೈದಿ ಸತ್ತು ಬೀಳುವಾಗ ಬೆಳ್ಳಂಬೆಳಕಾಗಿತ್ತು. ಹೊಸ ಪರಿಮಳಯುಕ್ತ ಡಬ್ಬಿಗಳನ್ನು ಯಾರೂ ಮುಟ್ಟಬಾರದೆಂದು ರಾಜಾಜ್ಞೆ ಹೊರಟಿತು.

ಆಗ ಬಂದರಿನಲ್ಲಿ ಜಗ್ಗು ಕುಣಿದಾಡುತ್ತಿದ್ದ. ೪೫೧೪ ಇಲಿಗಳ ಹೆಣಗಳು ದೊರಕಿದವು. ಈಗಲೋ ಆಗಲೋ ಎಂಬಂತೆ ಕೆಲವು ಬಿದ್ದುಕೊಂಡಿದ್ದವು. ಬಂದರಿನ ಅಧಿಕಾರಿಗಳಿಗೂ ತುಂಬಾ ಖುಷಿಯಾಯಿತು. "ಈ ರಾತ್ರಿ ಇನ್ನೊಮ್ಮೆ ಪ್ರಯೋಗಿಸಿ ಇಲಿಗಳ ಹುಟ್ಟಡಗಿಸೋಣ" ಎಂದು ಮಾತನಾಡಿಕೊಂಡು ಚಿನ್ನುವಿಗೆ ದುಡ್ಡು ಕೊಟ್ಟು ಕಳುಹಿಸಿದರು – ಇನ್ನಷ್ಟು ಚೀಸ್ ತಾ ಎಂದು. ರಾಜಾಜ್ಞೆಯ ವಿಷಯ ಅವರಿಗೇನು ಗೊತ್ತು ? ಪಾಪ ! ಆ ರಾತ್ರಿ ಇಲಿಗಳು ಡಬ್ಬಿಯನ್ನು ಮುಟ್ಟಲೇ ಇಲ್ಲ.



ಚಿನ್ನು ಪೆಚ್ಚು ಮುಖ ಹಾಕಿಕೊಂಡು ಹಿಂದಿರುಗಿದ. ಚೇರ್ಮನ್ನರ ಮಗಳನ್ನು ಮದುವೆಯಾಗುವ ಕನಸು ನುಚ್ಚು ನೂರಾಯಿತು. ಅದಕ್ಕಿಂತ ತಲೆನೋವಾದದ್ದು ಅವನ ಮೈಗಂಟಿದ ಪರಿಮಳದಿಂದ. ಅದು ಅವನ ಮೈಯನ್ನು ಬಿಟ್ಟು ತೊಲಗಲು ಸುಮಾರು ಒಂದು ತಿಂಗಳೇ ಬೇಕಾಯಿತು.

ಅಣ್ಣಂದಿರ ಪೆಚ್ಚು ಮೋರೆ ನೋಡಿದ ಜನ್ನು ತಾನು ಹೊರಟುನಿಂತ. ಅವನ ಉಪಾಯವೇ ಬೇರೆ. ಇದಕ್ಕೆ ದುಡ್ಡೂ ತುಂಬಾ ಬೇಕಾಗಿತ್ತು. ಕೋಟಿ ರುಪಾಯಿ ಬಹುಮಾನದ ಆಸೆಯಿಂದ ಅಪ್ಪ ಮತ್ತೆ ಸಾಲ ಕೊಟ್ಟ. ಅದು ಸಾಕಾಗದೆ ಅವನು ಉಳಿದವರಿಂದಲೂ ಸಾಲ ತೆಗೆದ (ನನ್ನಿಂದಲೂ). ಕಬ್ಬಿಣವನ್ನು ಸಣ್ಣಗೆ ಪುಡಿ ಮಾಡಿ ಕಾಮತರ ಬೇಕರಿಗೆ ಒಯ್ದು, ಬಿಸ್ಕತ್‌ಗಳಿಗೆ ಈ ಪುಡಿ ಬೆರೆಸಿ, ಬಿಸ್ಕತ್‌ಗಳನ್ನು ಬಂದರಿನಲ್ಲಿ ಚೆಲ್ಲಾಡಿದ. ಮೊದಮೊದಲು ಇಲಿಗಳು ಅವನ್ನು ತಿನ್ನಲಿಲ್ಲ. ಅವುಗಳಿಂದ ಅಪಾಯ ಇಲ್ಲ ಎಂದಾದಮೇಲೆ (ಬಹುಶಃ ರಾಜ ಪರೀಕ್ಷೆ ಮಾಡಿರಬೇಕು) ಧಾರಾಳವಾಗಿ ತಿನ್ನ ತೊಡಗಿದವು.

ಇಲಿಗಳನ್ನು ಬಿಸ್ಕತ್ ತಿನ್ನಲು ತೊಡಗಿಸಿದ ಜನ್ನು ತನ್ನ ಕೆಲಸ ಮುಂದುವರಿಸಿದ. ದೊಡ್ಡ ದೊಡ್ಡ ಎಲೆಕ್ಟ್ರೋ ಮ್ಯಾಗ್ನೆಟ್‌ಗಳನ್ನು ತಯಾರಿಸಿದ. ಏಳು ಹಡಗುಗಳು ಬಂದರುಕಟ್ಟೆಯಲ್ಲಿದ್ದವು. ಒಂದೊಂದರ ಸಮೀಪ ಒಂದೊಂದು ಮ್ಯಾಗ್ನೆಟ್ ಇರಿಸಿದ. ಇವುಗಳ ಪಕ್ಕ ದೊಡ್ಡ ದೊಡ್ಡ ಕಡಾಯಿಗಳನ್ನು ನಿಲ್ಲಿಸಿದ. ಇವು ನೆಲದ ಮಟ್ಟದಿಂದ ಕೆಳಗಿದ್ದವು. (ಕಾಣದೇ ಕಾಲಿಟ್ಟರೆ ಒಳಗೆ ಬೀಳುವಂತೆ.)

ಇವೆಲ್ಲಾ ತಯಾರಾದ ಮೇಲೆ ಜನ್ನು ವಿದ್ಯುಚ್ಛಕ್ತಿ ಮಂಡಲಿಗೆ ಹೊರಟ. ರಾತ್ರಿ ಒಂದು ಗಂಟೆಗೆ ತನಗೆ ಅತಿ ಹೆಚ್ಚು ಕರೆಂಟ್ ಬೇಕಾಗುವುದರಿಂದ 'ಲೋಡ್‌ಶೆಡಿಂಗ್' ಮಾಡಬೇಕೆಂದು ವಿನಂತಿಸಿಕೊಂಡ. ವಿಷಯ ವಿವರಿಸಿದ ಮೇಲೆ ಒಪ್ಪಿಗೆ ದೊರೆಯಿತು.

ಕೆಲವೊಂದು ವಿಶೇಷ ಎಚ್ಚರಿಕೆಗಳ ಬಗ್ಗೆ ಜನ್ನು ವಿನಂತಿಸಿಕೊಂಡಾಗ ಬಂದರಿನ ಅಧಿಕಾರಿಗಳು ಎಲ್ಲರಿಗೂ ನೋಟೀಸು ಕಳಿಸಿ ಬೋರ್ಡು ಬರೆಯಿಸಿ ಅಲ್ಲಲ್ಲಿ ತೂಗು ಹಾಕಿದರು. ಅದು ಹೀಗಿತ್ತು.

**ವಿಶೇಷ ಸೂಚನೆ**



೧. ರಾತ್ರಿ ಪಾಳಿಯ ಬಂದರು ಕಟ್ಟೆ ನೌಕರರು ಮೊಳೆ ಹೊಡೆದಿರುವ ಬೂಟುಗಳನ್ನು ಧರಿಸುವಂತಿಲ್ಲ.
೨. ರಾತ್ರಿ ಒಂದು ಗಂಟೆಯ ಒಳಗಾಗಿ ಎಲ್ಲ ಕಬ್ಬಿಣದ ವಸ್ತುಗಳನ್ನು (ಸ್ಕ್ರೂ ಡ್ರೈವರ್, ಪ್ಲೈಯರ್, ಮೊಳೆಗಳು ಮುಂತಾದವನ್ನು ) ಭದ್ರವಾಗಿ ಕಟ್ಟಿ ಪೆಟ್ಟಿಗೆಗಳಲ್ಲಿ ಇಡಬೇಕು.
೩. ಹಡಗುಗಳನ್ನು ಭದ್ರವಾಗಿ ಬಿಗಿದು ಕಟ್ಟಬೇಕು. ಒಂದೇ ಲಂಗರು ಸಾಕಾಗುವುದಿಲ್ಲ.

ಈ ವಿಚಿತ್ರ ಆಜ್ಞೆಗಳು ಜಾರಿಯಾದ ರಾತ್ರಿ ಜನ್ನು ಬಂದರು ಕಟ್ಟೆಯಲ್ಲಿ ಹಾಜರಾದ. ಬಂದರಿನ ಅಧಿಕಾರಿ ಮಾತ್ರ ಬೂಟು ಹಾಕಿಕೊಂಡೇ ಓಡಾಡುತ್ತಿದ್ದ. ಆ ಬೂಟುಗಳಿಗೆ ಅವನು ಚಿನ್ನದ ಮೊಳೆ ಹೊಡೆಸಿದ್ದಾನೆಂದು ಎಲ್ಲರಿಗೂ ತಿಳಿಯಬೇಡವೇ ?

ರಾತ್ರಿ ಒಂದೂವರೆಗೆ ಸರಿಯಾಗಿ ಜನ್ನು ಮೊದಲನೇ ಹಡಗಿನ ಎಲೆಕ್ಟ್ರೋ ಮ್ಯಾಗ್ನೆಟ್ ಅನ್ನು ಚಾಲೂ ಮಾಡಿದ. ಗುಡುಗುಡು ಎಂದು ಸದ್ದಾಗತೊಡಗಿತು. ಅಲ್ಲಲ್ಲಿ ಬಿದ್ದಿದ್ದ ಹಳೆಯ ತುಕ್ಕು ಹಿಡಿದ ಮೊಳೆಗಳು ಓಡಿಬರುತ್ತಿದ್ದವು. ಮ್ಯಾಗ್ನೆಟ್ ಹತ್ತಿರ ಬಂದು ಕಡಾಯಿಯೊಳಗೆ ಬಿದ್ದವು. ಹಿಂದೆಯೇ ಜಾರುತ್ತಾ ಜಾರುತ್ತಾ ಇಲಿಗಳು ಬರತೊಡಗಿದವು. ಬಂದರು ಕಟ್ಟೆಯವರೆಲ್ಲಾ ಬೆರಗಾಗಿ ನೋಡುತ್ತಿದ್ದ ಹಾಗೇ ಅವು ಕಡಾಯಿಯೊಳಗೆ ಬಂದು ಬಿದ್ದವು. ಈ ಸೆಳೆತಕ್ಕೆ ಪ್ರತಿಭಟಿಸುವ ಶಕ್ತಿಯೇ ಇಲ್ಲವೇನೋ ಎಂಬಂತೆ ಇಲಿಗಳ ಮೇಲೆ ಇಲಿಗಳು ಜರ‍್ರನೆ ಬಂದುಬಿದ್ದವು. ಕಡಾಯಿ ತುಂಬಿಹೋಯಿತು. ಈಗ ಮ್ಯಾಗ್ನೆಟ್ ಅನ್ನು ಆಫ್ ಮಾಡಿದ ಜನ್ನು ಕಡಾಯಿಯ ಮುಚ್ಚಳ ಮುಚ್ಚಿದ. ಮುಂದಿನ ಹಡಗಿಗೆ ಹೋದ. ಅಲ್ಲಿಯೂ ಇದೇ ಕತೆ. ಇಲಿಗಳಿಂದ ತುಂಬಿದ ಮೇಲೆ ಆ ಕಡಾಯಿಯನ್ನೂ ಬಂದೋಬಸ್ತ್ ಮಾಡಿದ. ಹೀಗೆ ಒಂದಾದಮೇಲೊಂದು ಮ್ಯಾಗ್ನೆಟ್ ಚಾಲೂ ಮಾಡಿ ಎಲ್ಲ ಕಡಾಯಿಗಳನ್ನೂ ಇಲಿಗಳಿಂದ ತುಂಬಿಸಿದ.

ಏಳನೆಯ ಮ್ಯಾಗ್ನೆಟ್ ಬಳಿಯೇ ರಾಜನ ಅರಮನೆ. ಯಾವ ವರದಿಗಾರರೂ ಬರಲೇ ಇಲ್ಲವೇಕೆ ಎಂದು ಆತ ಅನುಮಾನಪಡುತ್ತಿರುವಾಗ ಗುಡುಗುಡು ಸದ್ದು ಕೇಳಿತು. ಏನು ವಿಷಯ ನೋಡಿ ಬರೋಣವೆಂದು ತಾನೇ ಹೊರಟ. ಗೋಡೆಯ ಪಕ್ಕದಿಂದ ಯಾರೋ ಎಳೆಯುತ್ತಿರುವ ಅನುಭವವಾಯಿತು. ತಿರುಗಿ ನೋಡಿದರೆ ಯಾರೂ ಇಲ್ಲ. ಇದೇಕೆ ಹೀಗೆ ಎಂದುಕೊಳ್ಳುತ್ತಾ ಹೊರಗೆ ಕಾಲಿಟ್ಟನೋ ಇಲ್ಲವೋ ಜರ‍್ರೆಂದು ಜಾರುತ್ತಾ ಹೋದ. ಹಿಂದಕ್ಕೆ ಹೋಗಲು ಅವಕಾಶವೇ ಇಲ್ಲ. ಕಡಾಯಿಯೊಳಗೆ ಬಿದ್ದೇ ಬಿಟ್ಟ.

ಈ ಎಲ್ಲ ಪ್ರಕರಣ ಮುಗಿಯುವಾಗ ಬೆಳಕು ಹರಿಯಿತು. ಕಡಾಯಿಗಳಲ್ಲಿದ್ದ ಇಲಿಗಳ ಸಂಖ್ಯೆಯ ಅಂದಾಜೇ ತಿಳಿಯುವಂತಿರಲಿಲ್ಲ. ಹತ್ತಿಪ್ಪತ್ತು ಲಕ್ಷ ಎಂದು ಒಬ್ಬರೆಂದರೆ, ಮಿಲಿಯನ್ ಗಟ್ಟಲೆ ಎಂದರು ಮತ್ತೊಬ್ಬರು. ಊರಿನಲ್ಲೆಲ್ಲಾ ಇದೇ ಸುದ್ದಿ.



ಈ ಮಧ್ಯೆ ನಡೆದ ಒಂದೆರಡು ''ಅಪಘಾತ''ಗಳನ್ನು ಹೇಳಲೇಬೇಕು. ತಿಮ್ಮಯ್ಯ ಎಂಬುವನು ಬೂಟು ಕಳಚಲು ಮರೆತ. ಅವನನ್ನೂ ಮ್ಯಾಗ್ನೆಟ್ ಎಳೆದುಬಿಟ್ಟಿತು. ಜರ್ರೆಂದು ಜಾರುತ್ತಾ ಅವನೂ ಇಲಿಗಳೊಡನೆ ಕಡಾಯಿಯತ್ತ ಜಾರತೊಡಗಿದಾಗ ಅವನಿಗೆ ಅನಾಹುತದ ಅರಿವಾಯಿತು. ಜಾರುತ್ತಾ ಜಾರುತ್ತಾ ಕಷ್ಟಪಟ್ಟು ಬೂಟು ಕಳಚಿದ. ಬೂಟು ಓಡಿಹೋಗಿ ಕಡಾಯಿಯಲ್ಲಿ ಬಿದ್ದವು. ಆದರೆ ಎರಡು ಇಲಿಗಳು ಇವನ ಕಾಲ್ಬೆರಳುಗಳನ್ನು ಕಚ್ಚಿ ಹಿಡಿದಿದ್ದವು. ಸೆಳೆತ ಹೆಚ್ಚಾದಷ್ಟೂ ಜೋರಾಗಿ ಕಚ್ಚಿದವು. ಬೀಳುವ ರಭಸದಲ್ಲಿ ಬೆರಳುಗಳು ತುಂಡಾಗಿ ಇಲಿಗಳ ಬಾಯಲ್ಲೇ ಉಳಿದುಬಿಟ್ಟವು. ಇವನ ಜೀವ ಉಳಿಯಿತು. ಆದರೆ ಕಾಲ್ಬೆರಳುಗಳು ಹೋದವು.

ಸಿದ್ದಪ್ಪ ಎಂಬುವನಿಗೆ ಅನಿರೀಕ್ಷಿತವಾದ ಒಂದು ಅನುಕೂಲವಾಯಿತು. ಅವನು ಅತ್ಯುತ್ತಮ ಬಿಲಿಯರ್ಡ್ಸ್ ಆಟಗಾರ. ಒಳ್ಳೆಯ ಗುರಿ ಅವನದು. ಯುದ್ಧ ಕಾಲದಲ್ಲೋ ಏನೋ ಬಾಂಬ್ ಸಿಡಿದಾಗ ಅವನ ತಲೆಯೊಳಗೊಂದು ಶೆಲ್‌ನ ಚೂರು ಸೇರಿಕೊಂಡುಬಿಟ್ಟಿದ್ದಿತು. ಇದರಿಂದ ಅವನಿಗೆ ಅಪಾಯವೇನೂ ಆಗಿರಲಿಲ್ಲ. ಆದರೆ ಗುರಿ ಕೆಟ್ಟುಹೋಗಿತ್ತು. ಸೆಲ್‌ನ ಚೂರನ್ನು ತೆಗೆಯಲು ತಲೆಗೆ ಆಪರೇಷನ್ ಮಾಡಬೇಕಾಗಿತ್ತು. ಮಾಡಿಸಿಕೊಳ್ಳಲು ಇವನು ಹಿಂದೇಟು ಹೊಡೆದರೆ, ಮಾಡಲು ಡಾಕ್ಟರರೂ ಹಿಂದೇಟು ಹೊಡೆದರು. ಹಾಗಾಗಿ ಅದು ತಲೆಯಲ್ಲೇ ಇತ್ತು. ಆದಿನ ಇವನು ಬಂದರು ಕಟ್ಟೆಯ ಬಳಿಯೇ ಇದ್ದ. ಮ್ಯಾಗ್ನೆಟ್ ಚಾಲೂ ಮಾಡಿದಾಗ ಆ ಸೆಳೆತಕ್ಕೆ ಇವನ ತಲೆಯೊಳಗಿಂದ ಆ ಚೂರು ಹೊರಗೆ ಬಂದುಬಿಟ್ಟಿತು! ಅದು ಚರ್ಮವನ್ನು ತೂರಿ ಬರುವಾಗ ಆತನಿಗೆ ಅಗಾಧ ಯಾತನೆಯಾಯಿತು. ಆದರೆ ಅದು ಕ್ಷಣಿಕ. ಮುಂದೆ ಅದರಿಂದ ಒಳ್ಳೆಯದೇ ಆಯಿತು. ಈಗ ಅವನು ಮತ್ತೆ ಮೊದಲಿನಂತಾಗಿದ್ದಾನೆ. ಬಿಲಿಯರ್ಡ್ಸ್ ಚಾಂಪಿಯನ್ ಆಗಿದ್ದಾನೆ.

ಮರುದಿನ ರಾತ್ರಿ ಪುನಃ ಇದೇ ಕಾರ್ಯಾಚರಣೆ ನಡೆಯಿತು. ಪುನಃ ಕಡಾಯಿಗಳಲ್ಲಿ ಇಲಿಗಳು ತುಂಬಿದವು. ರಾಜನೇ ಕಾಣೆಯಾಗಿಬಿಟ್ಟಿದ್ದರಿಂದ ಇಲಿಗಳು ದಿಕ್ಕೆಟ್ಟಿದ್ದವು. ಆ ಮರುದಿನವೂ ರಾತ್ರಿ ಕಡಾಯಿ ತುಂಬಿದವು. ಕೆಲವು ಇಲಿಗಳು ಹಡಗುಗಳಿಗೆ ಅಂಟಿಕೊಂಡು ದೂರದ ಲಂಡನ್, ಅಮೆಸ್ಟರ್‌ಡಾಂ, ಸಿಂಗಪುರ ಇಂತಹ ಊರುಗಳಿಗೆ ಹೋಗಿದ್ದರಿಂದ ಬದುಕಿಕೊಂಡವು. ಒಟ್ಟಿನಲ್ಲಿ ಮಂಗಳೂರಿನ ಇಲಿಗಳ ಕಾಟ ನಿವಾರಣೆಯಾಯಿತು.

ಈಗ ನಗರಸಭೆಯವರು ಬೇರೆ ಊರಿನಿಂದ ನಾಯಿ ಮತ್ತು ಬೆಕ್ಕುಗಳನ್ನು ತರಿಸಿದರು. ಉಳಿದ ಮೂರು ಮತ್ತೊಂದು ಇಲಿಗಳನ್ನು ಹಿಡಿದುಹಾಕಿದರು.

ಈಗ ಜನ್ನು ಕೋಟ್ಯಾಧೀಶನಾದ. ಅಪ್ಪನಿಗೆ ಸಾಲವನ್ನು ಬೃಹತ್ ಮೊತ್ತದ ಬಡ್ಡಿಯೊಡನೆ ಹಿಂದಿರುಗಿಸಿದ. ಅಣ್ಣಂದಿರಿಗೂ ಸಾಕಷ್ಟು ಧನ ಸಹಾಯ ಮಾಡಿದ.

ಜನ್ನುವಿನ ಮದುವೆ ಸೌಂದರ್ಯರಾಣಿಯೊಡನೆ ನಡೆಯಿತು. ಈ ಮದುವೆ ಹಡಗಿನಲ್ಲಿ ನಡೆಯಬೇಕೆಂದು ಅವನಿಗೆ ಆಸೆ. ಇದಕ್ಕೆ ಮದುವೆಯ ರಿಜಿಸ್ಟ್ರಾರ್ ಆಕ್ಷೇಪ ಎತ್ತಿದರು. ಊರಿನ ಮೂರು ಮೈಲಿ ಒಳಗೆ ಮದುವೆಯಾದರೆ ವಧೂವರರು ತಮ್ಮ ಆಫೀಸಿಗೇ ಬರಬೇಕೆಂದು ಕಾನೂನು ಇದೆಯಂತೆ. ಜನ್ನು ಈ ಆಕ್ಷೇಪಕ್ಕೆ ಹೆದರಲಿಲ್ಲ. ಮೂರು ಮೈಲಿ ಆಚೆ ಸಮುದ್ರದ ಮಧ್ಯೆ ಹಡಗು ನಿಲ್ಲಿಸಿ ಅಲ್ಲಿಯೇ ಮದುವೆ ಮಾಡಿಕೊಂಡ.

ಜನ್ನುವಿನ ತಂಗಿ ಲಲ್ಲಿಯನ್ನು ಬಂದರಿನ ಅಧಿಕಾರಿ ಮದುವೆ ಮಾಡಿಕೊಂಡ (ಚಿನ್ನದ ಮೊಳೆಯ ಬೂಟುಧರಿಸಿ ಬಂದರು ಕಟ್ಟೆಯ ಮೇಲೆ ಓಡಾಡಿ ಜನ್ನುವಿನ ಗಮನ ಸೆಳೆದಿದ್ದವನೇ ಇವನು). ಅವನ ಬೂಟಿಗೆ ಚಿನ್ನದ ಮೊಳೆಗಳು; ಇವಳ ಚಪ್ಪಲಿಗೆ ವಜ್ರಗಳು.

ಜನ್ನುವಿನ ಅಣ್ಣಂದಿರೂ ಈಗ ಪ್ರತಿಷ್ಠಿತ ವ್ಯಕ್ತಿಗಳಾಗಿದ್ದಾರೆ. ಜಗ್ಗುವಿಗೆ ಜಾದೂಗಾರನ ಕೆಲಸ ಪ್ರಿಯ; ಅದನ್ನೇ ರೂಢಿಸಿಕೊಂಡಿದ್ದಾನೆ. ಜೆಸ್ಸು ಕೆಮಿಸ್ಟ್ರಿಯಲ್ಲಿ ಮಾಸ್ಟರ್ಸ್ ಮುಗಿಸಿ ವಿಶ್ವವಿದ್ಯಾಲಯದಲ್ಲಿ ಪ್ರೊಫೆಸರ್ ಆಗಿದ್ದಾನೆ. ಚಿಕ್ಕೋಸನ ಅಂಗಡಿ ಈಗ ಹೊಸ ಅವತಾರವನ್ನೇ ಪಡೆದಿದೆ.

ಜನ್ನುವಿಗೆ ಕೆಲಸದ ಅವಶ್ಯಕತೆಯೇ ಇಲ್ಲ. ಆದರೂ ಹೊಸದಾಗಿ ಸ್ಥಾಪಿತವಾಗಿರುವ ಟೆಲಿವಿಷನ್ ಕಂಪೆನಿಯಲ್ಲಿ ಇಂಜಿನಿಯರ್ ಆಗಿದ್ದಾನೆ. ಮೊನ್ನೆ ತಾನೇ ಸಮುದ್ರತೀರದಲ್ಲಿ ಅವನು ತನ್ನ ಎರಡು ಪುಟ್ಟ ಮಕ್ಕಳೊಡನೆ ಆಡುತ್ತಿದ್ದುದನ್ನು ಕಂಡೆ. ಒಟ್ಟಿನಲ್ಲಿ ಮಂಗಳೂರಿನ ಇಲಿಗಳಿಂದ ಕೋಸಯ್ಯನ ಸಂಸಾರ ಸ್ವರ್ಗಸುಖ ಕಂಡಿದೆ.



*(ಇದು ವಿಖ್ಯಾತ ವಿಜ್ಞಾನಿ ಜೆ. ಬಿ. ಎಸ್. ಹಾಲ್ಡೇನ್ ಅವರ **RATS** ಎಂಬ ಕಥೆಯ ಅನುವಾದ. ಲಂಡನ್ ಅನ್ನು ಮಂಗಳೂರನ್ನಾಗಿ ಮಾಡಿ ದೇಸಿ ಸೊಗಡನ್ನು ಸೇರಿಸುವ ಸ್ವಾತಂತ್ರ್ಯ ತೆಗೆದುಕೊಂಡು ಈ ಪ್ರಯತ್ನ ಮಾಡಿದ್ದೇನೆ.)*

**ಡಾ॥ ಬಿ. ಎಸ್. ಶೈಲಜಾ**
ಜವಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್,
ಬೆಂಗಳೂರು - ೫೬೦ ೦೦೧

**ಶ್ರದ್ಧಾಂಜಲಿ**

## ನಿಟ್ಟೂರು ಶ್ರೀನಿವಾಸರಾವ್ ಅವರಿಗೆ ನಮನ



ಪ್ರಜಾಪ್ರಭುತ್ವವು ಸರಾಸರಿ ನಿಯಮದಂತೆ ನಡೆಯುತ್ತದೆ. ಎಲ್ಲಾ ಶ್ರೇಷ್ಠರು, ಪರಿಣತರು, ಮೌಲ್ಯಗಳ ರಕ್ಷಕರು, ಎಂದಲ್ಲ; ಅಥವಾ ಎಲ್ಲರೂ ಕಬಳಿಸುವ ಜನರೇ ಎಂದೂ ಅಲ್ಲ. ಇದೊಂದು ಮಿಶ್ರಣ. ಬಹುಮತ ಎನ್ನುವುದು ಒಂದು ವಿಶಾಲ ತಳಹದಿ ಒದಗಿಸುತ್ತದೆ, ಅಷ್ಟೆ. ವೈಯಕ್ತಿಕ ನೆಲೆಯಲ್ಲಿ ನಿಂತು ತೀರ್ಮಾನ ಕೊಡುವುದನ್ನು ಸಂಪೂರ್ಣವಾಗಿ ತೊಡೆದುಹಾಕಲು ಸಾಧ್ಯವೆಂದು ನನಗನಿಸುವುದಿಲ್ಲ. ಎಲ್ಲರ ಒಪ್ಪಿಗೆಯನ್ನೂ ಪಡೆದಂತಹ ಅಂಶವೆಂದು ಯಾವುದನ್ನಾದರೂ ಹೇಳಿದರೆ ಅದು ಭ್ರಮೆ. ಯಾರನ್ನೂ ಕೇಳದೆ ವರ್ತಿಸುವ ಸರ್ವಾಧಿಕಾರಿಗಿಂತಲೂ ಬಹುಮತದಂತೆ ನಡೆಯುವ ಪ್ರಜಾಪ್ರಭುತ್ವದ ಕ್ರಮ ಉತ್ತಮವಾದ್ದು. ಯಾವನೋ ರಾಜನಿಗೆ ದೈವೀ ಹಕ್ಕಿದೆ ಎಂಬುದು ಪುರಾಣದ ಕಂತೆ, ಅಷ್ಟೆ. ಈಗಿನ ಹಂತದಲ್ಲಿ ''ರಾಜಾ ಪ್ರತ್ಯಕ್ಷ ದೇವತಾ'' ಎನ್ನುವುದು ಖಂಡಿತಾ ಸಾಧ್ಯವಿಲ್ಲ. ಬೇರೆಯದಕ್ಕಿಂತ ಪ್ರಜಾಪ್ರಭುತ್ವ ವಾಸಿ ಎಂದು ಹೇಳಲು ಅಡ್ಡಿಯಿಲ್ಲ. (ಆಗಸ್ಟ್ ೨೦೦೧ರಲ್ಲಿ ದಿ॥ ನಿಟ್ಟೂರರು 'ಹೊಸತು'ವಿಗೆ ನೀಡಿದ ಸಂದರ್ಶನದಿಂದ ಆಯ್ದ ಭಾಗ)

ಅವರದು ಬಹು ಅಪರೂಪದ, ಎತ್ತರದ ವ್ಯಕ್ತಿತ್ವ. ನಿಷ್ಠೆ, ನ್ಯಾಯಪರತೆ, ಕ್ರಿಯಾಶೀಲತೆಗೆ ಹೆಸರಾಗಿದ್ದ ನಿಟ್ಟೂರು ಶ್ರೀನಿವಾಸರಾಯರು ಇಂದು ನಮ್ಮೊಂದಿಗಿಲ್ಲ. ದಿವಂಗತ ನಿಟ್ಟೂರರಿಗೆ 'ಹೊಸತು' ಗೌರವ ಸೂಚಿಸುತ್ತದೆ.



ಡಿ. ಟಿ. ಲೋಹಿತ್

# ನನ್ನ ಕನಸಿನ ಪತ್ರಿಕೋದ್ಯಮ

"ಅಪ್ಪಾ, ಈಗ ವೀರಪ್ಪನ್ ಎಲ್ಲಿದ್ದಾನೆ ?"

ನನ್ನ ಹದಿನಾಲ್ಕು ವರುಷ ವಯಸ್ಸಿನ ಮಗಳ ಪ್ರಶ್ನೆಗೆ ಮನಸ್ಸಿನಲ್ಲಿಯೇ ಉತ್ತರ ತಡಕಾಡಿದೆ.

"ಕರ್ನಾಟಕ ಅಥವಾ ತಮಿಳುನಾಡಿನ ಯಾವುದೋ ಕಾಡಿನಲ್ಲಿರಬಹುದು" ಎಂದು ಹೇಳಿ ಜಾರಿಕೊಳ್ಳುವ ನನ್ನ ಪ್ರಯತ್ನ ವಿಫಲವಾಯಿತು.

"ಆದೇಕೆ ನಿನಗೆ ಗೊತ್ತಿಲ್ಲ?"

ಇವಳ ಪ್ರಶ್ನೆಗಳ ಸುರಿಮಳೆ ಆರಂಭವಾಯಿತಲ್ಲ, ದೇವರೇ ನನ್ನನ್ನು ಕಾಪಾಡಪ್ಪಾ ಎಂದುಕೊಂಡೆ. ಪೂರ್ವಾನುಭವ ದೇವರ ಮೊರೆ ಹೋಗುವ ಬುದ್ಧಿ ಕೊಟ್ಟಿತ್ತು; ಆದರೆ ನನ್ನ ದೇವರು ಅಷ್ಟು ಸುಲಭದಲ್ಲಿ ನನ್ನೆದುರು ಪ್ರತ್ಯಕ್ಷವಾಗುತ್ತಾನೆಯೇ !?

"ಅದಿರಲಿ, ಸದ್ದಾಮ್ ಹುಸ್ಸೇನ್ ಬದುಕಿದ್ದಾನೆಯೇ ?"

"ನನಗೆ ಗೊತ್ತಿಲ್ಲಮ್ಮ."

"ಕೆಲವು ದಿನಗಳ ಹಿಂದೆ ಬೆಂಗಳೂರಿನಲ್ಲಿ ನರಸಿಂಹಮೂರ್ತಿ ಎಂಬಾತ ಕಟ್ಟಿಸಿದ್ದ ಹಲವಾರು ಮನೆ-ಕಟ್ಟಡಗಳನ್ನು ಬಿ.ಡಿ.ಎ. ಅಧಿಕಾರಿಗಳು ಅಕ್ರಮವೆಂದು ಘೋಷಿಸಿ ಕೆಡವಿ ಹಾಕಿದರಲ್ಲ, ಆತನ ಮೇಲಿನ ಕೇಸುಗಳೆಲ್ಲಾ ಇತ್ಯರ್ಥವಾದುವೇ ?"

ನನಗೆ ಕಣ್ಣು ಕಣ್ಣು ಬಿಡುವಂತಾಯಿತು. ಇವಳ ಪ್ರಶ್ನೆಗಳ ಬತ್ತಳಿಕೆಯಲ್ಲಿ ಇನ್ಯಾವ್ಯಾವ ಬಾಣಗಳಿವೆಯೋ ಊಹಿಸಲಾರದೆ ತೊಳಲಾಡಿದೆ.

"ಮಾಜಿ ಮಂತ್ರಿ ನಾಗಪ್ಪನವರ ಕೊಲೆಯಾದ ಮೇಲೆ ಯಾವುದೋ ಮಠದ ಸ್ವಾಮಿಯೊಬ್ಬರು ಇನ್ನು ಕೆಲವೇ ದಿನಗಳಲ್ಲಿ ಇದಕ್ಕೆ ಪರಿಹಾರ ಸಿಗುತ್ತದೆ ಎಂದಿದ್ದರಲ್ಲಾ, ಏನಾಯಿತು ?"

ಏನಾಯಿತೆಂಬುದು ನನಗೆ ತಿಳಿಯದೆಂಬ ವಿಷಯ ಖಚಿತವಾಗಿಯೂ ನನಗೆ ಗೊತ್ತು. ಆದರೆ ಈಗಿನ ಕಾಲದ ಚಿಕ್ಕ ಮಕ್ಕಳಿಗೆ ಎಷ್ಟೆಲ್ಲಾ ಗೊತ್ತು ಎಂಬ ವಿಷಯವೂ ಖಚಿತವಾಯಿತು.

"ಹೋಗಲಿ, ಇದೊಂದಕ್ಕಾದರೂ ಉತ್ತರ ಕೊಡು, ಲಲ್ಲೂ ಪ್ರಸಾದ್ ಯಾದವ್ ಮೇಲಿದ್ದ ಮೇವಿನ ಮೊಕದ್ದಮೆಗಳೆಲ್ಲಾ ಏನಾದುವು ?"

"ನನಗೆ ಸ್ವಲ್ಪ ಕಾಲಾವಕಾಶ ಕೊಡಮ್ಮ, ಒಂದೆರಡು ದಿನಗಳಲ್ಲಿ ನಿನ್ನ ಪ್ರಶ್ನೆಗಳಿಗೆ ಉತ್ತರ ಹೇಳುವ ಪ್ರಯತ್ನ ಮಾಡುತ್ತೇನೆ" ಎಂದೆ. ಬೀಸುವ ದೊಣ್ಣೆ ಏಟು ಹೇಗಾದರೂ ತಪ್ಪಿಸಿಕೊಂಡು ಸಾವಿರ ವರ್ಷ ಬದುಕುಳಿಯುವ ಹವಣಿಕೆ ನನ್ನದು. ಹೇಗಾದರೂ ನಾಳೆಯ ವೇಳೆಗೆ ಹಳೆಯ ವೃತ್ತಪತ್ರಿಕೆಗಳನ್ನೆಲ್ಲಾ ಹುಡುಕಿ ಅವಳ ಈ ಹತ್ತಾರು ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳುತ್ತೇನೆಂಬ ಭರವಸೆಯಿಂದ ಹೀಗೆ ಹೇಳಿದ್ದೆ.

ಅಂದು ರಾತ್ರಿ ಸುಮಾರು ನಾಲ್ಕಾರು ತಿಂಗಳುಗಳ ವೃತ್ತಪತ್ರಿಕೆಗಳನ್ನೆಲ್ಲಾ ತಲೆಯಿಂದ ಬುಡದವರೆಗೂ ಹುಡುಕಿ ಬಿಟ್ಟೆ. ನನ್ನ ಮಗಳ ಪ್ರಶ್ನೆಗಳಲ್ಲಿ ಒಂದಕ್ಕಾದರೂ ಉತ್ತರ ಸಿಗಲಿಲ್ಲ. ಅದಿರಲಿ, ಈ ಕೆಲಸ ಮಾಡುತ್ತಿದ್ದಾಗ ನನ್ನ ಮನವೆಂಬ ಕೂಪದಲ್ಲಿ ಏಕಕಾಲದಲ್ಲಿಯೂ, ಬೇರೆ ಬೇರೆ ಕಾಲದಲ್ಲಿಯೂ ತಲೆಯೆತ್ತಿ ನಿಂತು ನನ್ನನ್ನು ಕಾಡಿದ ಬೇರೆಯೇ ನೂರಾರು ಪ್ರಶ್ನೆಗಳಲ್ಲಿ ಒಂದೆರಡಕ್ಕೂ ಉತ್ತರ ಸಿಗಲಿಲ್ಲ.

ಈ ಅನುಭವದಿಂದ ಹಲವಾರು ವಿಷಯಗಳು ನನ್ನನ್ನು ಮುತ್ತಿಕೊಂಡವು. ಯಾವುದೇ ಪತ್ರಿಕೆಯಾಗಲೀ, ನಿಯತಕಾಲಿಕವಾಗಲೀ ಅಂದಂದಿನ ರೋಮಾಂಚಕಾರಿ ಸುದ್ದಿಗಳನ್ನು ಮಾತ್ರ ದೊಡ್ಡ ಅಕ್ಷರಗಳಲ್ಲಿ ಮುದ್ರಿಸುವುದು ಮಾಮೂಲೇ. ಜನಸಾಮಾನ್ಯರ ನೆನಪಿನ ಶಕ್ತಿ ಕೂಡ ಅಷ್ಟಕ್ಕಷ್ಟೇ. ಅದರಲ್ಲಿಯೂ ಅತ್ಯಂತ ಶೀಘ್ರವಾಗಿ ಓದಿ ಮರೆಯುವ ವಿಷಯವೆಂದರೆ ಇಂದು ವೃತ್ತಪತ್ರಿಕೆಯ ಸಮಾಚಾರವೇ. ಹೀಗಾಗಿ ಜನಸಾಮಾನ್ಯರ ಈ ದುರ್ಬಲತೆಯ ಪೂರ್ಣ ಉಪಯೋಗವನ್ನು ಪತ್ರಿಕೆಗಳು ಚೆನ್ನಾಗಿ ಮಾಡಿಕೊಳ್ಳುತ್ತವೆ. ರೋಮಾಂಚಕಾರಿ ಸುದ್ದಿಗಳನ್ನು ಮಾತ್ರ ಮತ್ತಷ್ಟು ವೈಭವೀಕರಿಸಿ ಮುದ್ರಿಸಿ ತಮ್ಮ ಅಂದಂದಿನ ವ್ಯಾಪಾರವನ್ನು ವೃದ್ಧಿಗೊಳಿಸುವುದರಲ್ಲೇ ಮಗ್ನವಾಗಿರುತ್ತವೆ.

ಜನಸಾಮಾನ್ಯರಿಗೆ ಪ್ರಪಂಚದ, ದೇಶದ, ರಾಜ್ಯದ, ಪಟ್ಟಣದ ಹಾಗೂ ಗ್ರಾಮಗಳ ಸುದ್ದಿಗಳನ್ನು ಸಮಯೋಚಿತವಾಗಿ ತಲಪಿಸುವುದೇ ವೃತ್ತಪತ್ರಿಕೆಗಳ ಆದ್ಯ ಕರ್ತವ್ಯವೆಂಬುದು ನನ್ನ ಅನಿಸಿಕೆ. ರೇಡಿಯೊ, ಟಿವಿಗಳೂ ಈ ಕೆಲಸವನ್ನು ಮಾಡುತ್ತವಾದರೂ, ವೃತ್ತಪತ್ರಿಕೆಯು ಮಾಡುವಷ್ಟು ವಿವರವಾಗಿ, ಸಮರ್ಪಕವಾಗಿ ಮಾಡಲಾರವು. ಇದಕ್ಕೆ ಸಮಯಾಭಾವವೂ, ಆರ್ಥಿಕ ಮುಗ್ಗಟ್ಟೂ ಕಾರಣವಿರಬಹುದು. ವೃತ್ತಪತ್ರಿಕೆಯಷ್ಟು ಸುನಾಯಾಸವಾಗಿ, ಕಡಿಮೆ ವೆಚ್ಚದಲ್ಲಿ ಮತ್ಯಾವ ಮಾಧ್ಯಮವೂ ಈ ಕೆಲಸವನ್ನು ಮಾಡಲಾರದೆಂಬುದು ನಿರ್ವಿವಾದ.

ಆದರೆ ನಮ್ಮ ಪತ್ರಿಕೆಗಳು ಈ ಕೆಲಸವನ್ನು ಸಮರ್ಪಕವಾಗಿ, ಎಲ್ಲರ ಮನ ಮೆಚ್ಚುವಂತೆ ಮಾಡುತ್ತಿವೆಯೇ ಎಂಬ ವಿಷಯ ವಿವಾದಾಸ್ಪದ. ಕರ್ತವ್ಯಪಾಲನೆಯೊಂದಿಗೆ ತಮ್ಮ ಆರ್ಥಿಕ ಪರಿಸ್ಥಿತಿಯನ್ನೂ ಸರಿಯಾದ ರೀತಿಯಲ್ಲಿ ತೂಗಿಸಿಕೊಂಡು ಹೋಗಬೇಕಾದ ಬಾಧ್ಯತೆಯೂ ಇವಕ್ಕೆ ಇದೆಯೆಂಬುದು ಎಲ್ಲರೂ ಅರಿತಿರುವ ಸತ್ಯ. ಆದರೆ ಈ ಕಾರಣಕ್ಕಾಗಿಯೇ ಪತ್ರಿಕೆಗಳು ಜಾಹೀರಾತುಗಳನ್ನು ಬೆನ್ನೆಲುಬಾಗಿ ಇರಿಸಿಕೊಂಡಿವೆಯಲ್ಲಾ!? ಪತ್ರಿಕೆಯ ಮಾರಾಟದ ಹಣದಿಂದ ಮಾತ್ರ ನಾವು ಬದುಕುತ್ತಿಲ್ಲ ಎಂಬ ಮಹಾ ಸತ್ಯವನ್ನು ತಮ್ಮ ಬೆಲೆಯನ್ನು ಒಂದು ರೂಪಾಯಿಗೆ ಇಳಿಸಿ ಕೆಲ ದಿನಗಳ ಹಿಂದೆ ಈ ಪತ್ರಿಕೆಗಳೇ ಖುದ್ದಾಗಿ ಡಂಗುರ ಹೊಡೆದುದು ಎಲ್ಲರಿಗೂ ನೆನಪಿದೆ. ಆದರೆ ಕೆಲವೇ ವಾರಗಳಲ್ಲಿ ಬೆಲೆಯನ್ನು ಮತ್ತೆ ಹಳೆಯ ಮಟ್ಟಕ್ಕೇ ತಂದು, ಭಾರತದ ನೂರಿಪ್ಪತ್ತು ಕೋಟಿ ಜನರನ್ನೂ ಮೂರ್ಖರನ್ನಾಗಿ ಮಾಡಿ ತೋರಿಸಿದ ಪತ್ರಿಕೆಗಳ ಚಾಣಾಕ್ಷ ಬುದ್ಧಿಯನ್ನೂ ಮೆಚ್ಚಬೇಕಾದುದೇ.

ಹಾಗಾದರೆ ಸಮರ್ಪಕವಾದ ವೃತ್ತಪತ್ರಿಕೆಯೆಂದರೆ ಹೇಗಿರಬೇಕು ? ಎಲ್ಲರ ಮೆಚ್ಚುಗೆ

ಪಡೆಯುವಂತಹ, ನಿಷ್ಪಕ್ಷಪಾತ ಕರ್ತವ್ಯಪಾಲನೆ ಮಾಡುವಂತಹ, ತಮ್ಮ ಮಾರಾಟವನ್ನೇ ಮೊದಲ ಗುರಿಯಾಗಿ ಇಟ್ಟುಕೊಳ್ಳದಂತಹ ಪತ್ರಿಕೆಯೆಂದರೆ ಹೇಗಿರಬೇಕೆಂಬ ಪ್ರಶ್ನೆಗೆ ಉತ್ತರ ಹೇಳುವ ಸಾಮರ್ಥ್ಯ ನನ್ನಲ್ಲಿ ಖಂಡಿತವಾಗಿಯೂ ಇಲ್ಲ.

ಆದರೆ ನನ್ನ ಮನಸ್ಸಿಗೆ ತೀರ ಒಪ್ಪಿಗೆಯಾಗುವಂತಹ ವೃತ್ತಪತ್ರಿಕೆಯು ಹೇಗಿರಬೇಕೆಂದು ಮಾತ್ರ ನಾನು ಹೇಳಬಲ್ಲೆ. ಈ ನನ್ನ ಕನಸಿನ ಪತ್ರಿಕೆ ಎಲ್ಲರ ಮನಸ್ಸಿಗೂ ಒಪ್ಪಿಗೆಯಾಗಬೇಕೆಂಬ ನಿಯಮವೇನೂ ಇಲ್ಲ. ಈ ರೀತಿಯ ಪತ್ರಿಕೆ ಎಂದಾದರೂ ಹೊರಬಂದೀತೆಂಬ ನಂಬಿಕೆಯಾಗಲೀ, ಭರವಸೆಯಾಗಲೀ ನನಗಿದೆಯೆಂದು ಹೇಳಿಕೊಂಡು ಆತ್ಮವಂಚನೆ ಮಾಡಿಕೊಳ್ಳಲಾರೆ. ಆದರೆ ಕನಸು ಕಾಣುವುದು ಮನುಷ್ಯನ ಕಾಲಾತೀತವಾದ, ದೇಶಾತೀತವಾದ ಸ್ವಾತಂತ್ರ್ಯವಲ್ಲವೇ ?

ನನ್ನ ಕನಸಿನ ಪತ್ರಿಕೆ 'ಇಂಚು ಮಿಂಚು' ಈಗಿರುವ ಪತ್ರಿಕೆಗಳಂತೆಯೇ ಇದೆ. ಮೊದಲಿನ ಪುಟವು ಮಾಮೂಲಿನಂತೆ ರಾಜಕಾರಣಕ್ಕೆ ಮೀಸಲು. ಎರಡು, ಮೂರು, ನಾಲ್ಕನೆಯ ಪುಟಗಳು ಜಾಹೀರಾತುಗಳು, ಸ್ಥಳೀಯ ಸುದ್ದಿಗಳು, ಇತರ ಅಷ್ಟೇನೂ ಮುಖ್ಯವಲ್ಲದ ಸಮಾಚಾರಗಳಿಂದ ತುಂಬಿದೆ. ಮತ್ತೆ ಅಂತರರಾಷ್ಟ್ರೀಯ ಸುದ್ದಿ, ಕ್ರೀಡಾಂಗಣ, ವ್ಯಾಪಾರ ಸಮಾಚಾರ ಇತ್ಯಾದಿ, ಇತ್ಯಾದಿ. ಇದೆಲ್ಲವೂ ಆದ ನಂತರ ನನ್ನ ಪತ್ರಿಕೆಯ ವಿಶೇಷತೆ ಕಾಣಸಿಗುತ್ತದೆ. ಕಡೆಯ ಒಂದು ಅಥವಾ ಎರಡು ಪುಟಗಳಲ್ಲಿ ನನ್ನ ಮಗಳ ಪ್ರಶ್ನೆಗಳಿಂದಾಗಿ ನನ್ನ ತಲೆಯಲ್ಲಿ ಎದ್ದು ನನ್ನನ್ನು ಕಾಡಿದ ಸಹಸ್ರಾರು ಪ್ರಶ್ನೆಗಳಿಗೆ ಇಲ್ಲಿ ಉತ್ತರಗಳು ಸಿಗುತ್ತವೆ.

ಹೀಗೆಂದರೆ ಏನರ್ಥ ಎನ್ನುತ್ತೀರಾ ? ಇಷ್ಟೇ – ನಮ್ಮ ಸಮಾಜದಲ್ಲಿ ಅನೇಕಾನೇಕ ಕ್ಷೇತ್ರಗಳಲ್ಲಿ, ಎಂದರೆ ರಾಜಕಾರಣ, ಕ್ರೀಡೆ, ವ್ಯಾಪಾರ, ಸಿನಿಮಾ, ಕಲೆ, ಲಂಚಗುಳಿತನ, ವಿದ್ಯಾಭ್ಯಾಸ, ಅರ್ಥವ್ಯವಸ್ಥೆ, ಅಪರಾಧ ಶೋಧನೆ – ಹೀಗೆ ಹತ್ತು ಹಲವು ಕ್ಷೇತ್ರಗಳಲ್ಲಿ ಬಗೆಹರಿಯದ, ಕೊನೆಗಾಣದ, ಎಣಿಕೆಗೆ ಬಾರದಷ್ಟು ಸಮಸ್ಯೆಗಳು ಇವೆ. ತಿಂಗಳುಗಟ್ಟಲೆ, ವರ್ಷಗಟ್ಟಲೆ, ಅಷ್ಟೇಕೆ ಶತಮಾನಗಟ್ಟಲೆ ಇತ್ಯರ್ಥವಾಗದೆ ಕೊಳೆಯುತ್ತಿರುವ ಕೇಸುಗಳೆಷ್ಟೋ! ನಮ್ಮ ನ್ಯಾಯಾಲಯಗಳಿಗೆ ಬಿಡುವಿಲ್ಲದ ಕೆಲಸ.

ಉದಾಹರಣೆಗೆ – ಬೋಫೋರ್ಸ್ ಹಗರಣ ಯಾವ ಘಟ್ಟದಲ್ಲಿದೆ ? ಷೇರು ಮಾರುಕಟ್ಟೆಯ ಗೂಳಿ ಹರ್ಷದ್ ಮೆಹ್ತಾ ಮರಣಿಸಿ ಸಾಕಷ್ಟು ಕಾಲವಾಯಿತು, ಆದರೆ ಅವನ ಮೇಲಿದ್ದ ಕೇಸುಗಳೆಲ್ಲ ಏನಾದುವು ? ಸುಖರಾಮ್ ಮೇಲೆ ಹಲವಾರು ಸಹಸ್ರ ಕೋಟಿ ರೂಪಾಯಿಗಳ ಮೊಕದ್ದಮೆ ನಡೆದಿತ್ತಲ್ಲ, ಏನಾಯಿತು ? ಮೇವಿನ ಕೇಸುಗಳನ್ನೂ, ತನ್ನ ಮಗಳ ಮದುವೆಯ ಸಂದರ್ಭದಲ್ಲಿ ಅಕ್ರಮವಾಗಿ ಹಲವು ಖಾಸಗಿ ಕಂಪನಿಗಳ ವಾಹನಗಳನ್ನು ಬಳಸಿಕೊಂಡ ಆರೋಪಣೆಯನ್ನೂ ಸೇರಿದಂತೆ ಹಲವಾರು ಕೇಸುಗಳನ್ನು ಎದುರಿಸುತ್ತಿರುವ ಲಲ್ಲೂ ಪ್ರಸಾದ್ ಯಾದವ್ ರಾಜಾರೋಷವಾಗಿ ಪಾಕಿಸ್ತಾನಕ್ಕೆ ಹೋಗಿ ಬಂದದ್ದು ಹೇಗೆ ? ಸಚಿವ ಅನಂತ್ ಕುಮಾರ್ ಅವರ ಸೆಲ್ ಫೋನಿನ ದುಬಾರಿ ಬಿಲ್ಲಿನ ವಿಷಯ ಏನಾಯಿತು ? ಬೆಂಗಳೂರಿನಲ್ಲಿ ಒಬ್ಬ ಪೊಲೀಸ್ ಇನ್ಸ್‌ಪೆಕ್ಟರ್ ಮರಣ ಹೊಂದಿದಾಗ ಮಾತ್ರ ಕಣ್ತೆರೆದು ನೋಡಿದ ಮಹಾನಗರ ಪಾಲಿಕೆ ಅವೈಜ್ಞಾನಿಕವಾಗಿ ಕಟ್ಟಲಟ್ಟ ಸ್ಪೀಡ್ ಬ್ರೇಕರ್‌ಗಳಲ್ಲಿ ಕೆಲವನ್ನು ಮಾತ್ರ ಒಡೆದು, ಉಳಿದವನ್ನು ಹಾಗೆಯೇ ಬಿಟ್ಟು ವಾಹನ ಚಾಲಕರಿಗೆ ಮತ್ತಷ್ಟು ಕಷ್ಟ ತಂದಿಟ್ಟಿದ್ದಾರಲ್ಲಾ, ಏಕೆ ? ರಷ್ಯಾದಲ್ಲಿ ಗ್ಲಾಸ್‌ನಾಸ್ಟ್ ಜಾರಿಗೆ ತಂದು ಆಂದೋಳನ ಮಾಡಿದ ಗೋರ್ಬಚೇವ್ ಈಗ ಎಲ್ಲಿ ಏನು ಮಾಡುತ್ತಿದ್ದಾರೆ ? ಡಿಐಜಿ ದಿನಕರ್ ಅವರ ಕೇಸು ಯಾವ ಹಂತದಲ್ಲಿದೆ ? ಬೆಂಗಳೂರಿನ ಸುತ್ತಮುತ್ತ ಮರಣಾಂತಕ ಚಕ್ಕಿಗಳನ್ನು ತಯಾರಿಸಿ, ಮಾರಿ ತೊಂದರೆ ಕೊಟ್ಟವರ ವಿಚಾರಣೆ ಯಾವ ಹಂತದಲ್ಲಿದೆ ? ಈರೋಡಿನಿಂದ ವಿಷಪೂರಿತ ಹಾಲು ತಂದು ಮಾರಿ ಸಿಕ್ಕುಹಾಕಿಕೊಂಡ ಖದೀಮರು ಈಗ ಎಲ್ಲಿದ್ದಾರೆ ? ಜನರ ಆರಕ್ಷಣೆ ಮಾಡಬೇಕಾದ ಚಿರತೆ ಪಡೆಯವರೇ ಅರ್ಧರಾತ್ರಿಯಲ್ಲಿ ಬೆಂಗಳೂರಿನ ರಸ್ತೆಯಲ್ಲಿ ವ್ಯಾಪಾರಸ್ಥನೊಬ್ಬನನ್ನು ಲೂಟಿ ಮಾಡಿ ಹಲವಾರು ಲಕ್ಷ ರೂಪಾಯಿಗಳನ್ನು ಕಬಳಿಸಿ ಹೋದರಲ್ಲಾ, ಅವರ ಮೇಲಿನ ಆಪಾದನೆಯ ಮೊಕದ್ದಮೆ ಏನಾಯಿತು ?

ಹೀಗೆ ಎಣಿಸಲಾರದಷ್ಟು ವಿಷಯಗಳು ನಮ್ಮ ಮನಃಪಟಲದಿಂದ ಜಾರಿ ಎಲ್ಲಿಯೋ ಹೋಗಿ ಬಿಡುತ್ತವೆ. ಇವಕ್ಕೆ ಉತ್ತರಗಳು ಯಾರನ್ನು ಕೇಳಿದರೂ ಥಟ್ಟನೆ ಸಿಗುವ ಸಂಭವ ತೀರ ಕಡಿಮೆಯೇ.

ವೃತ್ತಪತ್ರಿಕೆಯ ಕೊನೆಯ ಒಂದೆರಡು ಪುಟಗಳನ್ನು ಈ ರೀತಿಯ ವಿಷಯಗಳಿಗೆ ಮೀಸಲಿಟ್ಟರೆ ಹೇಗಿದ್ದೀತು ? ಒಂದೆರಡು ಸಾಲುಗಳಲ್ಲಿ, ಕ್ಲುಪ್ತವಾಗಿ, ಇತ್ಯರ್ಥವಾಗದ ಹಲವಾರು ವಿಷಯಗಳ ಸದ್ಯದ ಘಟ್ಟ ಏನಿದೆ ಎಂಬುದನ್ನು ತಿಳಿಸಿದರೆ, ಸಮಾಜಕ್ಕೆ ಬಹು ದೊಡ್ಡ ಉಪಕಾರ ವೆಸಗಿದಂತೆ ಆಗುವುದಿಲ್ಲವೇ ? ಹಲವಾರು ಪ್ರಜೆಗಳು ಈ ರೀತಿಯ ವಿಷಯಗಳ ಪ್ರಸ್ತುತ ಪರಿಸ್ಥಿತಿ ಏನಿದೆ ಎಂಬುದನ್ನು ತಿಳಿದುಕೊಳ್ಳಲು ಸಹಜವಾಗಿಯೇ ಕಾತುರರಾಗಿರುತ್ತಾರೆ, ಅಲ್ಲವೆ ?

ಆದರೆ ಈ ನನ್ನ ಕನಸಿನ ವೃತ್ತಪತ್ರಿಕೆಯನ್ನು ಯಾರಾದರೂ ಪುಣ್ಯಾತ್ಮರು ಎಂದಾದರೂ ಹೊರ ತರುವ ಸಂಭವವಿರಬಹುದೇ ? ಇದೆಲ್ಲಾ ವ್ಯರ್ಥ ಪ್ರಯತ್ನ, ಇದರಿಂದ ಪತ್ರಿಕೆಯ ಪ್ರಕಾಶಕರಿಗೆ ಯಾವ ರೀತಿಯ ಹೆಚ್ಚಿನ ಲಾಭವೂ ಇಲ್ಲವಾದುದರಿಂದ ಇದೊಂದು ಅಪ್ರಯೋಜಕ ಕಾರ್ಯಕ್ರಮ ಎಂದೇ ಎಲ್ಲರಿಗೂ ಅನಿಸುವ ಸಂಭವ ಹೆಚ್ಚೇ ?

ಅಂತೂ ನಾನು ಕಾದು ನೋಡುತ್ತೇನೆ. ಪತ್ರಿಕಾ ಪ್ರಪಂಚದಲ್ಲೊಬ್ಬ ಧೀರನ ಜನ್ಮವಾಗಿ ನನ್ನ ಕನಸು ನನಸಾದರೂ ಆಗಬಹುದು !


**ಡಿ. ಟಿ. ಲೋಹಿತ್**

೩೩೯, ೩ನೇ ಮುಖ್ಯರಸ್ತೆ, ೩ನೇ ಹಂತ, ಜೆ. ಪಿ. ನಗರ,
ಬೆಂಗಳೂರು - ೫೬೦ ೦೭೮


## ಈ ಭಾರಿ ಪ್ರಶಸ್ತಿ...!

**ಹಿರಿಯರಿಗೆ ಪ್ರಶಸ್ತಿ ಬಂದರೆ**
**ಅಪಸ್ವರ–ಏನು ಗೊತ್ತೆ ?**
**ಪಾಪ ! ಮೊದಲೆ ಕೊಡಬಾರದಿತ್ತೆ ?**
**ಸರಿ. ಕಿರಿಯರಿಗೆ ಬಂದರೆ,**
**ಇವರು ಹೇಳುವುದಾದರೂ ಏನು ಮತ್ತೆ ?**
**ಇಷ್ಟು ಬೇಗನೆ ಕೊಡಬೇಕಿತ್ತೆ ?**

* * *

**ಇಗೋ ! ಇವನು ವ್ಯಂಗ್ಯ ಚಿತ್ರಕಾರ–**
**ಇವನಿಗೆ ಇರಲಿ ಮೊಟ್ಟ ಮೊದಲ ಹಾರ;**
**ಆ ಗುಂಪಿನಲ್ಲಿ ಅಗೊ ! ಅವನೊಬ್ಬನೆ ಬಾಕಿ**
**ಹೋಗಲಿ, ಅವನಿಗೂ ಒಂದು ಮಾಲೆ ಹಾಕಿ !**


**ಅಲಕ ತೀರ್ಥಹಳ್ಳಿ**
ಅಲಕ, ನಂ. ೮೨, ತ್ಯಾಗರಾಜ ರಸ್ತೆ
ಬೆಟ್ಟಮಕ್ಕಿ ಬಡಾವಣೆ, ಸೀಬಿನಕೆರೆ ಅಂಚೆ
ತೀರ್ಥಹಳ್ಳಿ – ೫೭೭ ೪೩೨





ಹಾಸನದಲ್ಲಿ ಆಗಸ್ಟ್ ೧೨ರಂದು ನವಕರ್ನಾಟಕ ಪುಸ್ತಕ ಪ್ರದರ್ಶನವನ್ನು ಜಿಲ್ಲಾಧಿಕಾರಿ ಅಶ್ವತ್ಥನಾರಾಯಣ ಗೌಡ ಅವರು ಉದ್ಘಾಟಿಸಿದರು. ಹಿರಿಯ ವಕೀಲರಾದ ಶ್ರೀ ಬಿ. ಎಸ್. ವೆಂಕಟೇಶ ಮೂರ್ತಿಯವರು ಉಪಸ್ಥಿತರಿದ್ದರು.

ಇದಕ್ಕೆ ಮೂರು ಉತ್ತರಗಳು. ಅಲ್ಲ – ಹೌದು – ಗೊತ್ತಿಲ್ಲ. ದೇವರು – ಈ ವಿಷಯದ ಮೇಲೆ ಮುಕ್ತ ಚರ್ಚೆ ಬಯಸಿದೊಡನೆ ಅನೇಕರಿಗೆ ಮುಜುಗರವಾಗುವುದು ಸಹಜ. ನಮ್ಮ ವಾದ ದೇವರ ಪರವಾಗಿದ್ದರೆ, ದೇವರನ್ನು ನಾನಾ ಆಕಾರಗಳಲ್ಲಿ ಪರಿಭಾವಿಸಿ ಆರಾಧಿಸುವವರಿಗೆ ಆನಂದ. ವಿರೋಧವಾಗಿದ್ದರೆ ದೇವರ ಅಸ್ತಿತ್ವವನ್ನು ಅನುಮಾನಿಸುವವರಿಗೆ ಸಮಾಧಾನ. ಇನ್ನೊಂದು ಬಗೆಯ ಜನರೂ ಇದ್ದಾರೆ. ದೇವರನ್ನು ಹಿಡಿದುಕೊಳ್ಳಲೂ ಆಗದವರು – ದೇವರನ್ನು ಬಿಡಲೂ ಆಗದವರು. ಇಂಥವರಿಗೆ ದೇವರ ಬಗೆಗಿನ ವಾದ ಗೊಂದಲ ಹುಟ್ಟಿಸಬಹುದು ಅಥವಾ ಕುತೂಹಲ ಕೆರಳಿಸಬಹುದು.

ರಾಮಚಂದ್ರ ಭಾವೆ

# ದೇವರು

ದೇವರ ಕಲ್ಪನೆ ನಮ್ಮಲ್ಲಿ ಅನಾದಿಕಾಲದಿಂದಲೂ ಇದ್ದದ್ದು. ನಾಲ್ಕು ಕಾಲುಗಳ ಮೇಲೆ ಓಡಾಡುತ್ತಿದ್ದ 'ವಾನರ' ಯಾವಾಗ ಮುಂದಿನೆರಡು ಕಾಲುಗಳನ್ನು ಕೈಗಳಂತೆ ಬಳಸಲು ಶಕ್ತನಾಗಿ ತನ್ನ ಬೆನ್ನುಹುರಿ ನೆಟ್ಟಗೆ ಮಾಡಿಕೊಂಡು ನಿಂತು 'ನರ' ಎನ್ನಿಸಿಕೊಂಡನೋ ಬಹುಶಃ ಆಗಿನಿಂದಲೇ ಅವನಿಗೆ ಒಂದು ಅತ್ಯದ್ಭುತ ಸಾರ್ವಭೌಮ ಶಕ್ತಿಯ ಬಗೆಗೆ ಅರಿವು ಹುಟ್ಟಿರಬೇಕು. ಈ ಸೃಷ್ಟಿಯೆಲ್ಲ ಅವನಿಗೆ ವಿಸ್ಮಯವಾಗಿ ಗೋಚರಿಸಿದೆ. ಸೂರ್ಯ, ಚಂದ್ರ, ಕತ್ತಲು, ಬೆಳಕು, ಆಕಾಶ, ಮಳೆ, ಸಿಡಿಲು, ಗುಡುಗು, ಮಿಂಚು, ಪರ್ವತ, ನದಿ, ಸಮುದ್ರ ಹೀಗೆ ಎಲ್ಲದರ ವಿರಾಟ್‌ದರ್ಶನವಾಗಿ ಅವನು ಭೀತನಾಗಿದ್ದಿರಲೂಬಹುದು, ಇಲ್ಲಾ ಸೋಜಿಗಪಟ್ಟಿರಬಹುದು. ಅಂತೂ ತನ್ನ ಪರಿಮಿತ ಶಕ್ತಿಗೆ, ತಿಳುವಳಿಕೆಗೆ ಮೀರಿದಂತೆ ಕಂಡವುಗಳಿಗೆಲ್ಲ ಕೈ ಮುಗಿಯಲು ಆರಂಭಿಸಿದ. ಆ ನಂತರದ ಪ್ರಗತಿಯಲ್ಲಿ ನರ ಇನ್ನಷ್ಟು ಸುಧಾರಿಸುತ್ತ, ಪರಿವರ್ತನೆಗೊಳ್ಳುತ್ತ, ಅವನ ವಿಚಾರಶಕ್ತಿ ವಿಕಾಸಗೊಂಡಂತೆ ಪ್ರಾಣಿಗಳಿಗಿಂತ ಭಿನ್ನವಾಗಿ ರೂಪುಗೊಳ್ಳುವತ್ತ ಹೆಜ್ಜೆ ಇಟ್ಟ.

ಮುಂದೆ ನರಮನುಷ್ಯನ ಯೋಚನಾಲಹರಿ ಒಂದೇ ದಿಕ್ಕಿನಲ್ಲಿ ಒಂದೇ ಗುರಿಯನ್ನು ಗುರುತಿಸಿಕೊಂಡು ಸಾಗಲಿಲ್ಲ. ಬೆಟ್ಟದ ಮೇಲೆ ಬಿದ್ದ ಮಳೆ ನೀರು ನಾನಾ ದಿಕ್ಕುಗಳಲ್ಲಿ ಪ್ರವಹಿಸಿ, ಕೆರೆ, ಹಳ್ಳ, ಹೊಳೆ, ನದಿ, ಜಲಾಶಯಗಳು ಉಂಟಾಗುವಂತೆ ಮನುಷ್ಯನ ಬುದ್ಧಿಯೂ ನಾನಾ ವಿಚಾರಗಳಲ್ಲಿ ತೊಡಗಿಕೊಂಡಿತು. ಒಬ್ಬ ವಿಜ್ಞಾನಿಯಾದ, ಇನ್ನೊಬ್ಬ ತತ್ವಜ್ಞಾನಿಯಾದ, ಮತ್ತೊಬ್ಬ ಕಲಾವಿದನಾದ, ಮಗದೊಬ್ಬ ಪಂಡಿತನಾದ. ಇದರಿಂದಾಗಿ ಅವನ ಭಾವನೆಗಳೂ ಬಲಿತವು. ಮನುಷ್ಯನಿಗೆ ಆಹಾರ, ನಿದ್ದೆ, ಮೈಥುನಗಳು ಬದುಕಿನಲ್ಲಿ ಎಷ್ಟು ಅವಶ್ಯವಾದುವೋ, ಹಾಗೆ ಸೋಲು, ಗೆಲುವು, ಪಾಪ, ಪುಣ್ಯ, ಭೂತ, ದೇವರು, ಅದೃಷ್ಟ-ಗ್ರಹಚಾರ ಇವುಗಳೂ ಅವನ ದೈನಂದಿನ ವ್ಯವಹಾರದಲ್ಲಿ ಪಾಲು ಪಡೆದವು.

ನಮ್ಮಲ್ಲಿ ಬಂಗಾರ ಮುಂತಾದ ಬೆಲೆಬಾಳುವ ಸಂಪತ್ತಿನ ರಕ್ಷಣೆಗಾಗಿ ದೇವರನ್ನು ಉಪಯೋಗಿಸಿಕೊಳ್ಳುವ ಉದಾಹರಣೆಗಳನ್ನು ಇತಿಹಾಸದ ಉದ್ದಕ್ಕೂ ನಾವು ನೋಡುತ್ತೇವೆ (ಈಗಲೂ ಈ ಪರಂಪರೆ ಮತ್ತೊಂದು ರೀತಿಯಲ್ಲಿ ಮುಂದುವರಿದಿದೆ). ಹೀಗಾಗಿ ಇಂಥ ದೇವಸ್ಥಾನಗಳನ್ನೂ ಗುರಿಮಾಡಿ ಕೆಲ ವಿದೇಶಿ ಆಕ್ರಮಣಕಾರರು ದಾಳಿ-ಲೂಟಿ ಮಾಡಿದರು. ಅಂಥ ಸಂದರ್ಭಗಳಲ್ಲಿ ದೇವರು ಅದೇಕೋ ಕಲ್ಲಾಗಿಯೇ ಇದ್ದ. ನೈಸರ್ಗಿಕ ವಿಕೋಪಗಳು ಮೇಲಿಂದ ಮೇಲೆ ಜನಜೀವನವನ್ನು ಏರುಪೇರು ಮಾಡಿದಾಗ ಯಾವ ಬಗೆಯ ಪ್ರಾರ್ಥನೆಯೂ ದೇವರ ಕಿವಿ ಸೋಂಕಲಿಲ್ಲ. ಎಷ್ಟು ಬಗೆಯಲ್ಲಿ ಅರ್ಚನೆಗೈದರೂ ಯಾವ ದೇವರೂ ಕನಿಕರ ತಳೆಯಲಿಲ್ಲ. ಈ ಭೂಕಂಪ, ನೆರೆ ಹಾವಳಿ, ಬರಗಾಲ, ರೋಗ ಮುಂತಾದ ಅನಾಹುತಗಳೇ ಕಾಲಕಾಲಕ್ಕೂ ಘಟಿಸುತ್ತಲೇ ಇವೆ. ದೇವರು ಮಾತ್ರ ನಿರುಪಾಯನಾಗಿದ್ದಾನೆ.

(ಈ ಬಗೆಯ ಸಂಗತಿಗಳು ಪ್ರಕೃತಿಯ ಸಮತೋಲನ ಕಾಪಾಡಿಕೊಳ್ಳಲೂ ಇರಬಹುದು. ಅಥವಾ ಪ್ರಕೃತಿಯ ಮೇಲೆ ಮಾನವ ಮಾಡುವ ಅತ್ಯಾಚಾರಕ್ಕೆ ಪ್ರತೀಕಾರವಾಗಿಯೂ ಇದ್ದೀತು. ನಾವು ತಪ್ಪು ಮಾಡುವುದು, ಆಮೇಲೆ ದೇವರನ್ನೇ ಹೊಣೆಗಾರನನ್ನಾಗಿ ಮಾಡುವುದು ಇದ್ಯಾವ ಸೀಮೆ ನ್ಯಾಯ ?)

ವಿಸ್ಮಯವೆಂದರೆ 'ಯದಾಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ... ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯಗೇ...'' ಎಂಬ ಮಾತಿನಲ್ಲಿ ನಮಗೆ ಅಪರಿಮಿತ ವಿಶ್ವಾಸ. ಇದು ಭಗವಂತನ ವಾಣಿ ಎಂದೇ ಅಚಲ ನಂಬಿಕೆ.

(ಧರ್ಮ ಸ್ಥಾಪನೆಗೈಯುವುದು ದೇವರು ಮಾಡಲೇಬೇಕಾದ ಕೆಲಸ. ಧರ್ಮ ಹಾಳುಮಾಡುತ್ತ ಹೊಣೆಗಾರಿಕೆಯಿಂದ ಕಳಚಿಕೊಂಡುಬಿಡುವುದು ನಮ್ಮ ಕೆಲಸ. ಅಂದರೆ ನಮಗೇನೂ ಜವಾಬ್ದಾರಿ ಇಲ್ಲ. ಹೇಗಿದೆ ವಾದಸರಣಿ ?)

ಪಾಪ, ದೇವರು ಸಹ ಯೋಗನಿದ್ರೆಯಲ್ಲಿ ಮುಳುಗಿಲ್ಲ. ಕಾಲಕಾಲಕ್ಕೆ ಅನೇಕ ಬಗೆಯಲ್ಲಿ ಅವತಾರಗಳನ್ನು ಎತ್ತುತ್ತಲೇ ಇದ್ದಾನೆ. ಆದರೆ ಯಾವ ಕಾಲಕ್ಕೂ ಜಗತ್ತಿನ ಹಣೆಬರಹದಲ್ಲಿ ವಿಶೇಷ ವ್ಯತ್ಯಾಸವೇನೂ ಭಾಸವಾಗುವುದಿಲ್ಲ. ಪುರಾಣ ಕಾಲದಲ್ಲಿ ಇದ್ದಂತಹ ಕುಟಿಲ, ಕುಹಕ, ದ್ವೇಷ, ಕೊಲೆ, ಅನಾಚಾರ ಎಲ್ಲವೂ ಯಥಾಪ್ರಕಾರ ನದಿಯಲ್ಲಿ ಸರಾಗವಾಗಿ ನೀರು ಹರಿದಂತೆ ಇಂದಿನವರೆಗೂ ಸಾಗಿ ಬಂದಿವೆ. ಹಾಗೆಯೇ ಇಲ್ಲಿ ಲೆಕ್ಕವಿಲ್ಲದಷ್ಟು ದೇವಾನುದೇವತೆಗಳಿದ್ದರೂ ಯಾವ ದೇವರಿಗೂ ಮನುಷ್ಯನ ಕಷ್ಟ, ಪಾಪಗಳನ್ನು ಪರಿಹರಿಸುವಂತಹುದಾಗಲೀ, ಯುದ್ಧದಂತಹ ಅಮಾನುಷ ಘಟನೆಗಳಿಗೆ ಕಾರಣವಾದ ಮನಸ್ಸುಗಳನ್ನು ಪರಿವರ್ತಿಸುವುದಾಗಲೀ ಸಾಧ್ಯವಾಗಿಲ್ಲ. ಬೇಕಾದರೆ ಯಾರನ್ನೇ ಕೇಳಿನೋಡಿ, ಯಾವ ಮನುಷ್ಯನೂ 'ನಾನು ದೇವರ ದಯೆಯಿಂದ ಸುಖವಾಗಿದ್ದೇನೆ. ನನ್ನಷ್ಟು ಸುಖಿ ಈ ಜಗತ್ತಿನಲ್ಲಿ ಬೇರೆ ಯಾರೂ ಇಲ್ಲ' ಎಂದು ಘೋಷಿಸಲು ಮುಂದಾಗುತ್ತಾನೆಯೇ ? ಬದಲು, 'ದೇವರೇ – ನನಗೇಕೆ ಇಂಥ ಕಷ್ಟ ಕೊಟ್ಟೆ? ನನ್ನನ್ನೇಕೆ ಈ ಪರಿ ಪರೀಕ್ಷಿಸುತ್ತಿದ್ದೀಯ ?' ಎಂದು ದೇವರ ಮೇಲೆ ಆರೋಪ ಮಾಡುವವರೇ ಹೆಚ್ಚು.

ನಮ್ಮಲ್ಲಿ ಸಿಕ್ಕಾಪಟ್ಟೆ ಜಾತಿ, ಪಂಥಗಳು ಪ್ರತಿದಿನವೂ ಹುಟ್ಟುತ್ತ ಇವು ಜನತೆಯ ತಲೆ ತಿನ್ನುತ್ತಿರುವುದಕ್ಕೆ ಈ ದೇವರ ಅವತಾರಗಳು ಕಾರಣವಿರಬಹುದೇ ? ಏಕೆಂದರೆ ಪ್ರತಿ ಸಲವೂ ಧರ್ಮಸಂಸ್ಥಾಪನೆಗಾಗಿ ಅವತರಿಸುವ ಭಗವಂತ ಪ್ರತಿಯೊಂದು ಜನ್ಮದಲ್ಲೂ ಹೊಸ ತತ್ವ ಹೇಳುತ್ತ ಹಿಂಬಾಲಕರನ್ನು ಹುಟ್ಟುಹಾಕಿದ್ದಾನೆ. ಮುಂದೆ ಇವೇ ಜಾತಿ, ಮತ, ಪಂಥ, ಪಂಗಡಗಳಾಗಿ ಬದಲಾವಣೆ ಹೊಂದಿದ್ದು ಮಾತ್ರವಲ್ಲದೆ ತಾವೇ ಶ್ರೇಷ್ಠರೆಂದು ಬಗೆದು ಮತ್ತೊಬ್ಬರನ್ನು ಕಂಡರೆ ಆಗದಷ್ಟು ಸಂಕುಚಿತ ಮನಸ್ಸಿನವರಾಗಿ ಅಧೋಗತಿಗೆ ಇಳಿದು ಹೋಗಿದ್ದಾರೆ. ದೇವರ ಹೆಸರಿನಲ್ಲಿ ವೈಯಕ್ತಿಕ ಪ್ರತಿಷ್ಠೆಯೇ ಮುಖ್ಯವಾಗಿ ಹೊಡೆದಾಟಗಳಾಗುತ್ತಿವೆ. ಈ ಭಕ್ತಕೋಟಿಯ ಪುಂಡಾಟಗಳನ್ನು ನೋಡಿ ದೇವರು ಮಾತ್ರ ತೆಪ್ಪಗಿದ್ದಾನೆ. ಈ ಎಲ್ಲ ವೈಪರೀತ್ಯಗಳನ್ನು ನೋಡುವಾಗ ದೇವರು ಜಗತ್ತಿನ ಉದ್ಧಾರ ಬಯಸಿದ್ದಾನೋ, ಅವನತಿ ಬಯಸಿದ್ದಾನೋ ಎಂಬ ಸಂದೇಹ ಕಾಡದೆ ಇರದು.

ಇಷ್ಟಾದರೂ ಮನುಷ್ಯ ದೇವರಲ್ಲಿ ನಂಬಿಕೆ ಕಳೆದುಕೊಂಡಿಲ್ಲ. ಬದಲು ದಿನದಿನಕ್ಕೂ ಹೆಚ್ಚೆಚ್ಚು ತನ್ನ ದೈವಭಕ್ತಿಯನ್ನು ಪ್ರಕಟಿಸುತ್ತಲೇ ಇದ್ದಾನೆ. ಇದಕ್ಕೆ ಸಾಕ್ಷಿಯಾಗಿ ಲೆಕ್ಕವಿಲ್ಲದಷ್ಟು ದೇವಸ್ಥಾನಗಳು ಕಾಣಿಸಿಕೊಳ್ಳುತ್ತಿವೆ. ಹೊಸ ದೇವರುಗಳ ದಿಢೀರ್ ಸೃಷ್ಟಿ ನಡೆದೇ ಇದೆ. (ಈಗಂತೂ ದೇವಸ್ಥಾನಗಳು ಭಾರಿ ಆದಾಯ ತರುವ, ವ್ಯಾವಹಾರಿಕವಾಗಿ ಲಾಭದಾಯಕವಾದಂತಹ ಒಂದು ಉದ್ಯಮವಾಗಿ ಬೆಳೆದಿದೆ.)

ಇನ್ನು ದೇವರ ಅವತಾರಗಳ ಬಗ್ಗೆ ಹೇಳುವುದಾದರೆ, ನಮ್ಮಲ್ಲೊಂದು ಸಂಪ್ರದಾಯ(?)ವಿದೆ. ಯಾವನಾದರೂ ಒಬ್ಬ ತನ್ನ ಜೀವನದಲ್ಲಿ ಏನಾದರೂ ಒಂದಿಷ್ಟು ಹೆಚ್ಚಿನದನ್ನು ಸಾಧಿಸಿಬಿಟ್ಟರೆ ಅವನನ್ನು ಪ್ರತ್ಯೇಕವಾಗಿ ನೋಡಲು ಶುರುಮಾಡಿಬಿಡುತ್ತೇವೆ. ಕ್ರಮೇಣ ಅವನನ್ನು ಹಾಡಿ, ಹೊಗಳಲು ಪ್ರಾರಂಭಿಸಿ ಕೊನೆಗೆ ಅದು ಅತಿರೇಕಕ್ಕೆ ಹೋಗಿ ಆತ ದೇವ ಮಾನವ, ದೇವದೂತ, ದೇವರ ಅವತಾರವಾಗಿ ಅವನ ಅಸಲು ವ್ಯಕ್ತಿತ್ವ ಮುಚ್ಚಿಹೋಗಿ ಜನ ಅವನನ್ನು ಕುರಿತು ಭಜನೆಗೆ ಶುರುಮಾಡಿಬಿಡುತ್ತಾರೆ. ಅವನನ್ನು ದೇವರ ಮಟ್ಟಕ್ಕೆ ಏರಿಸಿದ ಮೇಲೆ ಮುಂದೆ ಅವನು ಕೆಳಗಿಳಿಯುವ ಸಂಭವ ತೀರ ಕಡಿಮೆ. ಮಾನವನ ವಿಕಾಸದ ಹಾದಿಯಲ್ಲಿ ಆಯಾಕಾಲದ ಅಗತ್ಯಗಳನ್ನು ಪೂರೈಸಿದ ಅನೇಕರು ಸಂಭವಿಸಿ ಹೋಗಿದ್ದಾರೆ ಎಂದ ಮಾತ್ರಕ್ಕೆ ಅವರನ್ನು ದೇವರು ಎಂದು ಗುರುತಿಸುವುದು ಎಷ್ಟು ಸರಿ ?

(ಇವರೆಲ್ಲ ದೇವರು ಎನ್ನುವುದು ಕೇವಲ ಪುರಾಣಗಳ ಕಲ್ಪನೆ. ಇತಿಹಾಸದಲ್ಲಿ ಇವರೆಲ್ಲ

ಮಹಾಪುರುಷರು ಮಾತ್ರ).

ಇನ್ನು, ಅವತಾರಗಳನ್ನು ನಂಬುವುದು ಹೇಗೆ? ನಿಜವಾಗಿ ನೋಡಿದರೆ ನಮಗೆ ಈ ಜನ್ಮವೊಂದನ್ನು ಬಿಟ್ಟು ಇದರ ಹಿಂದಿನ-ಮುಂದಿನ ಜನ್ಮಗಳ ಬಗ್ಗೆ ಏನೂ ಗೊತ್ತಿಲ್ಲ. ಆದರೂ ದೇವರು ಹಿಂದಿನ ಜನ್ಮದಲ್ಲಿ ಹಾಗಿದ್ದ, ಈ ಜನ್ಮದಲ್ಲಿ ಹೀಗಿದ್ದಾನೆ, ಮುಂದಿನ ಜನ್ಮದಲ್ಲಿ ಹಾಗಿರುತ್ತಾನೆ ಎಂದೆಲ್ಲ ಊಹಿಸತೊಡಗಿದರೆ ಇದಕ್ಕೆ ಕೊನೆ ಎಲ್ಲಿ? ದಾರ್ಶನಿಕರು ಹೇಳುವ ಹಾಗೆ, ಜಗತ್ತಿನ ಸಮಸ್ತವನ್ನೂ ಕೇವಲ ಸಂಕಲ್ಪಮಾತ್ರದಿಂದಲೇ ನಿಯಂತ್ರಿಸುವ ಶಕ್ತಿಯನ್ನು ದೇವರು ಎಂದು ನಂಬುವುದಾದರೆ ಆ ಶಕ್ತಿಗೆ ಮನುಷ್ಯನಾಗಿ ಭೂಮಿಯ ಮೇಲೆ ಅವತರಿಸುವ ಪ್ರಮೇಯ ಏನಿದೆ? ಆದ್ದರಿಂದ ಹುಟ್ಟು ಸಾವಿನ ಜಾಲದಲ್ಲಿ ಸಿಲುಕಿದ ಅವತಾರ ಪುರುಷರೆಲ್ಲ ನಮ್ಮ ನಿಮ್ಮ ಹಾಗೇ ಮನುಷ್ಯರೇ ಹೊರತು ದೇವರಲ್ಲ ಎಂದು ಭಾವಿಸಬಹುದಾಗಿದೆ. ಇವರೆಲ್ಲರೂ ತಮ್ಮ ಜೀವಿತಾವಧಿಯಲ್ಲಿ ಕೋಪ, ತಾಪ, ಮಾನಾಪಮಾನ ಮುಂತಾದುವುಗಳಿಗೆ, ಸಾವು-ನೋವುಗಳಿಗೆ ಈಡಾದವರೇ. ಇವರೆಲ್ಲ ತಮ್ಮ ವಿಶಿಷ್ಟ ವ್ಯಕ್ತಿತ್ವದ ದೆಸೆಯಿಂದ ಸಾಮಾನ್ಯರನ್ನು ಮೀರಿ ನಿಲ್ಲುತ್ತಾರೆ. ಕೆಲ ಗುಣವಿಶೇಷಗಳನ್ನು ಹೊಂದಿದ್ದಾರೆ ಎಂಬ ಕಾರಣಕ್ಕೆ ಅವರನ್ನು ದೇವರ ಮಟ್ಟಕ್ಕೆ ಎತ್ತರಿಸುವ ಅಗತ್ಯವಾದರೂ ಏನು?

## ಶ್ರದ್ಧಾಂಜಲಿ



ಡಾ|| ಶಂಕರ ಮೊಕಾಶಿ ಪುಣೇಕರ ಇತ್ತೀಚೆಗೆ (೧೧-೮-೦೪) ನಿಧನರಾದರು. ಕವಿತೆ, ನಾಟಕ, ಕಾದಂಬರಿ, ವಿಮರ್ಶೆ, ಶಿಕ್ಷಣ – ಹೀಗೆ ನಾನಾ ಪ್ರಕಾರಗಳಿಗೆ ಇವರ ಕೊಡುಗೆ ಸಂದಿದೆ. ಇಂಗ್ಲಿಷಿನಲ್ಲಿ ಹಲವು ಕೃತಿಗಳು ಪ್ರಕಟವಾಗಿವೆ. ಸಂಗೀತ ವಿಮರ್ಶಕರಾಗಿಯೂ ಪರಿಚಿತರಾಗಿದ್ದರು. ಇವರಿಗೆ 'ಹೊಸತು' ತನ್ನ ಗೌರವಪೂರ್ವಕ ನಮನ ಅರ್ಪಿಸುತ್ತದೆ.

(ಈಗಂತೂ ದೇವರು ತೀರಾ ಅಗ್ಗ. ಹೆಜ್ಜೆ-ಹೆಜ್ಜೆಗೆ ದೇವರುಗಳು. ಮನುಷ್ಯನ ಖಯಾಲಿಯೂ ವಿಚಿತ್ರ. ಪುಢಾರಿಗಳು ತಮ್ಮ ರಾಜಕೀಯ ನಿಷ್ಠೆಯನ್ನು ಪದೇಪದೇ ಬದಲಾಯಿಸುವ ಹಾಗೆ ಭಕ್ತಮಹಾಜನತೆ ತಮ್ಮ ದೇವರುಗಳ ಮೇಲಿನ ನಿಷ್ಠೆಯನ್ನು ಬದಲಾಯಿಸುತ್ತಲೇ ಇದ್ದಾರೆ. ಕಣ್ಣಿಗೆ ಕಾಣದ ಭಗವಂತನಿಗಿಂತ ಕಣ್ಣಿಗೆ ಕಾಣುವ ದೇವರುಗಳೇ ಹೆಚ್ಚು ಪ್ರಿಯವಾಗುತ್ತಿದ್ದಾರೆ.)

ರಾಮಾಯಣ ಕಾಲದಲ್ಲಿ ಬಹುಶಃ ವ್ಯಕ್ತಿಪೂಜೆ ಎನ್ನುವುದು ಅಷ್ಟಾಗಿ ಪ್ರಚಾರಕ್ಕೆ ಬಂದಿದ್ದಂತೆ ಕಾಣುವುದಿಲ್ಲ. ರಾವಣನ ಸಂಹಾರಕ್ಕಾಗಿ ತಾನು ಜನ್ಮತಳೆದಿರುವುದು ಎಂಬ ಸಂಗತಿಯನ್ನೇ ಅರಿಯದ ಶ್ರೀರಾಮಚಂದ್ರ ಯುದ್ಧಕಾಂಡದ ಒಂದು ಸಂದರ್ಭದಲ್ಲಿ 'ನಾನು ಯಾರು?' ಎಂದು ಬ್ರಹ್ಮನನ್ನು ಕೇಳುವ ಪ್ರಸಂಗವಿದೆ. ಮಹಾಭಾರತದ ಹೊತ್ತಿಗಾಗಲೇ ವ್ಯಕ್ತಿಪೂಜೆ ವಿಜೃಂಭಿಸಿಬಿಟ್ಟಿತ್ತು. ಎಲ್ಲಿಯವರೆಗೆ ಎಂದರೆ, ಶ್ರೀಕೃಷ್ಣನನ್ನು ವಿಷ್ಣುವಿನ ಪೂರ್ಣಾವತಾರ ಎಂದು ಘೋಷಿಸುವವರೆಗೆ! ಆದರೆ ಕೃಷ್ಣ ಮನುಷ್ಯನಾಗಿದ್ದುಕೊಂಡೇ ತನ್ನ ಶಕ್ತಿ ಸಾಮರ್ಥ್ಯಗಳಿಂದ, ಬುದ್ಧಿ ಚಾತುರ್ಯಗಳಿಂದ, ರಾಜಕೀಯ ಮುತ್ಸದ್ದಿತನದಿಂದ ಮಹಾಭಾರತದಲ್ಲಿ ಕಾಣಿಸಿಕೊಂಡಿದ್ದಾನೆ. ಹಾಗೆಯೇ ದುಷ್ಟ ಶಿಕ್ಷೆ, ಶಿಷ್ಟ ರಕ್ಷೆ ಎಂಬ ತನ್ನ ಮಾತನ್ನು ನಿಭಾಯಿಸಿದ್ದಾನೆ ಸಹ ಎಂದು ಯಾರೂ ಯೋಚಿಸುವ ಗೊಡವೆಗೇ ಹೋಗುತ್ತಿಲ್ಲ.

(ನಮ್ಮಲ್ಲೊಂದು ವಿರೋಧಾಭಾಸವಿದೆ. ಕೆಲವು ಮನುಷ್ಯರನ್ನು ದೇವರೆಂದು ಪೂಜಿಸೋದು. ಕೆಲವು ಮನುಷ್ಯರನ್ನು ಮನುಷ್ಯರೆಂದೇ ಪರಿಗಣಿಸದೆ ಇರೋದು.)

ಮನುಷ್ಯರಿಗೆಲ್ಲ ದೇವರೆಂದು ಆರೋಪಿಸತೊಡಗಿದರೆ ದೇವರು ಅನ್ನುವುದಕ್ಕೇನು ಅರ್ಥ? ಇನ್ನು ಕೆಲವರ ವಾದ ಸರಣಿ ವಿಚಿತ್ರವಾಗಿರುತ್ತದೆ.

'ಕನಸಿನಲ್ಲಿ ದೇವರು ಪ್ರತ್ಯಕ್ಷನಾಗಿ ನನ್ನ ರೋಗ ವಾಸಿ ಮಾಡಿದ.'

(ತಜ್ಞರ ಪ್ರಕಾರ ರೋಗ ಅವನಿಗೊಂದು ಭ್ರಮೆ)

'ನಮ್ಮ ಮನೆಯ ಕಂಬದಲ್ಲಿ ದೇವರು ಒಡಮೂಡಿದ್ದಾನೆ.'

'ದೇವರು ಮೈಮೇಲೆ ಆವಾಹನೆಯಾಗಿ ಸಂಕಷ್ಟಗಳನ್ನು ಪರಿಹರಿಸುತ್ತಾನೆ.'

(ಮುಗ್ಧ ಭಕ್ತರನ್ನು ಸುಲಿಯುವ ಹುನ್ನಾರ!)

ಹೀಗೆ ದೇವರನ್ನು ಅವನ ಪಾಡಿಗೆ ಅವನನ್ನು ಬಿಡಲು ಸಹ ಯಾರೂ ತಯಾರಿಲ್ಲ. ಎಲ್ಲರಿಗೂ ದೇವರಿಂದ ಗರಿಷ್ಠ ಉಪಯೋಗ ಪಡೆದುಕೊಳ್ಳುವ ಆತುರ.

೧. ಒಬ್ಬ ಅವಿದ್ಯಾವಂತ, ಮೂಢನಂಬಿಕೆಗಳಿಗೆ ಈಡಾದ, ದಲಿತ ಹೆಣ್ಣು ಮಗಳಿಗೆ ಏನೋ ಭೂತ ಭಯ. ಅದನ್ನು ಕುರಿತು ಹಗಲೂ ರಾತ್ರಿ ಅವಳ ಮನಸ್ಸಿನಲ್ಲಿ ಚಿಂತೆ ಹೆಪ್ಪುಗಟ್ಟುತ್ತ ಹೋಗುತ್ತದೆ. ಕೆಲವೇ ದಿನಗಳಲ್ಲಿ ತೀವ್ರ ಚಿಂತೆಯ ಒತ್ತಡದಲ್ಲಿ ಇದ್ದವಳು ಅವಳು ಭೂತದ ಕಾಟದಿಂದ ಕಂಗಾಲಾಗುತ್ತಾಳೆ, ಚೀರುತ್ತಾಳೆ, ಬಟ್ಟೆ ಹರಿದುಕೊಳ್ಳುತ್ತಾಳೆ. ಇದನ್ನೇ ನೋಡಿದವರು ಭಾನಾಮತಿ ಎಂದು ಕರೆಯುತ್ತಾರೆ.

೨. ಒಬ್ಬ ಕವಿ-ಕತೆಗಾರನಿಗೆ ಏನೋ ಒಂದು ಮಹತ್ವದ ಕೃತಿ ರಚಿಸುವ ಹಂಬಲ. ಏಕಾಂತದಲ್ಲಿ ಕೂತು ಗಾಢವಾಗಿ ಯೋಚಿಸತೊಡಗಿದಾಗ ಅವನ ಚಿತ್ತದಲ್ಲಿ ಒಂದು ವಸ್ತು ಹೊಳೆಯತೊಡಗುತ್ತದೆ. ಅದರಲ್ಲಿಯೇ ಮನಸ್ಸು ಕೇಂದ್ರೀಕರಿಸಿದಾಗ ಅವನು ಅಂದುಕೊಂಡ ಕೃತಿಯ ಒಂದು ಸ್ಪಷ್ಟ ಆಕಾರ ದೊರೆತು ಆತ ಬರೆದು ಮುಗಿಸುತ್ತಾನೆ. ಅದೊಂದು ಅದ್ಭುತ ಕೃತಿ ಎಂಬ ಮಾನ್ಯತೆ ದೊರೆಯುತ್ತದೆ.

೩. ಒಬ್ಬ ಭಕ್ತ, ಸಂನ್ಯಾಸಿ ಅಥವಾ ದೇವರ ಅಸ್ತಿತ್ವದ ಬಗ್ಗೆ ಗಾಢವಾಗಿ ವಿಶ್ವಾಸವುಳ್ಳವ ಯಾವುದೋ ದೇವರನ್ನು ಸಾಕ್ಷಾತ್ಕರಿಸಿಕೊಳ್ಳುವ ಹಂಬಲದಲ್ಲಿ ಏಕಾಗ್ರತೆಯಿಂದ ತಪಸ್ಸಿನಲ್ಲಿ ತಲ್ಲೀನನಾಗುತ್ತಾನೆ. ಅವನ ಸಾಧನೆ ಪರಿಪಕ್ವ ಸ್ಥಿತಿಗೆ ಬಂದಾಗ ಅವನ ಬಯಕೆಗೆ ಅನುಗುಣವಾಗಿ ರಾಮನೋ, ಕೃಷ್ಣನೋ, ಶಿವನೋ ಅಥವಾ ಮತ್ಯಾವುದೋ ದೈವೀಮೂರ್ತಿಯ ಸಾಕ್ಷಾತ್ಕಾರವಾಗುತ್ತದೆ (ಒಂದು ವಿಷಯ ಗಮನದಲ್ಲಿರಲಿ: ಶಿವನನ್ನು ಕುರಿತು ತಪಸ್ಸು ಮಾಡಿದವರಿಗೆ ರಾಮ ಪ್ರತ್ಯಕ್ಷನಾಗುವುದಿಲ್ಲ). 'ಓಹ್ ನಾನು ದೇವರನ್ನು ನೋಡಿಬಿಟ್ಟೆ' ಎಂದು ಪರಮಾನಂದ ಹೊಂದುತ್ತಾನೆ.

ಈ ಮೇಲಿನ ಮೂರು ಸಂಗತಿಗಳೂ ಅವರವರ ಪಾಲಿಗೆ ಒಂದು ವಿಶಿಷ್ಟ ಅನುಭವ. ಆದರೆ ವಾಸ್ತವವಾಗಿ ನಾವು ಏನನ್ನು ಕುರಿತು ಚಿಂತಿಸುತ್ತೇವೆಯೋ ಕೊನೆಯಲ್ಲಿ ಅದನ್ನೇ ಪಡೆಯುತ್ತೇವೆ. ಆದರೆ ಅದು ಪರಮ ಸತ್ಯ ಆಗಿರಬೇಕೆಂಬ ಕಡ್ಡಾಯವೇನಿಲ್ಲ.

ಅನೇಕರಿಗೆ ದೇವರು ಒಂದು ಅವಲಂಬನ, ಒಂದು ನಂಬಿಕೆ, ಒಂದು ಮಾನಸಿಕ ಶಕ್ತಿ, ಒಂದು ಸ್ಫೂರ್ತಿ, ಒಂದು ಉತ್ತೇಜನ, ಒಂದು ಪ್ರೋತ್ಸಾಹ. ಹೀಗೆ ಇನ್ನೂ ಏನೇನೋ. ಜನಸಾಮಾನ್ಯರ ಜೀವನ ಸರಳವಾಗಿ ಸಾಗುವುದೇ ಈ ಆಧಾರದ ಬಲದಲ್ಲಿ. ಆದರೆ ಮಾನಸಿಕವಾಗಿ ದೃಢತೆ ಹೊಂದಿರುವಂತಹ ಜನರಿಗೆ ಈ ಅವಲಂಬನಗಳ ಅಗತ್ಯವಿರುವುದಿಲ್ಲ. ದೇವರ ಬಗ್ಗೆ ತಲೆಕೆಡಿಸಿಕೊಳ್ಳದೆ ಸ್ಥಿರವಾಗಿರುವ ಅನೇಕರು ಜೀವನದಲ್ಲಿ ಯಶಸ್ವಿಯಾಗಿರುವುದನ್ನು ನಾವು ನೋಡಬಹುದು.

ದೇವರು ಮನುಷ್ಯನನ್ನು ಸೃಷ್ಟಿಸಿದನೋ ಇಲ್ಲವೋ ಗೊತ್ತಿಲ್ಲ, ಆದರೆ ಮನುಷ್ಯ ದೇವರನ್ನು ಸೃಷ್ಟಿಸಿರುವುದು ನಿಸ್ಸಂದೇಹವಾಗಿ ನಿಜ.

ಆದ್ದರಿಂದ ದಾರ್ಶನಿಕರು ಹೇಳುವ ಹಾಗೆ 'ದೇವರು ಎಂದರೆ ಅದೊಂದು ಪರಮೋಚ್ಚ ಶಕ್ತಿ. ಅದಕ್ಕೆ ಹುಟ್ಟು ಸಾವುಗಳಿಲ್ಲ. ಅದು ನಿರಾಕಾರ, ನಿರ್ಗುಣ. ಅದರ ಅಧೀನದಲ್ಲಿ ಈ ಸೃಷ್ಟಿ ಅಡಗಿದೆ. (ಈ ಸೃಷ್ಟಿಗೆ ನಿಜವಾದ ಕಾರಣಗಳನ್ನು ಗೊತ್ತುಹಚ್ಚಲು ವಿಜ್ಞಾನಿಗಳು ಪ್ರಯತ್ನಿಸುತ್ತಿದ್ದಾರೆ. ಅದು ಗೊತ್ತಾದಾಗ ವೈಜ್ಞಾನಿಕವಾಗಿ ದೇವರ ಅಸ್ತಿತ್ವವೇ ಇಲ್ಲದಂತಾಗಿಬಿಡುತ್ತದೆ).

ಕೊನೆಯದಾಗಿ, ಈ ಲೇಖನದ ಉದ್ದೇಶ ದೇವರು ಇಲ್ಲ ಎಂದಾಗಲೀ, ದೇವರನ್ನು ನಂಬಬೇಡಿ ಎಂದಾಗಲೀ ಅಲ್ಲ. ದೇವರ ಮೇಲೆ ವಿಶ್ವಾಸವಿರುವವರನ್ನು ಅಗೌರವದಿಂದ ಕಾಣುವ ಉದ್ದೇಶವೂ ಇಲ್ಲ. ಆದರೆ ಒಂದು ನಂಬಿಕೆಯ ಪ್ರಕಾರ ಪ್ರತಿಯೊಬ್ಬ ಮನುಷ್ಯನಿಗೂ ಎಲ್ಲಾ ನ್ಯೂನತೆಗಳ ನಡುವೆ ಒಂದು ವಿಶೇಷ ಸಾಮರ್ಥ್ಯ ಇದ್ದೇ ಇರುತ್ತದೆ. ಅದೊಂದು ಗುಪ್ತನಿಧಿ ಇದ್ದ ಹಾಗೆ. ಅವನಿಗೆ ಅದರಲ್ಲಿ ಆಸಕ್ತಿ ಹುಟ್ಟಬೇಕು. ಅದನ್ನು ಹೊರತೆಗೆಯುವ ಪ್ರಯತ್ನ ಮಾಡಬೇಕು. ಯಶಸ್ವಿಯಾದವನು ಉಳಿದವರಿಗಿಂತ ಭಿನ್ನವಾಗಿ ನಿಲ್ಲುತ್ತಾನೆ. ಮುಖ್ಯವಾಗಿ, ಪ್ರಶ್ನೆ ಮಾಡುವ ಮನೋಭಾವ ನಮಗಿಲ್ಲ, ಪ್ರಯತ್ನ ಮಾಡುವ ಮನಸ್ಸಿಲ್ಲ, ಹುಡುಕಾಟ ಎಂಬ ಶಬ್ದದ ಪರಿಚಯವೇ ನಮಗಿಲ್ಲದಂತೆ ಇದ್ದೇವೆ. ಹಾಗಾಗಿ ನಮಗೆ ಕಲ್ಲನೆಯೇ ದೇವರು. ಕಂಡಕಂಡವರೆಲ್ಲ ದೇವರುಗಳು. ದೇವರು ನಮ್ಮ ಕೈಗೆಟುಕುವಷ್ಟು ಹತ್ತಿರ ಎಂಬ ಭ್ರಾಂತಿಯಲ್ಲಿ ನಾವು ಮುಳುಗಿಬಿಟ್ಟಿದ್ದೇವೆ.

ರಾಮಚಂದ್ರ ಭಾವೆ
''ಆಶೀರ್ವಾದ'', ವಿವೇಕಾನಂದ ರಸ್ತೆ, ೩ನೇ ಕ್ರಾಸ್, ೨ನೇ ಸ್ಟೇಜ್, ಗದಗ - ೫೮೨ ೧೦೧

# ಡಾ|| ಎಚ್. ಜೆ. ಲಕ್ಕಪ್ಪಗೌಡ ಮತ್ತು ಜಾನಪದ

ಡಾ|| ಸುಶೀಲಾ ಸೆಲ್ಲೂರ

> ಪ್ರೊ|| ಲಕ್ಕಪ್ಪಗೌಡರು ಜಾನಪದ ಸಂಶೋಧಕರಾಗಿ, ಸಂವರ್ಧಕರಾಗಿ, ಸಂಘಟಕರಾಗಿ ದುಡಿದಿರುವುದಲ್ಲದೆ, ಜಾನಪದ ವಿದ್ವಾಂಸರ, ಬರಹಗಾರರ ಕೃತಿಗಳಿಗೆ ಬರೆದ ಮುನ್ನುಡಿ, ಹಿನ್ನುಡಿಗಳೆಲ್ಲಾ ಒಂದೆಡೆ ಲಭ್ಯವಾದರೆ ಓದುಗರಿಗೆ ತುಂಬಾ ಪ್ರಯೋಜನವಾಗುತ್ತದೆ. ಹಾಗೆಯೇ ವಿಶ್ವವಿದ್ಯಾನಿಲಯದಲ್ಲಿ ಪಿಎಚ್.ಡಿ. ವಿದ್ಯಾರ್ಥಿಗಳಿಗೆ ಮಾರ್ಗದರ್ಶಕರಾಗಿ, ಅಜ್ಞಾತ ವಿಷಯಗಳನ್ನು ಆಯ್ದುಕೊಂಡು ನಡೆಸಿದ ಸಂಶೋಧನೆಗಳ ವಿಷಯಗಳು ಅವರ ಸದಭಿರುಚಿಗೆ ಸಾಕ್ಷಿಯಾಗಿವೆ.
>
> ಪ್ರೊ|| ಲಕ್ಕಪ್ಪಗೌಡರು ಸರಳತೆಯನ್ನು ಮೈಗೂಡಿಸಿಕೊಂಡು, ಜಾನಪದ ಬೇರೆಯಲ್ಲ, ತಮ್ಮ ಬದುಕು ಬೇರೆಯಲ್ಲ ಎಂಬಂತೆ ಒಂದಾಗಿದ್ದು, ಜನಪದ ಕಲೆ, ಸಂಸ್ಕೃತಿ, ಪರಂಪರೆ ಬೆಳೆಸುವ ನಿಟ್ಟಿನಲ್ಲಿ ಮಹತ್ತ್ವದ ಕಾರ್ಯಗಳನ್ನು ನಿರ್ವಹಿಸುತ್ತಾ 'ಜಾನಪದ ವಿಶ್ವವಿದ್ಯಾನಿಲಯ'ವೊಂದು ಸ್ಥಾಪನೆಯಾಗಬೇಕೆಂದು ಆಗಾಗ್ಗೆ ಹೇಳುತ್ತಲೇ ಬಂದಿದ್ದಾರೆ.

"ಜಾನಪದ, ಜಗತ್ತಿನ ಮತ್ತು ಮನುಕುಲದ ಸಂಸ್ಕೃತಿಯ ಹಾಗೂ ಎಲ್ಲಾ ಜ್ಞಾನ ವಿಜ್ಞಾನಗಳ ಮೂಲ ಮಾತೃಕೆ. ಈಗ ಆವಿಷ್ಕಾರಗೊಂಡಿರುವ ಎಲ್ಲ ವೈಜ್ಞಾನಿಕ ಸೃಷ್ಟಿಗಳ ಹಾಗೂ ವಿವಿಧ ದೃಷ್ಟಿಕೋನದ ವಿಚಾರಗಳ ಮೂಲ ಹೊಳಹು ಬಹುಮಟ್ಟಿಗೆ ಅಲ್ಲಿಂದಲೇ ಬಂದದ್ದು. ಈಗಲೂ ಈ ನಾಗರಿಕ ಜಗತ್ತಿನಲ್ಲೂ ಜಾನಪದವೇ ನಮ್ಮ ನರನಾಡಿಗಳಲ್ಲಿ ಅಂತರ್‌ವಾಹಿನಿಯಾಗಿ ಸುಪ್ತವಾಗಿ ಹರಿಯುತ್ತಾ ನಮ್ಮ ಪ್ರಜ್ಞಾವಲಯದ ಆಳದಿಂದಲೇ ನಮ್ಮೆಲ್ಲ ಕ್ರಿಯೆಪ್ರಕ್ರಿಯೆಗಳಿಗೆ ಪ್ರೇರಣೆ ಒದಗಿಸುತ್ತದೆ ಎಂದರೆ ತಪ್ಪಲ್ಲ. ನಮ್ಮ ಪುರಾತನ ಸಂಸ್ಕೃತಿಯ ಮೂಲಾಂಶಗಳನ್ನು ನಮ್ಮೆದುರಿಗೆ ತೆರೆದಿಡುವ ಅಪೂರ್ವ ಜನಪದ ಕಲೆಗಳ ಬಗ್ಗೆ ಸಾಕಷ್ಟು ಕೆಲಸ ನಡೆದಿಲ್ಲ. ಜಾನಪದದ ಉಪೇಕ್ಷಿತ ಕ್ಷೇತ್ರಗಳು ಇನ್ನೂ ಕನ್ನೆ ನೆಲವಾಗಿ ಉಳಿದು ಪುನರುತ್ಥಾನಕ್ಕಾಗಿ ಹಾತೊರೆಯುತ್ತಿವೆ" (ಜಾನಪದ ಸಂಗಾತಿ) ಎಂಬ ಕಳಕಳಿಯ ಮಾತುಗಳನ್ನಾಡಿದವರು ಬೇರಾರೂ ಅಲ್ಲ, ಪ್ರೊಫೆಸರ್ ಲಕ್ಕಪ್ಪಗೌಡರು. ಇವರು ಕಳೆದ ಮೂರು ದಶಕಗಳಿಂದ ಜಾನಪದದಲ್ಲಿ ಸಂಶೋಧನೆ, ವಿಚಾರ, ವಿಮರ್ಶೆ, ಕಲಾಮೇಳ, ಕಮ್ಮಟ ನಡೆಸುವುದರ ಮೂಲಕ ಕರ್ನಾಟಕದಲ್ಲಿ, ಜಾನಪದ ದಿಗ್ಗಜರಾಗಿದ್ದ ಡಾ|| ಜೀಶಂಪ ಅವರ ನಂತರ ನಮಗಿಂದು ಮಹತ್ವದ ವಿದ್ವಾಂಸರಾಗಿ ಕಂಡುಬರುತ್ತಾರೆ.

ಡಾ|| ಲಕ್ಕಪ್ಪಗೌಡರು ಹಾಸನ ಜಿಲ್ಲೆ ಹಂಪಾಪುರದಲ್ಲಿ ಹುಟ್ಟಿ ಬೆಳೆದವರು. ಜಾನಪದ ಇವರ ಗೀಳು. ಡಾ|| ದೇಜಗೌ ಇವರ ಗುರು, ಡಾ|| ಜೀಶಂಪ ಇವರ ಒಡನಾಡಿ. ಇಂಥವರ ಸತ್ಸಂಗದಿಂದ ಅವರನ್ನೇ ಇವರು ಅನುಕರಿಸಿದರೆಂದರೆ ತಪ್ಪಾಗಲಿಕ್ಕಿಲ್ಲ. ಜಾನಪದದ ಕಥೆ, ಗೀತೆ, ಗಾದೆ, ಒಗಟು, ನಂಬಿಕೆ, ಸಂಪ್ರದಾಯ, ಕಲೆ, ಉಡುಗೆ-ತೊಡುಗೆ ಮುಂತಾದ ಎಲ್ಲ ಪ್ರಕಾರಗಳಲ್ಲಿ ಕ್ಷೇತ್ರಕಾರ್ಯ ಮಾಡಿ ಕೃತಿ ರಚಿಸಿದ್ದಾರೆ. ಶಿಷ್ಟ ಸಾಹಿತ್ಯದಲ್ಲಿ ಕಥೆ, ಜೀವನ ಚರಿತ್ರೆ, ನಾಟಕ, ಶಿಶುಸಾಹಿತ್ಯ ಮುಂತಾದ ಪ್ರಕಾರಗಳಲ್ಲಿ ಕೆಲಸ ಮಾಡಿದ್ದರೂ ಇವರಿಗೆ ಅತ್ಯುನ್ನತ ಸ್ಥಾನ ದೊರಕಿದ್ದು 'ಜಾನಪದ'ದಿಂದಲೇ ಎನ್ನಬಹುದು. ಜನಪದ ಸಂಸ್ಕೃತಿ, ಸಾಹಿತ್ಯ, ಸಂಗ್ರಹ, ಸಂಪಾದನೆ, ವಿಶ್ಲೇಷಣೆ, ವ್ಯಾಖ್ಯಾನದ ಹಾದಿಯಲ್ಲಿ ಮನದಾಳದಿಂದ ಮೂಡಿಬಂದ ಇವರ ಕೃತಿಗಳು ಕೆಲವೇ ಆದರೂ, ಅವು ನಮ್ಮ ಜಾನಪದ ಲೋಕದ ವಿದ್ವಾಂಸರ ಗಮನ ಸೆಳೆದವು. ಈ ದಾರಿಯಲ್ಲಿ ಹಿಂತಿರುಗಿ ನೋಡದೆ ಗೌಡರು ದಾಪುಗಾಲು ಹಾಕುತ್ತ ಮುಂದೆ ಸಾಗಿದ್ದಾರೆ. ಮಂಗಳೂರು ವಿ.ವಿ.ದಲ್ಲಿ ಅಧ್ಯಾಪಕರಾಗಿ, ಕುವೆಂಪು ವಿ.ವಿ.ದ ಕುಲಸಚಿವರಾಗಿ, ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯ ಅಧ್ಯಕ್ಷರಾಗಿ, ಪುಸ್ತಕ ಪ್ರಾಧಿಕಾರದ ಅಧ್ಯಕ್ಷರಾಗಿ, ಅನಂತರ ಹಂಪಿ ಕನ್ನಡ ವಿಶ್ವವಿದ್ಯಾನಿಲಯದ ಕುಲಪತಿ ಸ್ಥಾನವನ್ನು ಅಲಂಕರಿಸಿ, ಉತ್ತಮ ರಚನಾತ್ಮಕ ಕಾರ್ಯಕ್ರಮಗಳನ್ನು ನಡೆಸುತ್ತಾ ತಮ್ಮ ಹೆಜ್ಜೆ ಗುರುತುಗಳನ್ನು ಸ್ಥಾಪಿಸಿದ್ದಾರೆ. ಈ ಎಲ್ಲ ಹುದ್ದೆಗಳು ಬಹಳ ದೊಡ್ಡವೆಂದು ಭಾವಿಸದೆ, ನಿರಹಂಕಾರದಿಂದ ಸರಳತೆಯಿಂದ ಎಲ್ಲರೊಡಗೂಡಿ, ಇವರು ಕಾರ್ಯ ನಿರ್ವಹಿಸುತ್ತಾ ಬಂದಿರುವುದು ಒಂದು ಸಾಧನೆಯೇ ಸರಿ.

ಜಾನಪದ ಅಧ್ಯಯನವನ್ನು ಕೇವಲ ಇವರ ಕೃತಿಗಳಿಂದ ಮಾತ್ರ ಗುರುತಿಸದೆ ಒಟ್ಟು ಜಾನಪದ ಚಲನಶೀಲತೆ, ಬರಹ ಭಾಷಣ ಮುಂತಾದುವುಗಳನ್ನು ಕಟ್ಟಿಕೊಂಡು ನೋಡಿದಾಗ ಮಾತ್ರ ಲಕ್ಕಪ್ಪಗೌಡರ ಪರಿಪೂರ್ಣ ಜಾನಪದ ವ್ಯಕ್ತಿತ್ವ ಹತ್ತಿರವಾಗುತ್ತದೆ. ಹಾಗಾಗಿ ಇವರ ಜಾನಪದ ಕಾರ್ಯಗಳ ವ್ಯಾಪ್ತಿ ಹಲವು ಹತ್ತು ದಿಕ್ಕಿನಲ್ಲಿ ಹರಿದಿದೆ.

ಲಕ್ಕಪ್ಪಗೌಡರು ಜಾನಪದ ಸಂಶೋಧಕರಾಗಿ, ಸಂವರ್ಧಕರಾಗಿ, ಸಂಘಟಕರಾಗಿ ದುಡಿದಿರುವುದಲ್ಲದೆ, ಜಾನಪದ ವಿದ್ವಾಂಸರ, ಬರಹಗಾರರ ಕೃತಿಗಳಿಗೆ ಬರೆದ, ಮುನ್ನುಡಿ, ಹಿನ್ನುಡಿಗಳೆಲ್ಲಾ ಒಂದೆಡೆ ಲಭ್ಯವಾದರೆ ಓದುಗರಿಗೆ ತುಂಬಾ ಪ್ರಯೋಜನವಾಗುತ್ತದೆ. ಹಾಗೆಯೇ ವಿಶ್ವವಿದ್ಯಾನಿಲಯದಲ್ಲಿ ಪಿಎಚ್.ಡಿ. ವಿದ್ಯಾರ್ಥಿಗಳಿಗೆ ಮಾರ್ಗದರ್ಶಕರಾಗಿ, ಅಜ್ಞಾತ ವಿಷಯಗಳನ್ನು ಆಯ್ದುಕೊಂಡು ನಡೆಸಿದ ಸಂಶೋಧನೆಗಳ ವಿಷಯಗಳು ಅವರ ಸದಭಿರುಚಿಗೆ ಸಾಕ್ಷಿಯಾಗಿವೆ.

ಕುವೆಂಪು ವಿ. ವಿ. ಕನ್ನಡ ವಿಭಾಗದಲ್ಲಿ, ವಿಚಾರ ಸಂಕಿರಣ ಮತ್ತು ಜಾನಪದ ಕಲಾ ಮೇಳಗಳನ್ನು ನಡೆಸಿ, ವಿದ್ವಾಂಸರಿಂದ ಸಂಶೋಧನಾ ಲೇಖನಗಳನ್ನು ಬರೆಸಿ ತಮ್ಮ ಸಂಪಾದಕತ್ವದಲ್ಲಿ ಪ್ರಕಟಿಸಿದ ಮಲೆನಾಡು ಜಾನಪದ, ವಿಶಿಷ್ಟ ಜಾನಪದ, ದ್ರಾವಿಡ ಜಾನಪದ, ಜಾನಪದ ಪೂರಕ ಕ್ಷೇತ್ರಗಳು ಹಾಗೂ ಕರ್ನಾಟಕ ಜಾತ್ರೆಗಳು ಎಂಬ ಜಾನಪದ ಸಂಪುಟಗಳು ಪ್ರೊ|| ಲಕ್ಕಪ್ಪಗೌಡರ ವಿದ್ವತ್ತಿಗೆ ಜಾನಪದದ ಅತ್ಯಾಸಕ್ತಿಗೆ ನಿದರ್ಶನವಾಗಿವೆ. ಇದರಿಂದಾಗಿ ಎಷ್ಟೋ ಅಜ್ಞಾತ ಕಲಾವಿದರು, ಯುವ ವಿದ್ವಾಂಸರು ಬೆಳಕಿಗೆ ಬಂದಿದ್ದಾರೆ.

ಡಾ|| ಜೀಶಂಪ ಮತ್ತು ಡಾ|| ಲಕ್ಕಪ್ಪಗೌಡರು ಜಾನಪದದ ಕೆಲಸ ಆರಂಭಿಸಿದ ಕಾಲದಲ್ಲಿ ಈಗಿನಷ್ಟು ಜಾನಪದ ವೈಜ್ಞಾನಿಕವಾಗಿ ಬೆಳೆದಿರಲಿಲ್ಲ. ಆದರೂ ಅವರ ಪ್ರಾಮಾಣಿಕ ಸಂಶೋಧನಾ ಕ್ಷೇತ್ರಕಾರ್ಯದಿಂದಾಗಿ ಅಜ್ಞಾತ ವಿಷಯಗಳತ್ತ ಆಸಕ್ತರ ಗಮನ ಸೆಳೆದರು. ಹೀಗೆ ತಾವೊಬ್ಬರೇ ಬೆಳೆಯದೆ ಒಂದು ಉತ್ಸಾಹಿ ಯುವ ಜಾನಪದ ವಿಜ್ಞಾನಿಗಳ ತಂಡವನ್ನೇ ಕಟ್ಟಿ ಬೆಳೆಸಿದ ಕೀರ್ತಿ ಇವರಿಗೆ ಸಲ್ಲುತ್ತದೆ. ಜಾನಪದ ಸಂಸ್ಕೃತಿಯ ಸ್ವರೂಪವನ್ನು ವಾಸ್ತವಿಕ ವೈಚಾರಿಕ ದೃಷ್ಟಿಯಿಂದ ಗ್ರಾಮೀಣ ಪ್ರದೇಶಗಳಲ್ಲೂ ಪ್ರಚುರಕ್ಕೆ ತಂದಿದ್ದಾರೆ. "ನಮ್ಮ ಸಂಸ್ಕೃತಿ ಚಪಲಕ್ಕೆ ತಕ್ಕಂತೆ ಬೆಳೆಯಬಾರದು. ಮಾನಸಿಕ ಹಸಿವು ಪ್ರತಿಯೊಬ್ಬರಲ್ಲೂ ಇರಬೇಕು. ನಾಗರಿಕ ಜಗತ್ತಿನಲ್ಲಿ ವ್ಯಕ್ತಿ ಮುಖ್ಯನಾಗಿ ಸಮುದಾಯದಲ್ಲಿ ಒಟ್ಟಾಗಿ ಬಾಳುವ ಗುಣ ಇಲ್ಲವಾಗಿದೆ" ಎಂದು ಚಿಂತಿಸುವ ಶ್ರೀಯುತರು, ಕಲಾವಿದರಿಗೆ ಮನೆ ಕಟ್ಟಿಕೊಡಬೇಕೆಂದು ಸರ್ಕಾರವನ್ನು ಒತ್ತಾಯಿಸುತ್ತಿದ್ದುದು ಕಲಾವಿದರ ಬಗೆಗೆ ಅವರಿಗಿದ್ದ ಕಾಳಜಿಯನ್ನು, ಪ್ರೀತಿಯನ್ನು ವ್ಯಕ್ತಪಡಿಸುತ್ತದೆ.

ಇವರ 'ಹೊಂಬಾಳೆ' ಕೃತಿಯಲ್ಲಿ ಒಂಬತ್ತು ವಿಶಿಷ್ಟ ವೈಚಾರಿಕ ಲೇಖನಗಳು ಸೇರ್ಪಡೆಗೊಂಡಿವೆ. ಅದರಲ್ಲಿ ಜನಪದ ಆಟಗಳನ್ನು ಕುರಿತ ಇವರ ವಿಚಾರ ಗತಕಾಲದ ಬದುಕಿನ ಮೇಲೆ ಬೆಳಕು ಚೆಲ್ಲುತ್ತದೆ. ಆಟಗಳನ್ನು ಒಳಾಂಗಣ, ಹೊರಾಂಗಣ ಎಂದು ವಿಂಗಡಿಸಿ ಹೆಣ್ಣು ಮತ್ತು ಗಂಡಿಗೇ ಪ್ರತ್ಯೇಕ ಆಟಗಳನ್ನು ನಮ್ಮ ಹಿರಿಯರು ಕಲ್ಪಿಸಿಕೊಂಡದ್ದು ಒಂದು ಪ್ರದೇಶದ ಅಧ್ಯಯನದ ಸಾಮಗ್ರಿಯಾಗಿ ಅಂತರ್‌ಸಂಬಂಧೀ ವಿಷಯಗಳ ಮೂಲಕ ಇವನ್ನು ಹೇಗೆ ವಿಶ್ಲೇಷಿಸಬೇಕೆಂಬುದನ್ನು, ಸಾಮಾಜಿಕ, ಭೌಗೋಳಿಕ, ಧಾರ್ಮಿಕ ಪರಿಕಲ್ಪನೆಗಳು ಈ ಆಟ ವಿನೋದಗಳಲ್ಲಿ, ಆಚರಣೆ ಸಂಪ್ರದಾಯಗಳಲ್ಲಿ ಹೇಗೆ ಪ್ರಭಾವ ಬೀರಿವೆಯೆಂಬುದನ್ನು ಆಧಾರಸಹಿತ ವಿವರಿಸಿದ್ದಾರೆ.

'ಆಕಾಶ ಜಾನಪದ' ಎಂಬ ಲೇಖನ ಪ್ರಾದೇಶಿಕ ಜಾನಪದ ಅಧ್ಯಯನಕ್ಕೆ ಒಂದು ಉತ್ತಮ ಉದಾಹರಣೆಯಾಗಿದೆ. Text ಮತ್ತು Contextಗಳ ಸಂಬಂಧ ಸಂಶೋಧಕರಿಗೆ ಎಷ್ಟು ಮುಖ್ಯ ಎಂಬುದನ್ನೂ ಸೈದ್ಧಾಂತಿಕ ನೆಲೆಗಟ್ಟಿನ ಮೇಲೆ ಹೇಗೆ ಅಭ್ಯಸಿಸಬೇಕೆಂಬುದನ್ನೂ ಇಲ್ಲಿ ನಿರೂಪಿಸಿದ್ದಾರೆ.

'ವಸತಿ ಜಾನಪದ : ಕೆಲವು ಚಿಂತನೆಗಳು' ಎಂಬ ಲೇಖನ ಜನಪದ ಸಂಸ್ಕೃತಿಯ ಸ್ವರೂಪವನ್ನು ಹಳ್ಳಿಯಿಂದಲೇ ಆರಂಭಿಸಬೇಕು. ಸಾಂಸ್ಕೃತಿಕ ಅಭಿವ್ಯಕ್ತಿಗಳನ್ನು ವಿಶ್ಲೇಷಿಸುವಾಗ

# ಜೀವಂತ ಗೋಡೆಗಳು




ಎಲ್ಲರನೂ ಜೋಗುಳ ಹಾಡಿ ಮಲಗಿಸಿ
'ರಾತ್ರಿ' ಎದ್ದು ಕೂರುತ್ತದೆ ನಮಗಾಗಿ.
ಅಲ್ಲಿಂದ ಶುರು ನಮ್ಮ ದಿನ. ಅದು ನಮ್ಮ ಸುಪ್ರಭಾತ. ಅದೇ ನಮ್ಮ ಬೆಳಗು.
ಅಲ್ಲಿಂದಲೇ ಮೊದಲಾಗುವುವು ನಮ್ಮ ಕೆಲಸಗಳು
ಕತ್ತಲಲಿ ನಮಗೆ ವಯಸು, ಬಿಸುಪುಗಳಿರುವುದಿಲ್ಲ.
ಆಗ ಗೋಡೆಗಳ ಬಿಗಿದಪ್ಪಿಕೊಳ್ಳುತ್ತೇವೆ, ನಾವು
ಘೋಷಣೆಗಳೊಂದಿಗೆ ಗೋಡೆಗಳ ಸ್ಪರ್ಶಿಸುವೆವು
ಕೆಂಪುಸತ್ಯಗಳಿಂದ ಅವುಗಳನಲಂಕರಿಸುವೆವು.
ಬಿಮ್ಮಗೆ ಬಿಗಿದು ನಿಂತ ಗೋಡೆಗಳು
ಒಮ್ಮೆ ಯೌವನದ ಮತ್ತೇರಿ ಮದದಿಂದ ಕೆನೆಯುವುವು.

ಅಚ್ಚ ಬಿಳಿಗೋಡೆಗಳ ಮೇಲಿನ ಕೆಂಪು ಸತ್ಯಗಳು
ನಮ್ಮನು ಬಡಿದೆಬ್ಬಿಸುವುವು

ಯಾರ ದೃಷ್ಟಿಯೂ ತಾಕಿರದ ಅಸ್ಪರ್ಶಿತ ಗೋಡೆ ಮೈದಾನಗಳ
ಹುಡುಕಿಕೊಂಡು ಹಗಲು ಹೊರಬಿದ್ದಾಗ
ರಸ್ತೆ ಮೇಲಿನ ರಂಗುರಂಗಿನ ಅಂದಗಳು
ಒಂದು ಕ್ಷಣ ನಮ್ಮನ್ನು ವಿವಶರನ್ನಾಗಿಸುವುವು
ಆ ಕ್ಷಣ ಸತ್ತ ಮರುಕ್ಷಣ
ನಿಲ್ಲುತ್ತೇವೆ ಮತ್ತೆ ಗೋಡೆ ಮುಂದೆ.
ಕಾಣಿಸಿದ ಪ್ರತಿ ಗೋಡೆ –
ಕಣ್ಣ ಬಲೆಗೆ ಸಿಕ್ಕ ಬೇಟೆ.
ಗೋಡೆ ಮೇಲಿನ ಘೋಷಣಾಬರಹಗಳಿಗೆ ಮುತ್ತಿಡುವ
ಎಂದು ಹಾಗೇ ಗೋಡೆ ಮೇಲೆ ಬಾಗಿದೆವಾ...
ಲಾಠಿಗಳು ನಮ್ಮನ್ನು ಮುತ್ತಿರುತ್ತವೆ.

ನೆತ್ತರ ಸಾಕ್ಷಿಯಾಗಿ ಹೇಳುತ್ತೇನೆ:
ಆಗ ಗೋಡೆಗಳೇ ಮಾತಾಡಿ ಸಂತೈಸುತ್ತವೆ.
ನಮ್ಮ ಧ್ವನಿಗಳು ನಡುಗುತ್ತವೆ.

ತೆಲುಗು ಮೂಲ : **ಮಹೆಜಬೀನ್**, ಕನ್ನಡಕ್ಕೆ : **ಚಿದಾನಂದ ಸಾಲಿ**
ಸಿರಿವಾರ ಅಂಚೆ, ರಾಯಚೂರು ಜಿಲ್ಲೆ - ೫೮೪ ೧೨೯

ಅಲ್ಲಿನ ಉತ್ಪನ್ನಗಳನ್ನು ಗಮನದಲ್ಲಿರಿಸಿಕೊಳ್ಳಬೇಕು ಎಂಬುದನ್ನು ವಿಶದಪಡಿಸುತ್ತದೆ.

'ಗಾದೆ ಒಗಟುಗಳ' ಬಗ್ಗೆ ಇವರು ನಡೆಸಿದ ಅಧ್ಯಯನ ತುಂಬಾ ಕುತೂಹಲಕಾರಿಯಾದುದು. ಇವರ 'ಜಾನಪದ ಒಗಟುಗಳು' ಕೃತಿ ಹಲವಾರು ವಿ. ವಿ. ಗಳಲ್ಲಿ ಎಂ.ಎ. ವಿದ್ಯಾರ್ಥಿಗಳಿಗೆ ಪಠ್ಯವಾಗಿದೆ. ಇದರಲ್ಲಿ ಇವರು ಪುರಾಣ, ಐತಿಹ್ಯ, ಕೃಷಿ, ದೈವ, ದೇವರು ಹೀಗೆ ಹಲವು ವಿಚಾರಗಳಿಗೆ ಸಂಬಂಧಿಸಿದಂತೆ ವಿಷಯ ಸಂಗ್ರಹಿಸಿ ವಿಶ್ಲೇಷಿಸಿ ವಿಸ್ತಾರವಾದ ಪ್ರಸ್ತಾವನೆ ಹಾಗೂ ಅರ್ಥಕೋಶ, ವಕ್ಯವಿವರ ಇವುಗಳನ್ನು ವೈಜ್ಞಾನಿಕವಾದ ರೀತಿಯಲ್ಲಿ ಪ್ರಕಟಿಸಿದ್ದಾರೆ.

ಇವರ 'ಅನ್ಯಾರ್ಥಕೋಶ' ಕೃತಿ ಜಾನಪದಕ್ಕೆ ಸಂಬಂಧಿಸಿದ್ದಲ್ಲವೆಂದು ಭಾವಿಸ ಬಹುದಾದರೂ ಇದು ಜನಪದರು ಮಾತನಾಡುವ ಕೆಲವು ವಿಶಿಷ್ಟ ನುಡಿಗಟ್ಟುಗಳನ್ನು, ಬೈಗುಳಗಳನ್ನು, ಹಳ್ಳಿಯ ಮಕ್ಕಳ ಆಡುಮಾತಿನ ಕಟಕಿ ವ್ಯಂಗ್ಯಗಳನ್ನು ತುಂಬಾ ಸೊಗಸಾಗಿ ದಾಖಲಿಸಿರುವಂಥದು. ಇಲ್ಲಿ ಒಂದಕ್ಕೊಂದು ಪದಗಳನ್ನು ಹೊಸ ಅರ್ಥ ಬರುವಂತೆ ಹೆಣೆದಿದ್ದಾರೆ. ಶಬ್ದಗಳನ್ನು ಚುಚ್ಚಿ ಕೆರಳಿಸಿ, ವಿಲಕ್ಷಣ ಅರ್ಥಗಳನ್ನು ಸೃಷ್ಟಿಸಿದ್ದಾರೆ. ಗಂಭೀರವಾದ ಪದಕ್ಕೆ, ಕುಚೋದ್ಯವಾದ ರೀತಿಯಲ್ಲಿ ಯಾವ ಅರ್ಥ ಬರುತ್ತದೆಂಬುದನ್ನು ತುಂಟಾಟ ಆತ್ಮನಿರೀಕ್ಷಣೆ ಜೀವನದ ಅರೆಕೊರೆಗಳನ್ನು ಗಮನಿಸಿ ಇಲ್ಲಿ ವಿವೇಚಿಸಿದ್ದಾರೆ.

'ಮಲ್ಲಿಗೆ ಮೊಗ್ಗು ಸುರಿದಾವೆ' ಎಂಬ ಕೃತಿ 'ಚೈತ್ರಶ್ರೀ-೯೩' ಚಿಕ್ಕಮಗಳೂರು ಜಿಲ್ಲೆಯ ಜಾನಪದ ಕಲಾ ಉತ್ಸವದ ಸ್ಮರಣ ಸಂಪುಟ – ಇದನ್ನು ಡಾ॥ ಲಕ್ಕಪ್ಪಗೌಡರು ಮತ್ತು ಡಾ॥ ನೆಲ್ಲಿಸರ ಅವರು ಸಂಪಾದಿಸಿಕೊಟ್ಟಿದ್ದಾರೆ. ಇದರಲ್ಲಿ ಸುಮಾರು ೩೦ ಲೇಖನಗಳಿದ್ದು, ನಾಡಿನ ವಿವಿಧ ವಿದ್ವಾಂಸರು ವಿಭಿನ್ನ ವಿಷಯಗಳ ಮೇಲೆ ಬರೆದ ವಿದ್ವತ್ಪೂರ್ಣವಾದ ಲೇಖನಗಳನ್ನೊಳಗೊಂಡಿದೆ. ಇದು ತರೀಕೆರೆಯಲ್ಲಿ ನಡೆದ ಪ್ರಥಮ ಜಾನಪದ ಸಮ್ಮೇಳನದಲ್ಲಿ (೧೯೬೫ರಲ್ಲಿ) ಪ್ರಕಟವಾದ ಹೊನ್ನ ಬಿತ್ತೇವು ಹೊಲಕ್ಕೆಲ್ಲ ಎಂಬ ಕೃತಿಯ ನಂತರದ ಅಷ್ಟೇ ಮೌಲಿಕವಾದ ಕೃತಿಯಾಗಿದೆ.

ಇವರ 'ಜನಪದ ಕಥಾವಳಿ' ಜನಪದ ಕಥಾಸಾಹಿತ್ಯದಲ್ಲಿ ಒಂದು ಮಹತ್ವದ ಕೃತಿಯಾಗಿದೆ. ಹಾಸನ ಜಿಲ್ಲೆ ಮತ್ತು ಹೊಳೆನರಸೀಪುರ ಭಾಗದ ಕಲಾವಿದರಿಂದ ಸಂಗ್ರಹಿತವಾದ ಉತ್ತಮ ಕಥೆಗಳ ಸಂಗ್ರಹ ಇದಾಗಿದೆ. ಹಾಸ್ಯಕಥೆಗಳು, ನೀತಿ ಕಥೆಗಳು, ಅತಿಮಾನುಷ ಕಥೆಗಳು, ಪ್ರಾಣಿ ಕಥೆಗಳು ಮುಂತಾದ ವಿವಿಧ ಬಗೆಯ ಕಥೆಗಳು ಇಲ್ಲಿ ಸಂಕಲಿತವಾಗಿವೆ. ಈ ಪುಸ್ತಕ ಮೂರನೆಯ ಮುದ್ರಣ ಪಡೆದು ಪಠ್ಯಪುಸ್ತಕವಾಗಿಯೂ ನಿಯೋಜಿಸಲ್ಪಟ್ಟಿದೆ. ಕಲಾವಿದರ ಬಾಯಿಂದ ಕೇಳಿದ ಕಥೆಗಳನ್ನು ಅವರ ಶೈಲಿಯಲ್ಲಿಯೇ ಸಂಭಾಷಣಾಯುಕ್ತವಾಗಿ ಸರಳವಾಗಿ ಪಡಿಮೂಡಿಸಿದ್ದು ಇದರ ಸ್ವಾರಸ್ಯ.

ಪ್ರೊ॥ ಲಕ್ಕಪ್ಪಗೌಡರು ಸರಳತೆಯನ್ನು ಮೈಗೂಡಿಸಿಕೊಂಡು, ಜಾನಪದ ಬೇರೆಯಲ್ಲ, ತಮ್ಮ ಬದುಕು ಬೇರೆಯಲ್ಲ ಎಂಬಂತೆ ಒಂದಾಗಿದ್ದು, ಜನಪದ ಕಲೆ, ಸಂಸ್ಕೃತಿ, ಪರಂಪರೆ ಬೆಳೆಸುವ ನಿಟ್ಟಿನಲ್ಲಿ ಮಹತ್ತ್ವದ ಕಾರ್ಯಗಳನ್ನು ನಿರ್ವಹಿಸುತ್ತಾ 'ಜಾನಪದ ವಿಶ್ವವಿದ್ಯಾನಿಲಯ'ವೊಂದು ಸ್ಥಾಪನೆಯಾಗಬೇಕೆಂದು ಆಗಾಗ್ಗೆ ಹೇಳುತ್ತಲೇ ಬಂದಿದ್ದಾರೆ. ಇವರ ಚಿಂತನೆಗಳು, ಸಂಘಟನೆಗಳು, ಪರಿಷ್ಕರಣೆ, ತರಬೇತಿ, ನವೀನ ಪ್ರಯೋಗಗಳೆಲ್ಲವನ್ನೂ ಜನತೆ ಇನ್ನೂ ಹೆಚ್ಚು ಹೆಚ್ಚು ಬಳಸಿಕೊಳ್ಳಬೇಕಾಗಿದೆ.

**ಡಾ॥ ಸುಶೀಲಾ ನೆಲ್ಲಿಸರ**
ಜಾನಪದ ಪ್ರಾಧ್ಯಾಪಕಿ, ಕುವೆಂಪು ವಿಶ್ವವಿದ್ಯಾನಿಲಯ
ಶಂಕರಘಟ್ಟ-೫೭೭ ೪೫೧, ಶಿವಮೊಗ್ಗ ಜಿಲ್ಲೆ

# ಕಾಡ್ಬಾತು ಗೂಡ್ಬಿಟ್ಟಿತೆ!

ಮೂಲ : ಮ್ಯಾಕ್ಸ್ ಬೊಲ್ಲಿಗರ್

ಕನ್ನಡಕ್ಕೆ : ಜಿ. ಎಸ್. ಸುಕನ್ಯಾ

ಚಿನ್ನದ ಬೆಳಕನ್ನು ಚೆಲ್ಲುತ್ತಾ ಸೂರ್ಯ ಪಶ್ಚಿಮದ ಬೆಟ್ಟಗಳಲ್ಲಿ ಜಾರುತ್ತಿದ್ದ. ಬೆಟ್ಟಗಳ ಪದರಗಳ ನಡುವೆ ತಿರುಚಿ ಮುರುಚಿ ನುಣುಚಿಕೊಂಡು ಸಾಗಿದ್ದ ಗೊರಸಿನಂತಹ ಹಾದಿಯಲ್ಲಿ ಪುಟ್ಟ ಹುಡುಗ 'ಪುಟ್ಟ' ಮೈ ಕುಣಿಸುತ್ತಾ ಖುಷಿಯಿಂದ ಹೆಜ್ಜೆ ಹಾಕುತ್ತಿದ್ದ. ಥಟ್ಟನೆ ಏನೋ ನೆನಪಾಯಿತು. ಅರೆಕ್ಷಣ ನಿಂತು ಸುತ್ತಲೂ ನೋಡಿ ಒಮ್ಮೆಲೇ ಏನೋ ಹೊಳೆದಂತೆ ಬೆಟ್ಟದ ತುದಿಯ ಕಡೆಗೆ ಓಡಲಾರಂಭಿಸಿದ. ತುದಿ ತಲುಪಿದಾಗ ಉಸಿರು ಸಿಕ್ಕಿಹಾಕಿಕೊಂಡಂತಾಯಿತು. ಒಂದರೆಗಳಿಗೆ ಉಸಿರು ಹೊಯ್ದುಕೊಂಡು ಎದುರಿಗೆ ನೋಡಿದ. ಕೆಳಗೆ ಪ್ರಪಾತದಂಥ ಕಣಿವೆ. ಮೇಲೆ ಚಿನ್ನದ ಜರಿಯ ಮೋಡಗಳಿಂದ ಸುರಿಯುತ್ತಿದ್ದ ಬೆಳಕು ! ನೋಡ-ನೋಡುತ್ತಾ ಪುಟ್ಟ ಮಂತ್ರಮುಗ್ಧನಾದ. ನಡು ಮನೇಲಿ ಅಪ್ಪ ತೂಗುಹಾಕಿದ್ದ ಕ್ಯಾಲೆಂಡರಿನಲ್ಲಿ ವಿಷ್ಣು ಇಂಥದೇ ಬೆಳಕಿನಿಂದ ಎದ್ದು ಬಂದವನ ಹಾಗಿದ್ದ. ಆ ಬೆಳಕಿನ ಪ್ರಭೆಗೋ, ಜಾಗದ ಕೊರತೆಗೋ, ಅಂತೂ ಅಡಿಯಲ್ಲಿದ್ದ ಕ್ಯಾಲೆಂಡರ್ ಟೇಬಲಿನಲ್ಲಿ ದಿನ, ದಿನಾಂಕ, ಯಾವುದೂ, ಸುತಾರಂ ಕಾಣಿಸುತ್ತಿರಲಿಲ್ಲ. ಆದ್ರೆ ವಿಷ್ಣುವಿನ ಭವ್ಯ ಬೆಳಕನ್ನು ನೋಡಿದಾಗೆಲ್ಲಾ ಪುಟ್ಟನ ಕಣ್ಣುಗಳು ಅರಳುತ್ತಿದ್ದವು. ಅಂಥದೇ ಬೆಳಕು ಎದುರಿಗೆ ಈಗ ನಿಜವಾಗಿ ಚೆಲ್ಲಿ ಹರಿಯುತ್ತಿತ್ತು. ಇಷ್ಟಗಲ ಕಣ್ಣು ಬಿಟ್ಟುಕೊಂಡು ಸುತ್ತೆಲ್ಲ ದೃಷ್ಟಿ ಹಾಯಿಸಿದ. ಕೆಳಗೆ ಸ್ವಲ್ಪ ದೂರದಲ್ಲಿ ಜೊಂಡು ತುಂಬಿದ ಕೆರೆಯ ಬದುವಿನಲ್ಲಿ ಹಸುವೊಂದು ನಿಂತಿತ್ತು. ಕೈಯಲ್ಲಿದ್ದ ಕೋಲನ್ನು ಗಾಳಿಯಲ್ಲಾಡಿಸುತ್ತಾ ರೊಯ್ಯನೆ ಮಂಗಳಿ ಇದ್ದೆಡೆಗೆ ಓಡಲಾರಂಭಿಸಿದ. ಕಿವಿಯಲ್ಲಿ ಗಾಳಿ ಸುಯ್ಯೆನ್ನುತ್ತಿತ್ತು. ತುಂಬ ಖುಷಿಯೆನ್ನಿಸಿ 'ಹೋ... ಯ್...' ಎಂದು ಕೂಗು ಹಾಕಿದ. ಬೆಟ್ಟಗಳು ಅಷ್ಟೇ ಸುಮ್ಮಾನದಿಂದ ಮಾರ್ದನಿ ಕೊಟ್ಟವು.

'ಹೋ... ಯ್, ಹೋ... ಯ್, ಹೋ... ಯ್'

ಕೆರೆಯ ದಡದ ಮೇಲಿದ್ದ ಬೆಳ್ಳಕ್ಕಿ ಗುಂಪೊಂದು ನಿಧಾನವಾಗಿ ಎದ್ದು ರೆಕ್ಕೆ ಬಡಿಯುತ್ತಾ ಹಿಮದ ಚೂರುಗಳಂತೆ ಗಾಳಿಯಲ್ಲಿ ತೇಲಿ ಬೆಟ್ಟದ ಅಂಚಿನಲ್ಲಿ ಹಾರಿ ಹೋದವು.

ಪುಟ್ಟ, ಕೆರೆಯನ್ನೇ ನೋಡುತ್ತಾ ನಿಂತ. ಪಶ್ಚಿಮಕ್ಕೆ ಮುಖ ಮಾಡಿಕೊಂಡಿದ್ದ ಕೆರೆಗೆ ಅರ್ಧ ವೃತ್ತಾಕಾರದಲ್ಲಿ ಸುತ್ತುವರಿದಿದ್ದ ಬೆಟ್ಟಗಳಿಂದ ಸದ್ದಿಲ್ಲದೇ ಹರಿದು ಸೇರುತ್ತಿದ್ದ ತೊರೆಗಳಿದ್ದವು. ಕೆರೆಯ ಒಂದು ಭಾಗ ಸಮುದ್ರದ ಕಡೆಯಿಂದ ಬೀಸುತ್ತಿದ್ದ ಗಾಳಿಗೆ ತೆರೆದುಕೊಂಡು ನಿಂತಿತ್ತು.

ಸಣ್ಣ ಪುಟ್ಟ ಕಲ್ಲುಗಳನ್ನಾಯ್ದು ಕೆರೆಗೆ ಎಸೆಯಲಾರಂಭಿಸಿದ ಪುಟ್ಟ. ಝಿಲ್ಲನೆ ನೀರೊಳಗೆ ಬಿದ್ದ ಕಲ್ಲುಗಳು ಒಂದರ ಹಿಂದೊಂದು ಬಲೆಯನ್ನು ನೇಯ್ದವು. ತೆಳುಪಾದ ಕಲ್ಲುಗಳನ್ನಾಯ್ದು, ಡೊಂಕಾಗಿ ನಿಂತುಕೊಂಡು ನೀರಿನ ಮೇಲೆಸೆದು ಚಿಮ್ಮಿಸಲು ಪ್ರಯತ್ನಿಸಿದ. ನೀರನ್ನೇ ತಾಕದೆ ಕೆಲವು ಆ ಕಡೆಯ ದಡಕ್ಕೆ ಬಿದ್ದವು. ಕಣ್ಮುಚ್ಚಿ ಒಮ್ಮೆ ಗಿರಿಗಿಟ್ಲೆ ತಿರುಗಿ ಮತ್ತೊಂದು ಕೂಗು ಹಾಕಿದ... ಮನಸ್ಸಿಗೆ ತುಂಬಾ ಸುಖವೆನ್ನಿಸಿತು. ಸ್ವಲ್ಪ ದೂರದಲ್ಲಿ ಮಂಗಳಿ ಇದ್ಯಾವುದರ ಪರಿವೆಯೇ ಇಲ್ಲದೇ ಏನನ್ನೋ ಮೇಯುತ್ತಿದ್ದಳು. ತಕ್ಷಣ ತಾನು ಬಂದ ಕೆಲಸದ ನೆನಪಾಗಿ, ಗಾಳಿಯಲ್ಲಿ ತೇಲುತ್ತಿರುವವನಂತೆ ಅವಳೆಡೆಗೆ ಹಾರಿದ. ಹಿಂದೆಯಿಂದ ನಿಧಾನವಾಗಿ ಬಾಲ ಜಗ್ಗಿದರ ಅರ್ಥವಾಗಿ ಮಂಗಳಿ ಕೊಸರಿಕೊಂಡೇ ಊರ ಕಡೆಗೆ ಹೊರಳಿದಳು. ಅವಳ ಹಿಂದೆ ಕುಣಿಯುತ್ತಾ ಹೊರಟ ಪುಟ್ಟ ನೆನಪಾದವನಂತೆ ಹಿಂದೆ ತಿರುಗಿ ಮತ್ತೊಂದು ಕಲ್ಲನ್ನೆತ್ತಿಕೊಂಡ. ಇನ್ನೇನು ಗುರಿಯಿಟ್ಟು ಚಿಮ್ಮಬೇಕೆನ್ನುವಷ್ಟರಲ್ಲಿ ತಲೆಯ ಹತ್ತಿರವೇ ಏನೋ ರಿವ್ವನೆ ಹಾರಿದಂತೆನ್ನಿಸಿತು. ಥಟ್ಟನೆ ಕತ್ತೆತ್ತಿ ನೋಡಿದ. ಯಾವುದೋ ಹಕ್ಕಿ ಚಿಮ್ಮಿದ ಬಾಣದಂತೆ ಹಾರುತ್ತಿತ್ತು. ಅದರ ಕುತ್ತಿಗೆಯ ಬಿಗಿತ, ಕಿತ್ತಳೆ ಬಣ್ಣದ ಕಾಲುಗಳು, ಸಂಜೆಯ ಮೆದು ಬೆಳಕಿನಲ್ಲಿ ಸ್ಪಷ್ಟವಾಗಿ ಕಂಡವು. ಭಳುಕು ಹೊಡೆದವನಂತೆ ಪುಟ್ಟ ನಿಟ್ಟಿಸಿದ.... ಕಾಡ್ಬಾತು !! ಕೆರೆಯ ಮೇಲೆ ಎರಡು ಮೂರು ಸುತ್ತು ಗಿರಕಿ ಹೊಡೆದು, ಮೆಲ್ಲಗೆ ಕೆಳಗಿಳಿಯುತ್ತಾ ರೆಕ್ಕೆಯನ್ನು ಪಟಪಟ ಬಡಿದು ನೀರಿನ ಮೇಲ್ಮೈಯನ್ನು ಚಿಮ್ಮಿತು. ಚಿಮ್ಮಿದ ತಕ್ಷಣವೇ ಕಾಲನ್ನು ನೀರೊಳಗೆ ಊರಿ ಬೆಳ್ಳಿಯ ತರಂಗಗಳನ್ನೆಬ್ಬಿಸಿ ನಿಧಾನವಾಗಿ ರೆಕ್ಕೆ ಮಡಿಚಿ ನಿರಾಸಕ್ತಿಯಿಂದ ನೀರನ್ನು ಕುಟುಕಲಾರಂಭಿಸಿತು.

ಬಿಟ್ಟ ಕಣ್ಣು ಬಿಟ್ಟಂತೆಯೇ ನೋಡಿದ ಪುಟ್ಟ ಕಾಡ್ಬಾತು ತೇಲುತ್ತಾ ದೂರ ಹೋಗಲಾರಂಭಿಸಿತು. ಆನೆಜೊಂಡಿನ ನಡುವೆ ಅಡ್ಡಾಡುತ್ತಾ ಹೋದ ಕಾಡ್ಬಾತಿನ ಮೈ ಮಾಸಲು ಬಣ್ಣದ ನೀರಿನಲ್ಲಿ ಕಪ್ಪಾಗಿ ಕಲ್ಲಿನಷ್ಟು ಕಟುವಾಗಿ ಕಂಡಿತು. ಎವೆ ಪಿಳುಕಿಸದೆ ನೋಡುತ್ತಲೇ ಇದ್ದ. ಅರೆ ! ಇದ್ದಕ್ಕಿದ್ದಂತೆ ಮುಳುಗಿತೇನೋ ಎಂಬಂತೆ ಕಾಡ್ಬಾತು ಮಾಯವಾಯ್ತು. ಕಳ್ಳತನದಿಂದ ಹೆಜ್ಜೆಯಿಡುತ್ತಾ ಬೇರೆಲ್ಲೋ ನೋಡುತ್ತಿರುವವನಂತೆ ನಟಿಸುತ್ತಾ ಪುಟ್ಟ ದಡಗುಂಟ ಹೋದ. ಕೊನೆಯ ಸಲ ಕಾಡ್ಬಾತನ್ನು ನೋಡಿದ ಜಾಗದಲ್ಲಿ ನಿಂತು ಇಣಕಿದ. ಸುಯ್ಯೆಂದು ನಿಟ್ಟುಸಿರು ಬಿಡುತ್ತಿದ್ದ ಜೊಂಡು ಕಪ್ಪು ನೆರಳುಗಳ ಬಲೆಯನ್ನು ನೀರಿನ ಮೇಲೆ ಹೆಣೆದಿತ್ತು. ಅವನೆದುರಿಗೆ ಒಂದು ಪುಟ್ಟ ಹುಲ್ಲಿನ ದ್ವೀಪ !! ಕೆರೆಯ ದಡದಿಂದ ಒಂದು ಸಣ್ಣ ನಾಲೆಯಷ್ಟು ದೂರದಲ್ಲಿ, ತನ್ನ ಸುತ್ತ ಭರ್ಜಿಯಷ್ಟು ಚೂಪಾದ ಹುಲ್ಲನ್ನೆಬ್ಬಿಸಿಕೊಂಡು ತಾನೇ ತಾನಾಗಿ ನಿಂತಿದ್ದ ಹುಲ್ಲು ನೆಲ ! ಅಷ್ಟೇನೂ ಆಳವಿಲ್ಲದ ನಾಲೆಯಲ್ಲಿ, ನಿಕ್ಕರನ್ನು ಮಡಿಚಿಕೊಂಡು, ಕೈಗಳಿಂದ ನೀರನ್ನು ಹಿಂದೆ ತಳ್ಳುತ್ತಾ ಎಚ್ಚರದಿಂದ ಮುಂದುವರಿದ ಪುಟ್ಟ. ನೀರೊಳಗೆ ಕಾಲುಗಳು ಕರ್‍ರಗೆ ಮೊಟಕಾಗಿ ಕಂಡವು.

ಹುಲ್ಲು ದಿಬ್ಬಕ್ಕೆ ಹತ್ತಿರವಾದಂತೆಲ್ಲಾ ಪಾದಗಳು ತಣ್ಣಗಿನ



ಮಣ್ಣಿನಲ್ಲಿ ಕುಸಿಯಲಾರಂಭಿಸಿದವು. ಕಾಲಿಟ್ಟ ಕಡೆಯಲ್ಲಿ ಮಣ್ಣಿನ ಗುಳ್ಳೆಗಳು ಒಡೆದು ಅಣಕಿಸುತ್ತಿವೆಯೇನೋ ಅಂತನ್ನಿಸಿತು ಪುಟ್ಟನಿಗೆ. ಇನ್ನೂ ಎಚ್ಚರದಿಂದ ನಡೆಯಲು ಪ್ರಯತ್ನಿಸಿದ. ನಿಕ್ಕರಿನ ಜಾರಿದ ಒಂದು ಮಡಿಕೆಯನ್ನು ಮೇಲೆತ್ತಲು ಹೋಗಿ ಆಯತಪ್ಪಿ ರಪ್ಪನೆ ನೀರಿನಲ್ಲಿ ಬಿದ್ದ! ಬಿದ್ದದ್ದೇ ತಡ... ! ಕಾಡ್ಬಾತು ರೊಯ್ಯನೆ ಮೇಲೆದ್ದು ಕಿರ್ರನೆ ಕಿರುಚುತ್ತಾ ಬೆಟ್ಟಗಳಾಚೆ ಹಾರಿಯೋಯಿತು. ಪುಟ್ಟ ದಿಕ್ಕೆಟ್ಟವನಂತೆ ನಿಂತುಬಿಟ್ಟ. ಒಂದೇ ಕ್ಷಣ... ಮೆಲ್ಲಗೆ ಸುಧಾರಿಸಿಕೊಂಡು ಕಚಪಚಗುಡುತ್ತಿದ್ದ ಹುಲ್ಲು ದಿಬ್ಬವನ್ನು ದೇಕುತ್ತಲೇ ಹತ್ತಿದ. ಸುತ್ತಲೂ ಕಡಲಕ್ಕಿಗಳ ಗರಿಗಳು, ಗಾಳಿಗೆಸೆಯಲ್ಪಟ್ಟ ಜೊಂಡು ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದವು.

ಒಂದೊಂದೂ ಕೆಸರಿನ ದಿಣ್ಣೆಯನ್ನು ಕೆದಕುತ್ತಾ ಹೋದ. ಉದ್ದದ ಜೊಂಡಿನ ಕತ್ತನ್ನು ಹಿಡಿದೆಳೆದು ಬಗ್ಗಿಸಿ ಒಳಗೆ ಇಣುಕಿದ. ಅವನಂದುಕೊಂಡಿದ್ದು ಕೊನೆಗೂ ನಿಜವಾಯಿತು ! ಕಡಲ ಕಡೆಗೆ ಮುಖ ಮಾಡಿಕೊಂಡಿದ್ದ ಗೂಡೊಂದು ಕೈಗೆ ಸಿಕ್ಕಿತು ! ಎರಡು ಚಪ್ಪಟೆ ಬಂಡೆಗಳನ್ನು ಕೊರೆದು ಮುಂದೆ ಹೋಗಿದ್ದ ನೀರಿನಗುಂಟ ಹೋದರೆ ಕತ್ತಿನಷ್ಟಗಲದ ಭೂಮಿಯಲ್ಲಿ ಒಂದು ಗೂಡಿತ್ತು. ಜೊಂಡು, ಒಣಹುಲ್ಲು, ಹಕ್ಕಿಗರಿಯನ್ನು ಸೇರಿಸಿ ಕಟ್ಟಿದ ಒಂದು ಗಜಿಬಿಜಿ ಗೂಡು ! ಅದರೊಳಗೆ ಒಂದೇ ಒಂದು ಮೊಟ್ಟೆ! ಪುಟ್ಟನಿಗೆ ಹಿಗ್ಗೋ ಹಿಗ್ಗು ! ಸುತ್ತ ಮುತ್ತ ನೋಡಿದ. ಯಾರೂ ಕಾಣಿಸಲಿಲ್ಲ, ಧೈರ್ಯವೆನ್ನಿಸಿತು. ಆ ಗೂಡಿನ ಹಕ್ಕು ತನ್ನದೆನಿಸಿ ನಿಧಾನವಾಗಿ ಒಳಗೆ ಕೈ ಹಾಕಿ ಮೊಟ್ಟೆಯನ್ನು ಹಿಡಿದು ಕೈಯಲ್ಲಿಟ್ಟುಕೊಂಡ. ರೇಶಿಮೆಯಷ್ಟು ನುಣುಪಾಗಿದೆಯೆನ್ನಿಸಿತು. ತಿಳಿ ಹಸಿರು.. ತಿಳಿ ಹಳದಿ... ಏನೇನೋ ಬಣ್ಣವಿತ್ತದರಲ್ಲಿ!! ಒಂದೇ ಕ್ಷಣ... ತಾನೇನೋ ತಪ್ಪು ಮಾಡಿದಂತೆನ್ನಿಸಿ ಅಳುಕಿದ. ತಾನದನ್ನು ಮುಟ್ಟಬಾರದಾಗಿತ್ತು ಎನ್ನಿಸಿತು. ಉಗುಳು ನುಂಗಿ ಮೊಟ್ಟೆಯನ್ನು ವಾಪಾಸಿಟ್ಟ. ಏನಾಗಬಹುದೀಗ ? ಬಾತು ಗೂಡನ್ನೇ ತೊರೆಯಬಹುದೆ? ತಡೆಯಲಾರದಷ್ಟು ದುಃಖ ಉಕ್ಕಿ ಬಂತು. ಛೆ ! ತಾನು ಮಾಡಿದ್ದು ಕ್ಷಮಿಸಲಾಗದ ಪಾಪ ಅಂತನ್ನಿಸಿ ಅಳಬೇಕೆನ್ನಿಸಿತು. ತನ್ನ ಹೆಜ್ಜೆ ಗುರುತುಗಳನ್ನು ಒರೆಸುತ್ತಾ ಅವಸರವಸರವಾಗಿ ಮಂಗಳಿಯ ಕಡೆಗೆ ಓಡಿದ. ಸೂರ್ಯ ಮುಳುಗಿಯಾಗಿತ್ತು. ರಾತ್ರಿಯ ಗಾಳಿ ಆಗಲೇ ಝಿಲ್ಲನೆ ಆವರಿಸಿಕೊಳ್ಳುತ್ತಿತ್ತು. ಮೈಮನಸ್ಸು ಹರ್ಷವನ್ನು ಕಳೆದುಕೊಂಡು ತಣ್ಣಗಾಗುತ್ತಿದ್ದವು.

ರಾತ್ರಿ ಏನೇನೋ ಕೆಟ್ಟ ಕನಸು, ಕನವರಿಕೆ. ಬೆಳಗಾದದ್ದೇ ಬ್ಯಾಗನ್ನು ಹೆಗಲಿಗೇರಿಸಿ ಸ್ಕೂಲಿನ ಕಡೆಗೆ ಓಡಿದ. ರೋಡಿನ ಬದಿಯಲ್ಲಿದ್ದ ಮೆದು ಹುಲ್ಲಿನ ಮೇಲೆ ನಡೆಯುತ್ತಾ ಹೋದಂತೆ ಸುಮಾರು ಒಂದು ಮೈಲಿ ದೂರದಲ್ಲಿ ಅವನ ಕ್ಲಾಸಿನಲ್ಲೇ ಓದುತ್ತಿದ್ದ ನಾಗ್ರಾಜ ಸಿಕ್ಕಿದ. ಬಿಳಿ ಶರಟು, ಖಾಕಿ ಚಡ್ಡಿ ಯೂನಿಫಾರಮ್ಮು. ಇಬ್ಬರ ಕೈಲೂ ಒರಟಾದ ಸೆಣಬಿನ ಬ್ಯಾಗು. ಪುಟ್ಟನ ತಲೆಯ ತುಂಬ ಕಾಡ್ಬಾತಿನ ಗೂಡು, ಮೊಟ್ಟೆಯೇ ತುಂಬಿತ್ತು. ನಾಗ್ರಾಜ ಎದುರಿಗೆ ಸಿಕ್ಕಿದ ತಕ್ಷಣ ಪುಟ್ಟ ಬಡಬಡಿಸಿದ.

'ನಿಂಗೊತ್ತೇನೋ... ನನ್ಹತ್ರ ಕಾಡ್ಬಾತಿನ ಗೂಡು, ಮೊಟ್ಟೆ ಇದೆ ?' ನಾಗ್ರಾಜನಿಗೆ ಒಂದು ಕ್ಷಣ ಅಸೂಯೆಯಾಯಿತು.

'ಕಾಡ್ಬಾತಿಂದೇ ಅಂತ ನಿಂಗ್ಹೇಗೋ ಗೊತ್ತು ?'

'ನಾನೇ ಕಣ್ಣಾರೆ ನೋಡ್ದೆ ಕಣೋ... ಅದರ ಬೆನ್ನಲ್ಲಿ ಕಂದು ಬಣ್ಣದ ಕಲೆ, ಕಾಗೆಗಿರೋ ಹಾಗೆ ಪಟ್ಟೆ ಹಳದಿ ಕಾಲು.....

'ಎಲ್ಲಿದೆ ನೋಡೋಣ ಹೇಳು ಹಾಗಾದ್ರೆ' ಸವಾಲೆಸೆಯುವವನಂತೆ ಕೇಳಿದ ನಾಗ್ರಾಜ.

'ಊಹುಂ... ನಾನು ಹೇಳೋಲ್ಲಪ್ಪ... ನಂಗೊತ್ತು ನೀನು ಕದ್ಬಿಡ್ತೀಯಾ,...

'ಹೋಗೋಲೋ... ಯಾವ್ದೋ ನಾಡ್ಬಾತಿಂದೋ ಅಥ್ವಾ ಯಾವ್ದೋ ಮುದಿ ಹಕ್ಕಿ ಗೂಡಿರಬೇಕು. ಕಾಡ್ಬಾತಂತೆ ! ನಿನ್ನ ತಲೆ !'

ಪುಟ್ಟ ನಾಲಗೆ ತೋರಿಸುತ್ತಾ ನಾಗ್ರಾಜನನ್ನು ಅಣಕಿಸಿದ. 'ಹೋಗೋಲೋ... ಹೋಗೋ ಹೋಗೋ... ಮಹಾ ಗೊತ್ತಿರೋದು ನಿನ್ಗೆ. ಕಾಡ್ಬಾತಿನ ಮೊಟ್ಟೆಯ ಮೇಲೆ ಕಲೆಗಳಿರ್ತಾವೆ... ಅದೊಂಥರಾ ಹಸಿರು ಬಣ್ಣದ್ದು. ನಾನೇ ಅದನ್ನು ಮುಟ್ಟಿ ನೋಡಿದೀನಿ ಗೊತ್ತಾ...?'

ಥಟ್ಟನೆ ಪುಟ್ಟ ಹಲ್ಲು ಕಚ್ಚಿಕೊಂಡ. ಯಾವುದರ ಹೆದರಿಕೆಯಿತ್ತೋ ಯಾವುದು ನಿಜವಾಗದಿರಲಿ ಅಂತ ಅಂದ್ಕೊತಾ ಇದ್ದನೋ, ಅದೇ ಬಂತು ಆತನ ಬಾಯಿಂದ.

'ಕೈಯಲ್ಲಿ ಮುಟ್ಟಿದ್ಯೇನೋ...' ಬಾತು ಗೂಡು ಬಿಡುತ್ತೆ ಹಾಗಾದ್ರೆ, ನೋಡ್ತಾ ಇರು... ಇಷ್ಟಗಲ ಕಣ್ಣುಬಿಟ್ಟು ಹೆದರಿಸಿದ ನಾಗ್ರಾಜ.

ಪುಟ್ಟ ಉಗುಳು ನುಂಗಿದ.




'ಅಲ್ಲಾ ಕಣೋ... ಅದೂ...'

'ಏನ್ ಅಲ್ಲಾ ಕಣೋ ಬೆಲ್ಲಾ ಕಣೋ... ಹೋಗ್ ನೋಡು... ಕಾಡ್ಬಾತು ಇಷ್ಟೊತ್ತಿಗೆ ಗೂಡು ಬಿಟ್ಟಿರುತ್ತೆ,....

ಪುಟ್ಟ ಮೊಟ್ಟೆ ಮುಟ್ಟಿದ್ನೋ
ಕಾಡ್ಬಾತು ಗೂಡು ಬಿಟ್ಟಿತೋ
ಪುಟ್ಟ ಮೊಟ್ಟೆ ಮುಟ್ಟಿದ್ನೋ
ಕಾಡ್ಬಾತು ಗೂಡು ಬಿಟ್ಟಿತೋ

ರಸ್ತೆಯ ಮೇಲೆ ಕೆನೆಯುತ್ತಾ ಅಣಕಿಸುತ್ತಾ ನಾಗ್ರಾಜ ಓಡಿದ. ಪುಟ್ಟನಿಗೆ ಗಂಟಲು ಕಟ್ಟಿ, ಭೋರಾಡಿ ಅಳಬೇಕೆನ್ನಿಸಿತು. ಅವನ ಮನಸ್ಸಿಗೇ ಗೊತ್ತಿದ್ದನ್ನು ಒಪ್ಪಿಕೊಳ್ಳಬೇಕೆನಿಸಲಿಲ್ಲ. 'ಬಾತು ಗೂಡು ಬಿಡಲ್ಲ... ಬಿಡಲ್ಲ...' ನಂಬಿಸಿಕೊಳ್ಳಲು ಮತ್ತೆ ಮತ್ತೆ ಹೇಳಿಕೊಂಡ.

ಸ್ಕೂಲಿನಲ್ಲಿ ಕೂತಿದ್ದರೂ ಮನಸ್ಸೆಲ್ಲಾ ಎಲ್ಲೋ ಇತ್ತು. ಭೋರೆಂದು ಸುರಿಯುತ್ತಿದ್ದ ಮಳೆಯನ್ನು ಕಿಟಕಿಯಿಂದ ನೋಡುತ್ತಾ ನೋಡುತ್ತಾ ಪುಟ್ಟನಿಗೆ ಕೆರೆಯ ನೆನಪಾಯಿತು. ಸುರಿಯುತ್ತಿರುವ ಮಳೆಯಲ್ಲಿ ಥಂಡಿ ಗಾಳಿಯಲ್ಲಿ ಸುಕ್ಕುಗಟ್ಟಿರಬಹುದಾದ ಕೆರೆನೀರು, ಒದ್ದೆ ಮುದ್ದೆಯಾದ ಕಂದಿದ ಗೂಡು, ಗುಹೆಯೊಳಗಿನ ಕಲ್ಲಂತೆ ಕೊರೆಯುತ್ತಿರುವ ಮೊಟ್ಟೆ... ಪುಟ್ಟ ನಡುಗಿಹೋದ. ಶಾಯಿ ಕುಡಿಕೆಯನ್ನು ಡೆಸ್ಕಿನ ಮೇಲೆ ಆಚೀಚೆ ಅನ್ಯಮನಸ್ಕನಾಗಿ ಜರುಗಿಸುತ್ತಾ, ತುಳುಕುತ್ತಿದ್ದ ಕಣ್ಣೀರನ್ನು ಒರೆಸಿಕೊಳ್ಳಲು ಪ್ರಯತ್ನಿಸಿದ. ಪುಟ್ಟನ ತುಂಟತನ ಎಲ್ಲೋ ಮಾಯವಾಗಿತ್ತು. ಥೂ ದರಿದ್ರ ಈ ಸ್ಕೂಲು ಮುಗಿಯೋದೇ ಇಲ್ವೇನೋ ಅಂತನ್ನಿಸಿತು. ಗಂಟೆ ಹೊಡೆದದ್ದೇ ತಡ, ಸುರಿಯುತ್ತಿದ್ದ ಮಳೆಯನ್ನೂ ಲೆಕ್ಕಿಸದೇ ಮನೆಯ ಕಡೆ ಓಟ ಹೊಡೆದ.

ಅವ್ವ ಕೊಡ್ತೀನಿ ಅಂದ ಚೆಗಳಿ ಉಂಡೆಯೂ ಬೇಕೆನ್ನಿಸಲಿಲ್ಲ. ಸ್ಕೂಲ್ ಬ್ಯಾಗನ್ನೆಸೆದವನೇ ಸೀದಾ ಕಣಿವೆಯ ಕಡೆಗೆ ಓಡಿದ. ಡೊಂಕಾಗಿ ಬೀಳುತ್ತಿದ್ದ ಮಳೆಯಲ್ಲಿ ಕಣಿವೆ ಒಂದು ತರದ ಹೊಗೆಯನ್ನು ತುಂಬಿಕೊಂಡು ನಿಂತಿತ್ತು. ಹುಲ್ಲುದ್ವೀಪಕ್ಕೆದುರಾಗಿ ಪುಟ್ಟ ನೀರಿಗಿಳಿದ. ಗಾಳಿ ರಪ್ಪನೆ ಮುಖಕ್ಕೆ ಬಾರಿಸುತ್ತಿತ್ತು. ಮಳೆಯಲ್ಲಿ ತೊಯ್ದು ಜೊಂಡು ಭಾರವಾಗಿ ನಿಂತಿತ್ತು. ದಂಟುಗಳ ಮೇಲೆ ಸುಂಡಿಲಿಯಂತೆ ಸರಬರ ಓಡಾಡುತ್ತಿದ್ದ ಪುಟ್ಟ ಹಕ್ಕಿಯೊಂದು ಒಂಟಿತನದ ಆಲಾಪ ಹಾಡುತ್ತಿತ್ತು.

ಪುಟ್ಟ ದ್ವೀಪದ ಕಡೆ ನಡೆದ. ಭಯದಿಂದ ಎದೆ ಹೊಡೆದುಕೊಳ್ಳುತ್ತಿತ್ತು. ಬಾತು ಗೂಡು ಬಿಟ್ಟಿರಬಹುದೆನ್ನಿಸಿ ಕಳವಳಗೊಂಡು ಮೆಲ್ಲಗೆ ಗೂಡಿನತ್ತ ನಡೆದ. ಕಾಲ್ಬೆರಳುಗಳ ಮೇಲೆ ನಿಂತು ಗೂಡೊಳಗೆ ಇಣಕಿದ. ಕಾಡ್ಬಾತು ಕಾಣಿಸಬಹುದೆ ? ಒಮ್ಮೆಲೇ ನರಗಳೆಲ್ಲಾ ಸೆಟೆದಂತಾಯಿತು. ಬಾತು ಅಲ್ಲೇ ಇತ್ತು. ಭುಜವನ್ನು ಕವಿಚಿಕೊಂಡು, ಕೊಕ್ಕನ್ನು ಎದೆ ಮೇಲಿರಿಸಿಕೊಂಡು ನಿದ್ದೆಯಲ್ಲಿದ್ದಂತೆ ಕಂಡುಬಂತು. ಪುಟ್ಟನ ಗುಂಡಿಗೆ ಕೇಳಿಸುವಷ್ಟು ಜೋರಾಗಿ ಹೊಡೆದುಕೊಳ್ಳಲಾರಂಭಿಸಿತು. 'ಅಬ್ಬಾ... ಸದ್ಯ' ಅಂತಂದುಕೊಳ್ಳುತ್ತಾ ಕಳ್ಳನಂತೆ ಮೆಲ್ಲಗೆ ಹಿಂದೆ ತಿರುಗಿದ. ಅಷ್ಟೊತ್ತಿಗೆ ಏನೋ ಆಗೇಬಿಟ್ಟಿತು. ಕಾಡ್ಬಾತು ಥಟ್ಟನೆ ಹೊರಳಿತು. ಆಚಿಂದೀಚೆಗೆ ಕತ್ತು ತಿರುಗಿಸುತ್ತಾ ದಿಗಿಲಿನಿಂದ ಸುತ್ತಲೂ ನೋಡಿತು. ಕಾಲು ಕೀಲಿಸಿದಂತೆ ನಿಂತು ನೋಡಿದ ಪುಟ್ಟ. ಕಾಡ್ಬಾತು ಭಾರವಾಗಿ ಎದ್ದು ರೆಕ್ಕೆಗಳನ್ನು ಪಟಪಟನೆ ಬಡಿಯುತ್ತಾ ಸಮುದ್ರದ ಕಡೆಗೆ ರಿವ್ವನೆ ಹಾರಿತು. ಅದು ಹಾರಿದ ಹಾದಿಯನ್ನೇ ನೋಡುತ್ತಾ ಮತ್ತೊಮ್ಮೆ ತಪ್ಪಿತಸ್ಥನಂತೆ ಮೌನವಾಗಿ ನಿಂತ ಹುಡುಗ. ಕಾಡ್ಬಾತು ಕಾಣದಾದಂತಾದಾಗ ನಿಟ್ಟುಸಿರುಬಿಟ್ಟು ಮನೆ ಕಡೆಗೆ ಹೋಗಲು ತಿರುಗಿದ. ಹೋಗೋಕೆ ಮೊದಲು ಗೂಡೊಳಗೆ ಇಣುಕಬೇಕೆನ್ನಿಸಿತು. ಹೇಗೂ ಖಾಲಿ ಗೂಡು... ನೋಡಿದರೆ ಏನು ತಪ್ಪು ಅಂತನ್ನಿಸಿ ಹೆದರುತ್ತಲೇ ಇಣಕಿದ. ಕಣ್ಣುಜ್ಜಿಕೊಂಡು ಮತ್ತೆ ಮತ್ತೆ ನೋಡಿದ... ಸಂತೋಷದಿಂದ ಕಿರುಚಿಕೊಳ್ಳಬೇಕೆನ್ನಿಸಿತು... ಗೂಡೊಳಗೆ ಒಂದಲ್ಲ, ಎರಡು ಮೊಟ್ಟೆಗಳಿದ್ದವು. ಉಕ್ಕಿ ಬಂದ ಸಮಾಧಾನದಲ್ಲಿ ಕಣ್ಣೊರೆಸಿಕೊಂಡ. ತಕ್ಷಣವೇ ತಿರುಗಿ, ಮೈ ಮರೆಸುವ ಖುಷಿಯಲ್ಲಿ ಜೋರಾಗಿ ಶೀಟಿ ಹೊಡೆದುಕೊಂಡು ಮಳೆಯಲ್ಲಿ ನಲಿಯುತ್ತಾ ಮನೆಯ ಕಡೆಗೆ ಓಡಿದ ಪುಟ್ಟ ಹುಡುಗ.

---

ಮೂಲ : ಮೈಕೆಲ್ ಮೆಕ್‌ಲಿವರ್ಟಿಯ
ಕನ್ನಡಕ್ಕೆ : ಕೆ. ಪಿ. ಸುಕನ್ಯಾ

೫೪, ೬ನೇ ಮೆಯಿನ್, ೫ನೇ ಬ್ಲಾಕ್, ಜಯನಗರ
ಬೆಂಗಳೂರು - ೫೬೦ ೦೪೧

# ಆಫ್ರಿಕಾದ ಸುಡಾನ್: ಆತಂಕಕಾರಿ ಪರಿಸ್ಥಿತಿ




ವಸಾಹತುಶಾಹಿ ಆಳ್ವಿಕೆಯಲ್ಲಿದ್ದ ದೇಶಗಳ ಪೈಕಿ ಅತ್ಯಂತ ಕ್ರೂರವಾದ ದಬ್ಬಾಳಿಕೆ ಮತ್ತು ತೀವ್ರವಾದ ಶೋಷಣೆಗೆ ಗುರಿಯಾದ ದೇಶಗಳೆಂದರೆ ಆಫ್ರಿಕಾ ಖಂಡದ ದೇಶಗಳು. ಅದರಲ್ಲೂ ಈಶಾನ್ಯ ಹಾಗೂ ಮಧ್ಯ ಆಫ್ರಿಕಾದ ದೇಶಗಳು ಅಗ್ರಪಂಕ್ತಿಯಲ್ಲಿ ನಿಲ್ಲುತ್ತವೆ. ಸಾಮ್ರಾಜ್ಯಶಾಹಿಗಳು ಈ ದೇಶಗಳ ನೈಸರ್ಗಿಕ ಸಂಪತ್ತನ್ನು, ಮುಖ್ಯವಾಗಿ ಹೇರಳವಾಗಿ ಲಭ್ಯವಿದ್ದ ಬಂಗಾರ, ತಾಮ್ರ, ಕಬ್ಬಿಣದ ಅದಿರು, ಕ್ರೋಮಿಯಮ್, ವಜ್ರ ಮೊದಲಾದುವನ್ನು ದೋಚಿಕೊಂಡು ಜನತೆಯನ್ನು ನಿರ್ದಯವಾಗಿ ಶೋಷಣೆ ಮಾಡಿದರಲ್ಲದೆ, ಅಲ್ಲಿನ ವಿವಿಧ ಬುಡಕಟ್ಟುಗಳ ನಡುವೆ ವೈಷಮ್ಯದ ಬೀಜವನ್ನು ಬಿತ್ತಿದರು, ಪರಸ್ಪರರನ್ನು ಎದುರಾಗಿ ಎತ್ತಿಕಟ್ಟಿದರು. ತಮ್ಮ ಆಡಳಿತ ನಿರ್ವಹಣೆಗೆ ಎಷ್ಟು ಬೇಕೋ ಅಷ್ಟು ಮಾತ್ರ ಬಿಟ್ಟು ಉಳಿದಂತೆ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳಲಿಲ್ಲ. ಕಳೆದ ಶತಮಾನದ ಉತ್ತರಾರ್ಧ ಕಾಲದಲ್ಲಿ ವಸಾಹತುಶಾಹಿ ಅಂತ್ಯಗೊಳ್ಳುತ್ತಿದ್ದಂತೆ, ಆಡಳಿತ ವಂಚಿತರಾದರೂ ಆರ್ಥಿಕವಾಗಿ ತಮ್ಮ ಹತೋಟಿ ಮುಂದುವರಿಸಿದರು. ಬಹುಪಾಲು ಫಲವತ್ತಾದ ಜಮೀನುಗಳು, ಗಣಿಗಳು, ಉದ್ಯಮಗಳು ಅವರ ಕೈಯಲ್ಲೇ ಉಳಿಯಿತು. ಹೊಸದಾಗಿ ಸ್ವತಂತ್ರಗೊಂಡ ಈ ದೇಶಗಳು ವಸಾಹತುಶಾಹಿಗಳು ಬಿಟ್ಟುಹೋಗಿದ್ದ ನಾನಾ ಬಗೆಯ ಸಮಸ್ಯೆಗಳನ್ನು ಎದುರಿಸಬೇಕಾಗಿ ಬಂದಿತು. ಅವು ಇಂದು ಕೂಡ ಆ ದೇಶಗಳನ್ನು ಕಾಡುತ್ತಿವೆ. ಆಂತರಿಕ ಅಭದ್ರತೆ, ವಿವಿಧ ಬುಡಕಟ್ಟುಗಳು ಮತ್ತು ಗುಂಪುಗಳ ಮಧ್ಯೆ ಘರ್ಷಣೆಗಳು, ಮಿಲಿಟರಿ ಸರ್ವಾಧಿಕಾರಿ ಆಡಳಿತಗಳು, ಪ್ರಕೃತಿ ವಿಕೋಪಗಳು ಕಳೆದ ಐದು ದಶಕಗಳಲ್ಲಿ ಇಲ್ಲಿ ಸರ್ವೇಸಾಧಾರಣವಾಗಿವೆ. ಈ ಭೂಭಾಗದ ಒಂದಲ್ಲ ಒಂದು ಕಡೆ ಅಂತರ್ಯುದ್ಧದ ಪರಿಸ್ಥಿತಿ ಇದ್ದೇ ಇದೆ. ಇಂಥ ಸಂಭವಗಳಲ್ಲಿ ಸಾಮ್ರಾಜ್ಯಶಾಹಿಗಳ, ಅದರಲ್ಲೂ ಅಮೆರಿಕದ ಪ್ರತ್ಯಕ್ಷ ಹಾಗೂ ಪರೋಕ್ಷ ಕೈವಾಡ ಕೆದಕಿ ನೋಡಿದರೆ ಸ್ಪಷ್ಟವಾಗಿ ಕಾಣಬರುತ್ತದೆ.

ಕಾಂಗೋ, ಉಗಾಂಡಾ, ಈಕ್ವೆಡೋರ್, ಚಾಡ್ ಮೊದಲಾದ ದೇಶಗಳಿಂದ ಪ್ರಾರಂಭವಾಗಿ ಸೋಮಾಲಿಯ, ಇಥಿಯೋಪಿಯ, ಸುಡಾನ್‌ವರೆಗೆ ಒಂದಲ್ಲ ಒಂದು ರೀತಿಯ ಸಶಸ್ತ್ರ ಘರ್ಷಣೆಗಳು ಸಂಭವಿಸಿವೆಯಲ್ಲದೆ, ಪ್ರಕೃತಿ ವಿಕೋಪದಿಂದ ಕ್ಷಾಮ ಡಾಮರಗಳು ಉಂಟಾಗಿ ಲಕ್ಷಾಂತರ ಮಂದಿ ಸಾವಿಗೀಡಾಗಿದ್ದಾರೆ. ಜನಜೀವನ ದುಸ್ತರವಾಗಿದೆ. ಈ ದೇಶಗಳು ಇನ್ನೂ ಕೂಡ ಈ ಅನಾಹುತಗಳಿಂದ ಚೇತರಿಸಿಕೊಂಡಿಲ್ಲ. ಒಂದು ಕಾಲದಲ್ಲಿ ಸುಭಿಕ್ಷವಾಗಿದ್ದ ಇಥಿಯೋಪಿಯ ಇಂದು ಕಡುಬಡತನ ಮತ್ತು ಅಸ್ಥಿರತೆಯಿಂದ ಕೂಡಿದ ದೇಶ. ಸೇನಾ ಸರ್ವಾಧಿಕಾರ ಆಡಳಿತೆಯಲ್ಲಿರುವ ಇಲ್ಲಿ ಕ್ಷಾಮಡಾಮರಗಳಿಂದ, ನೆರೆಯ ಸೋಮಾಲಿಯದೊಂದಿಗೆ ಸಮರದಿಂದ ಲಕ್ಷಾಂತರ ಮಂದಿ ಅಸುನೀಗಿದ್ದಾರೆ ಕಳೆದ ಒಂದು ದಶಕದ ಕಾಲದಲ್ಲಿ. ಅಂತಃಕಲಹ ಮತ್ತು ನೆರೆಯ ಇಥಿಯೋಪಿಯದೊಂದಿಗೆ ಯುದ್ಧದ ಜೊತೆಗೆ ೧೯೯೧-೯೨ರಲ್ಲಿ ಸಂಭವಿಸಿದ ಕ್ಷಾಮದಿಂದಾಗಿ ಸೋಮಾಲಿಯಾದಲ್ಲಿ ಮೂರು ಲಕ್ಷಕ್ಕೂ ಹೆಚ್ಚು ಮಂದಿ ಹತರಾದರೆಂದು ಅಂದಾಜು. ವಿಶ್ವಸಂಸ್ಥೆ ಈ ಭೂಭಾಗದಲ್ಲಿ ಸ್ಥಿರತೆ ತರುವುದರಲ್ಲಾಗಲೀ, ಮಾನವೀಯ ನೆರವು ಒದಗಿಸುವುದರಲ್ಲಾಗಲೀ ವಿಫಲಗೊಂಡಿದೆ. ಪ್ರಬಲ ಶ್ರೀಮಂತ ರಾಷ್ಟ್ರಗಳ ಅನಾದರಣೆಯೇ ಇದಕ್ಕೆ ಕಾರಣ. ಇದು ಆಫ್ರಿಕಾದ ಹಲವು ದೇಶಗಳ ಇಂದಿನ ಪರಿಸ್ಥಿತಿ

ಈಗ ಸುಡಾನ್ ಸುದ್ದಿಯಲ್ಲಿದೆ. ಆಫ್ರಿಕಾದ ದೇಶಗಳು ಸುದ್ದಿಯಲ್ಲಿ ಕಾಣಿಸಿಕೊಳ್ಳುವುದು ಏನಾದರೂ ದೊಡ್ಡ ಅನಾಹುತ ಸಂಭವಿಸಿದಾಗಲೇ. ಉಳಿದಂತೆ ಪತ್ರಿಕೆಗಳಲ್ಲಿ, ಮಾಧ್ಯಮಗಳಲ್ಲಿ ಅವುಗಳ ಪ್ರಸ್ತಾಪವೇ ಇರುವುದಿಲ್ಲ. ಸುಡಾನಿನ ಡಾರ್‌ಫರ್ ಪ್ರಾಂತದಲ್ಲಿ ಸಂಭವಿಸುತ್ತಿರುವ ಸಶಸ್ತ್ರ ಘರ್ಷಣೆಗಳು ತಾರಕಕ್ಕೇರಿದ್ದು ಸಹಸ್ರಾರು ಮಂದಿ ಸಾವಿಗೀಡಾಗಿ, ಒಂದು ಮಿಲಿಯಕ್ಕೂ ಹೆಚ್ಚು ಜನ ನಿರ್ವಸಿತರಾಗಿ, ಎರಡು ಮಿಲಿಯಕ್ಕೂ ಹೆಚ್ಚು ಮಂದಿ ಆಹಾರ ಮತ್ತು ನೀರಿಗಾಗಿ ಹಾಹಾಕಾರ ಮಾಡುತ್ತಿರುವುದರಿಂದ ಸುದ್ದಿಯಲ್ಲಿದೆ. ವಿಶ್ವಸಂಸ್ಥೆಯ ಭದ್ರತಾ ಮಂಡಲಿಯೂ ಕೂಡ ಈಗ ಎಚ್ಚರಗೊಂಡಿರುವಂತೆ ತೋರುತ್ತಿದೆ. ಡಾರ್‌ಫರ್‌ನಲ್ಲಿ ಘರ್ಷಣೆ ಪ್ರಾರಂಭವಾದ್ದು ಹದಿನೇಳು ತಿಂಗಳ ಹಿಂದೆ. ಅರಬ್ ಮುಸಲ್ಮಾನರ ಹಿಡಿತದಲ್ಲಿರುವ ಸುಡಾನಿನ ಸರಕಾರ ದೇಶದ ಪಶ್ಚಿಮ ಗಡಿಗೆ ತಾಗಿಕೊಂಡಿರುವ ದೊಡ್ಡ ಪ್ರಾಂತ ಡಾರ್‌ಫರ್‌ಅನ್ನು ಕಡೆಗಣಿಸಿರುವುದರ ವಿರುದ್ಧವಾಗಿ ಬಂಡಾಯವೆದ್ದ ಸುಡಾನ್ ವಿಮೋಚನಾ ಸೇನೆ ಮತ್ತು ಸಾಮಾಜಿಕ ನ್ಯಾಯ ಮತ್ತು ಸಮಾನತೆ ಚಳವಳಿ ಶಸ್ತ್ರಗಳನ್ನು ಕೈಗೆತ್ತಿಕೊಂಡಿತು. ಈ ಸಂಸ್ಥೆಗಳು ಪ್ರತಿನಿಧಿಸುತ್ತಿರುವುದು ಆಫ್ರಿಕನ್ ಜನಸಾಮಾನ್ಯರನ್ನು, ಬಡರೈತರನ್ನು. ಅವರ ನ್ಯಾಯವಾದ ಬೇಡಿಕೆಗಳಿಗೆ ಗಮನ ನೀಡುವುದಕ್ಕೆ ಪ್ರತಿಯಾಗಿ ಸುಡಾನ್ ಸರಕಾರ ಕೈಗೊಂಡದ್ದು ದಬ್ಬಾಳಿಕೆ ಕ್ರಮ. ಅರಬ್ ಬಾಡಿಗೆ ಸೈನಿಕರನ್ನು – ಅವರನ್ನು 'ಜಂಜವೀಡ್' (ಕುದುರೆ ಸವಾರರು) ಎಂದು ಗುರ್ತಿಸುತ್ತಾರೆ– ಜನತೆಯ ಹೋರಾಟವನ್ನು ಹತ್ತಿಕ್ಕಲು ಉಪಯೋಗಿಸಿಕೊಂಡಿತು. ಈ ಅರಬ್ ಸೈನಿಕರು ನಡೆಸಿರುವ ದೌರ್ಜನ್ಯ ವರ್ಣನಾತೀತ. ಒಂದು ವರ್ಷದಲ್ಲಿ ಅವರು ೫೦,೦೦೦ ಜನರನ್ನು ಹತ್ಯೆಗೈದಿದ್ದಾರೆ, ೧.೨ಮಿಲಿಯ ಜನ ನಿರ್ವಸಿತರಾಗಿದ್ದಾರೆ, ೧,೭೦,೦೦೦ ಮಂದಿ ನೆರೆಯ ರಾಷ್ಟ್ರ ಚಾಡ್‌ನ ನಿರಾಶ್ರಿತ ಶಿಬಿರಗಳಲ್ಲಿದ್ದಾರೆ, ಒಂದು ಮಿಲಿಯ ಜನ ದೇಶದ ಬೇರೆ ಭಾಗಗಳಿಗೆ ವಲಸೆ ಹೋಗಿದ್ದಾರೆ ಎಂಬುದು ವಿಶ್ವಸಂಸ್ಥೆಯ ಅಂದಾಜು. ಎಂದರೆ ಸಂಭವಿಸಿರುವ ಹಾನಿ ಎಷ್ಟು ಗಾಢವಾದುದು ಎಂದು ಗೊತ್ತಾಗುತ್ತದೆ.

ಡಾರ್‌ಫರ್‌ನಲ್ಲಿ ಘರ್ಷಣೆಗಳಿಗೆ ಮೂಲ ಕಾರಣ ಭೂಮಿ ಮತ್ತು ನೈಸರ್ಗಿಕ ಸಂಪನ್ಮೂಲಗಳಿಗಾಗಿ ಅರಬ್ ಬುಡಕಟ್ಟಿನ ಜನರಿಗೂ ಮತ್ತು ಆಫ್ರಿಕದ ಮೂಲನಿವಾಸಿಗಳು, ಹೆಚ್ಚಾಗಿ ಗ್ರಾಮಗಳು ಮತ್ತು ಪಟ್ಟಣಗಳಲ್ಲಿರುವ ರೈತರ ನಡುವಣ ಘರ್ಷಣೆ. ೨೦೦೨ನೇ ವರ್ಷದಲ್ಲಿ ಜಂಜವೀಡ್‌ಗಳು ಆಫ್ರಿಕನ್ ಜನರ ಮೇಲೆ ದಾಳಿ ನಡೆಸಲಾರಂಭಿಸಿದರು. ಸುಡಾನ್ ಸರಕಾರ ಜನತೆಗೆ ರಕ್ಷಣೆ ನೀಡುವ ಬದಲು ಅರಬ್ ಜಂಜವೀಡ್‌ಗಳಿಗೆ ಕುಮ್ಮಕ್ಕು ನೀಡಿತು. ರೈತಾಪಿ ಜನರು ಸಂಘಟನೆಗೊಂಡು ದಾಳಿಯನ್ನು ಎದುರಿಸತೊಡಗಿದರು. ೧೯೫೬ರಲ್ಲಿ ಪೂರ್ಣ ಸ್ವಾತಂತ್ರ್ಯ ಪಡೆದುಕೊಂಡ ಸುಡಾನ್ ಮಿಲಿಟರಿ ಸರ್ವಾಧಿಕಾರಕ್ಕೆ ಒಳಪಟ್ಟು ಉದ್ದಕ್ಕೂ ಅಸ್ಥಿರತೆ, ಮುಗಿಯದ ಆಂತರಿಕ ಘರ್ಷಣೆಗಳನ್ನು ಅನುಭವಿಸುತ್ತಲೇ ಇದೆ. ಶೇ. ೫ರಷ್ಟು ವ್ಯವಸಾಯಯೋಗ್ಯ ಭೂಮಿಯನ್ನು ಹೊಂದಿರುವ ಈ ದೇಶದಲ್ಲಿ ಬೇಸಾಯಕ್ಕೆ ನದೀ ನೀರೇ ಆಧಾರ. ಅದರಿಂದಲೇ ಜಮೀನಿಗಾಗಿ ನಿರಂತರ ಘರ್ಷಣೆ. ಆಡಳಿತದ ಅಸ್ಥಿರತೆ ಜೊತೆಗೆ ಪ್ರಕೃತಿ ವಿಕೋಪ ಬೇರೆ. ೧೯೮೮ರಲ್ಲಿ ಸಂಭವಿಸಿದ ಪ್ರವಾಹದಿಂದ ಒಂದೂವರೆ ಮಿಲಿಯ ಜನ ನಿರ್ವಸಿತರಾದರು.

ವಿಶ್ವಸಂಸ್ಥೆಯ ಭದ್ರತಾ ಮಂಡಲಿಯ ನಿರ್ಣಯಕ್ಕೆ ಅನುಸಾರವಾಗಿ ಜಂಜವೀಡ್ ಅರಬ್ ಸೈನಿಕರನ್ನು ನಿಶ್ಶಸ್ತ್ರಗೊಳಿಸಲು ಸುಡಾನ್ ಸರಕಾರ ಸಮ್ಮತಿಸಿದೆ. ಇದು ಎಷ್ಟುಮಟ್ಟಿಗೆ ಕಾರ್ಯಗತವಾದೀತೋ ನೋಡಬೇಕು. ಯೂರೋಪಿಯನ್ ಯೂನಿಯನ್ ದೇಶಗಳು ಮತ್ತು ಅಮೆರಿಕ ಆರ್ಥಿಕ ದಿಗ್ಬಂಧನ ಹೇರುವ ಸೂಚನೆ ಮಾಡಿವೆ. ಹಾಗೇನಾದರೂ ಆದರೆ ಪರಿಸ್ಥಿತಿ ಮತ್ತಷ್ಟು ಹದಗೆಡುವುದು ಶತಸ್ಸಿದ್ಧ. ಅಮೆರಿಕ ಮತ್ತು ಯೂರೋಪಿನ ದೇಶಗಳ ದೃಷ್ಟಿಯಲ್ಲಿ ಸುಡಾನ್ ಇಸ್ಲಾಮಿಕ್ ಭಯೋತ್ಪಾದಕರಿಗೆ ಆಸರೆ ನೀಡುತ್ತಿರುವ ದೇಶ. ಒಸಾಮಾ ಬಿನ್ ಲಾಡೆನ್ ಸುಡಾನಿನಲ್ಲಿ ಆಶ್ರಯ ಪಡೆದಿದ್ದ ಎಂಬ ದೂರೂ ಇದೆ. ಅದರಿಂದಲೇ ಅಸಡ್ಡೆ. ದುರಂತ ತಪ್ಪಿಸಲು ಮುಂದಿನ ಕ್ರಮ ಸುಡಾನ್ ಸರಕಾರದ ಮೇಲಿದೆ.

ಶ್ರೀಯಾರ್ಕೆ
೮೪೯, ಬನಶಂಕರಿ ೩ನೇ ಹಂತ, ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫

ಎಸ್. ಬಿ. ಬಿರಾದಾರ

# ರಾಜ್ಯದ ರಾಜಧಾನಿ ಸ್ಥಳಾಂತರ

## ಒಂದು ಚಿಂತನೆ

ಸುದೀರ್ಘವಾದ ಐತಿಹಾಸಿಕ ಪರಂಪರೆಯುಳ್ಳ, ಬಹುಮುಖಿ ಸಂಸ್ಕೃತಿಯುಳ್ಳ "ಚೆಲುವ ಕನ್ನಡ ನಾಡು" ಇಂದು ಅನ್ಯಾನ್ಯ ಕಾರಣಗಳಿಂದಾಗಿ ಪ್ರತ್ಯೇಕತಾವಾದದ ಬೀಡಾಗುತ್ತಿದೆ. ಕರ್ನಾಟಕದ ಸಮಗ್ರತೆ, ಅಖಂಡತೆ ಇಂದು ವಿನಾಶದ ಅಂಚಿನಲ್ಲಿರುವದು ಸರ್ವವಿದಿತವಾದ ಸಂಗತಿ. ಕಳೆದ ಐವತ್ತು ವರ್ಷಗಳಿಂದಲೂ ಕರ್ನಾಟಕ ರಾಜ್ಯದ ರಾಜಧಾನಿ ಪಟ್ಟಣ ರಾಜ್ಯದ ಒಂದು ತುದಿಯಲ್ಲಿ ಇದ್ದು ಇತರ ಭಾಗದ ಜನರ ಆಶೋತ್ತರಗಳಿಗೆ ಸ್ಪಂದಿಸುವದು ಸಾಧ್ಯವಾಗುತ್ತಿಲ್ಲ. ಇದರಿಂದಾಗಿ ರಾಜ್ಯದ ಉತ್ತರದ ಭಾಗದಲ್ಲಿರುವ ಪ್ರದೇಶ ರಾಜಧಾನಿಯ ಸುತ್ತಲಿನ ಪ್ರದೇಶದಷ್ಟು ಅಭಿವೃದ್ಧಿ ಸಾಧಿಸುವುದು ಸಾಧ್ಯವಾಗಿಲ್ಲ. ಡಾ|| ಡಿ. ಎಮ್. ನಂಜುಂಡಪ್ಪ ಸಮಿತಿಯ ವರದಿಯೂ ಈ ಸಂಗತಿಯನ್ನು ದೃಢೀಕರಿಸುತ್ತದೆ. ಉತ್ತರ ಕರ್ನಾಟಕದ ಜನರು ಸರ್ಕಾರದ ದಿವ್ಯ ನಿರ್ಲಕ್ಷ್ಯಕ್ಕೊಳಗಾಗಿ ಇಂದು ಶಿಕ್ಷಣ, ಆರೋಗ್ಯ, ತಲಾವರಮಾನ, ಸಾರಿಗೆ-ಸಂಪರ್ಕ, ಉದ್ಯೋಗಾವಕಾಶ, ಉದ್ದಿಮೆ, ವಿಜ್ಞಾನ-ತಂತ್ರಜ್ಞಾನ ಮುಂತಾದ ಕ್ಷೇತ್ರಗಳಲ್ಲಿ ತೀವ್ರ ಕೊರತೆಯನ್ನು ಅನುಭವಿಸುತ್ತಿದ್ದಾರೆ. ಸರ್ಕಾರದ ಹಣದಲ್ಲಿ ಸ್ಥಾಪನೆಗೊಳ್ಳುತ್ತಿರುವ ಅನೇಕ ಶೈಕ್ಷಣಿಕ, ವೈಜ್ಞಾನಿಕ, ವೈದ್ಯಕೀಯ, ಔದ್ಯಮಿಕ, ಸಾರಿಗೆ-ಸಂಪರ್ಕ ಹಾಗೂ ಸಂಶೋಧನಾತ್ಮಕ-ಸಂಸ್ಥೆಗಳು ಬೆಂಗಳೂರಿನಲ್ಲಿಯೇ ಕೇಂದ್ರೀಕೃತಗೊಂಡಿರುವುದರಿಂದ ಆ ಸಂಸ್ಥೆಗಳು ಜನರಿಗೆ ಕೊಡುವ ಉದ್ಯೋಗ, ಅಧಿಕಾರ ಹಾಗೂ ಸೇವೆಗಳು ಹಳೆಯ ಮೈಸೂರು ವಲಯದ ಜನರಿಗೆ ಮಾತ್ರ ಸಿಗುತ್ತಿದ್ದು ಉತ್ತರ ಕರ್ನಾಟಕದ ಜನರಿಗೆ ಇವುಗಳು ನಿಲುಕುತ್ತಿಲ್ಲ. ಹೀಗಾಗಿ ರಾಜ್ಯದ ಉತ್ತರದ ಭಾಗದಲ್ಲಿರುವ ಜನ ಸಾಪೇಕ್ಷ ವಂಚಿತತೆಗೆ ಒಳಗಾಗಿದ್ದಾರೆ.

**ಬೆಂಗಳೂರು ನಗರಾಭಿಮುಖವಾಗಿ ಹರಿದು ಹೋಗುತ್ತಿರುವ ಬೌದ್ಧಿಕ ಸಂಪತ್ತು**

ಉತ್ತರ ಕರ್ನಾಟಕದಲ್ಲಿ ಮಾನವ ಸಂಪನ್ಮೂಲಗಳಿಗೆ ಹಾಗೂ ನೈಸರ್ಗಿಕ ಸಂಪನ್ಮೂಲಗಳಿಗೆ ಕೊರತೆಯೇನಿಲ್ಲ. ಆದರೆ ಈ ಭಾಗದ ಸಂಪನ್ಮೂಲಗಳ ಖರ್ಚಿನಲ್ಲಿ ಬೆಳೆದ ಜನನಾಯಕರು, ಅಧಿಕಾರಿಗಳು, ಇಂಜಿನಿಯರುಗಳು, ವೈದ್ಯರು, ವಿಜ್ಞಾನಿಗಳು ಹಾಗೂ ಉದ್ಯಮಿಗಳು ಉದ್ಯೋಗಾವಕಾಶ, ಮಕ್ಕಳ

**ನಮ್ಮ ರಾಜ್ಯದಲ್ಲಿ ಪ್ರಾದೇಶಿಕ ಅಸಮಾನತೆಯ ಸಮಸ್ಯೆ ಇಂದು ನೆನ್ನೆಯದಲ್ಲ, ಏಕೀಕರಣ ನಂತರದ ದಿನಗಳಿಂದಲೂ ಎಲ್ಲ ಸವಲತ್ತುಗಳು ಮತ್ತು ವಿವಿಧ ಕ್ಷೇತ್ರಗಳಲ್ಲಿ ಆಗಿರುವ ಆಗುತ್ತಿರುವ ಅಷ್ಟಿಷ್ಟು ಅಭಿವೃದ್ಧಿಯ ಹೆಚ್ಚಿನ ಅಂಶಗಳು ಹಳೆಯ ಮೈಸೂರು ವಲಯದ ಜನರಿಗೇ ದೊರಕುತ್ತಿದ್ದು ರಾಜ್ಯದ ಮಿಕ್ಕೆಲ್ಲ ಭಾಗಗಳು ಅದರಲ್ಲೂ ಉತ್ತರ ಕರ್ನಾಟಕ ಹಾಗೂ ಹೈದರಾಬಾದ್ ಕರ್ನಾಟಕ, ಕೊಡಗು ಜಿಲ್ಲೆಗಳ ಜನತೆ ವಂಚಿತರಾಗುತ್ತಾರೆಂಬ ಕೂಗು ಇತ್ತೀಚೆಗೆ ಹೆಚ್ಚು ಹೆಚ್ಚಾಗಿ ಪ್ರತಿಭಟನಾ ಹೋರಾಟಗಳಾಗಿ ವ್ಯಕ್ತವಾಗುತ್ತಿದೆ. ಸರಕಾರ ಈ ಬಗ್ಗೆ ಕೂಡಲೇ ಗಮನಹರಿಸುವುದು ಅತ್ಯಗತ್ಯವಾಗಿದೆ. ಈ ಸಮಸ್ಯೆಗಳ ಪರಿಹಾರಕ್ಕೆ ಸೂತ್ರಗಳಲ್ಲಿ ರಾಜ್ಯದ ರಾಜಧಾನಿಯ ಸ್ಥಳಾಂತರವೂ ಒಂದು ಪ್ರಮುಖ ಅಂಶವಾಗಬಹುದೇ ಎಂಬುದು ಈಗೀಗ ಚರ್ಚಿತವಾಗುತ್ತಿರುವ ವಿಷಯ.**

ಉತ್ತಮ ಭವಿಷ್ಯತ್ತು, ಅಂತಾರಾಷ್ಟ್ರೀಯ ಸಂಪರ್ಕ ಹಾಗೂ ಇತರ ನೆಪಗಳನ್ನೊಡ್ಡಿ ಬೆಂಗಳೂರಿಗೆ ಹೋಗಿ ಅಲ್ಲಿಯೇ ನೆಲೆಗೊಳ್ಳುತ್ತಿದ್ದಾರೆ. ಯಾವ ಪ್ರದೇಶ ಮತ್ತು ಜನಾಂಗದ ಸಂಪನ್ಮೂಲಗಳನ್ನು ಬಳಸಿಕೊಂಡು ಗಣ್ಯ ವ್ಯಕ್ತಿಗಳಾಗಿ ಬೆಳೆಯುತ್ತಾರೋ ಆ ಭಾಗದ ಜನರಿಗೆ ಈ ಗಣ್ಯ ವ್ಯಕ್ತಿಗಳ ಸೇವೆ ಲಭ್ಯವಾಗದೇ ಇರುವುದು ಒಂದು ದುರಂತವೇ ಸರಿ. ಇದು ಒಂದು ರೀತಿಯ ಪ್ರತಿಭಾ ಪಲಾಯನ. ಈ ರೀತಿಯಾಗಿ ಉತ್ತರ ಕರ್ನಾಟಕದಿಂದ ರಾಜಧಾನಿಯತ್ತ ಹರಿದುಹೋಗುತ್ತಿರುವ ಮಾನವ ಸಂಪನ್ಮೂಲವನ್ನು ತಡೆಯುವುದು, ಅದನ್ನು ಪೋಷಿಸುವುದು ಹಾಗೂ ಅದನ್ನು ಉತ್ಪಾದಿಸಿದ ಜನರಿಗೆ ಅವರ ಸೇವೆ ಲಭ್ಯವಾಗುವಂತೆ ಮಾಡಬೇಕಾದುದು ಇಂದಿನ ತುರ್ತು ಅಗತ್ಯವಾಗಿದೆ. ಇದನ್ನು ತಡೆಯದೇ ಹೋದರೆ ಸದ್ಯೋಭವಿಷ್ಯತ್ತಿನಲ್ಲಿ, ಇಂದು ನಾವು ನೋಡುತ್ತಿರುವ ಸಮಗ್ರ ಕರ್ನಾಟಕವು ಉತ್ತರ ಕರ್ನಾಟಕ, ಹೈದರಾಬಾದ ಕರ್ನಾಟಕ, ಕೊಡಗು ಕರ್ನಾಟಕ ಹಾಗೂ ಹಳೆಯ ಮೈಸೂರು ಕರ್ನಾಟಕ ಗಳೆಂಬ ಹೆಸರಿನಲ್ಲಿ ತುಂಡು-ತುಂಡಾಗಿ ಹೋಗುವುದರಲ್ಲಿ ಸಂಶಯವಿಲ್ಲ. ಬರಿದಾಗುತ್ತಿರುವ ಸಂಪನ್ಮೂಲಗಳ, ಪಲಾಯನಗೈಯುತ್ತಿರುವ ಪ್ರತಿಭೆಗಳ ಪೋಷಣೆ ಹಾಗೂ ಸದ್ಬಳಕೆಯಾಗದಿದ್ದರೆ ಅಭಿವೃದ್ಧಿ ಪ್ರಕ್ರಿಯೆಯು ಪ್ರಜಾಸತ್ತಾತ್ಮಕವಾಗಲಾರದು.

**'ಗಾರ್ಡನ್ ಸಿಟಿ'ಗೆ ಬದಲು 'ಗಾರ್ಬೇಜ್ ಸಿಟಿ'ಯಾಗುತ್ತಿರುವ ಬೆಂಗಳೂರು**

ಬೆಂಗಳೂರಿನ ವರ್ಣರಂಜಿತ ಜೀವನ ಹಾಗೂ ಸೌಲಭ್ಯಗಳಿಗೆ ಆಕರ್ಷಿತರಾಗಿ ಜನರು ವಲಸೆ ಹೋಗುವುದರಿಂದ ಇಂದು ಬೆಂಗಳೂರು ಜನದಟ್ಟಣೆ ಯಿಂದ, ವಾಹನ ದಟ್ಟಣೆಯಿಂದ ಹಾಗೂ ತ್ಯಾಜ್ಯ ವಸ್ತುಗಳಿಂದ ತುಂಬಿ ತುಳುಕುತ್ತಿದೆ. ತನ್ನ ಭೌಗೋಳಿಕ ವ್ಯಾಪ್ತಿಯಲ್ಲಿರುವ ಜನಸಂಖ್ಯೆಯನ್ನು ಸ್ವಯಂ ಪೋಷಿಸುವ ಸಾಮರ್ಥ್ಯವನ್ನು ಮೀರಿ ಬೆಳೆದು, ಪರಿಸರ ಮಾಲಿನ್ಯ ಕೇಂದ್ರವಾಗುತ್ತಿರುವ ಈ ಪಟ್ಟಣವನ್ನು ರಕ್ಷಿಸಿ ಅದನ್ನು ಜನರು ಮತ್ತು ಜೀವಿಗಳು ವಾಸಿಸಲು ಯೋಗ್ಯ ಸ್ಥಳವನ್ನಾಗಿ ಪರಿವರ್ತಿಸುವ ಅನಿವಾರ್ಯತೆ ಎದುರಾಗಿದೆ. ಕಳೆದುಹೋದ ''ಉದ್ಯಾನ ನಗರ''ವೆಂಬ ಅಂತಸ್ತನ್ನು ಬೆಂಗಳೂರು ನಗರ ಮತ್ತೆ ಮರಳಿ ಪಡೆಯಲು ಸಾಧ್ಯ. ಇಲ್ಲದಿದ್ದರೆ ಬೆಂಗಳೂರು ನಗರ ''ಕಸದ ತೊಟ್ಟಿ'' ಯಾಗಿಯೇ ಉಳಿದು ಗಂಭೀರವಾದ ಆರೋಗ್ಯ ಸಮಸ್ಯೆಗಳಿಗೆ ಎಡೆಮಾಡಿಕೊಡುತ್ತದೆ.

**ಪ್ರಾದೇಶಿಕ ಅಭಿವೃದ್ಧಿ ಅಧ್ಯಯನ ಸಮಿತಿಯ ವರದಿ**

ಅಸಮಾನ ಅಭಿವೃದ್ಧಿಯಿಂದಾಗಿ ಹಿಂದುಳಿದ ಉತ್ತರ ಕರ್ನಾಟಕವನ್ನು ಅಭಿವೃದ್ಧಿಪಡಿಸಲು ಮಂಡಿಸಲಾದ ಡಾ|| ಡಿ. ಎಮ್. ನಂಜುಂಡಪ್ಪ ವರದಿಯನ್ನು ಕೂಡಲೇ ಜಾರಿಗೆ ತರಬೇಕು. ಈ ವರದಿಯಲ್ಲಿ ಉತ್ತರ ಕರ್ನಾಟಕದಲ್ಲಿ ಮೂಲಭೂತ ಸೌಕರ್ಯಗಳನ್ನು ಒದಗಿಸಲು ಹದಿನಾರು ಸಾವಿರ ಕೋಟಿ ರೂಪಾಯಿ ಹಣವನ್ನು ಸಮಯ ನಿರ್ಬಂಧನೆ ಯಲ್ಲಿ ವ್ಯಯ ಮಾಡಬೇಕೆಂದು ಸೂಚಿಸಲಾಗಿದೆ. ಈ ಪರಿಹಾರದ ಪ್ಯಾಕೇಜು ಇದೂವರೆಗೆ ಉತ್ತರ ಕರ್ನಾಟಕಕ್ಕೆ ಆದ ಅನ್ಯಾಯವನ್ನು ಸರಿಪಡಿಸಲು




ಒಂದು ತಾತ್ಕಾಲಿಕ ಪರಿಹಾರದ ರೂಪದಲ್ಲಿದೆ. ಆದರೆ ರಾಜ್ಯದ ರಾಜಧಾನಿ ರಾಜ್ಯದ ಕೇಂದ್ರ ಸ್ಥಳಕ್ಕೆ ವರ್ಗಾವಣೆ ಯಾಗದ ವಿನಃ ಈ ಅಸಮಾನ ಅಭಿವೃದ್ಧಿಗೆ ಶಾಶ್ವತ ಪರಿಹಾರ ದೊರೆಯಲಾರದು. ಡಾ|| ನಂಜುಂಡಪ್ಪ ವರದಿಯಲ್ಲಿನ ಪರಿಹಾರದ ಪ್ಯಾಕೇಜು ಬಹುದಿನ ಗಳಿಂದಲೂ ಬೇನೆಯಿಂದ ಬಳಲಿದ ವ್ಯಕ್ತಿಗೆ ಚೇತರಿಸಿ ಕೊಳ್ಳಲು ಅಗತ್ಯವಾದ ಔಷಧಿಯಂತಿದೆಯೇ ವಿನಃ ಅದು ಆಹಾರವಾಗಲಾರದು. ಉತ್ತರ ಕರ್ನಾಟಕದ ಅಭಿವೃದ್ಧಿಗೆ ಈ ಹಣ ತೊಡಗಿಸಿದ ನಂತರ ರಾಜ್ಯದ ರಾಜಧಾನಿ – ರಾಜ್ಯದ ಕೇಂದ್ರ ಸ್ಥಳಕ್ಕೆ ವರ್ಗಾವಣೆ ಯಾಗಲೇಬೇಕು. ಅದು ಶಾಶ್ವತ ಪರಿಹಾರವಾಗುವು ದರಲ್ಲಿ ಸಂಶಯವಿಲ್ಲ.

**ಅಭಿವೃದ್ಧಿ ಆಯುಕ್ತರ ಶಿಫಾರಸು**

ಸರಕಾರದ ಹಿರಿಯ ಐ.ಎ.ಎಸ್. ಅಧಿಕಾರಿ ಹಾಗೂ ಅಭಿವೃದ್ಧಿ ಆಯುಕ್ತರಾದ ಶ್ರೀ ಚಿರಂಜೀವಿ ಸಿಂಗರು ಕೂಡಾ ರಾಜ್ಯದ ರಾಜಧಾನಿಯನ್ನು ಸಮಾನ ಅಭಿವೃದ್ಧಿಯನ್ನು ಸಾಧಿಸಲು ಬೇರೆ ಕಡೆಗೆ ಸ್ಥಳಾಂತರಿಸಲು ಸರಕಾರಕ್ಕೆ ಶಿಫಾರಸು ಮಾಡಿದ್ದಾರೆ. ಇದುವರೆಗೆ ರಾಜಧಾನಿ ನಗರದ ಸಾಮೀಪ್ಯತೆಯ ಫಲಾನುಭವಿ ಪ್ರದೇಶದ ಜನರು ರಾಜ್ಯದ ಎಲ್ಲ ಜನತೆಯ ಅಭ್ಯುದಯ ಹಾಗೂ ಸಮಗ್ರ ಕರ್ನಾಟಕದ ಪೋಷಣೆಯ ದೃಷ್ಟಿಯಿಂದ ಈ ಘನಕಾರ್ಯದಲ್ಲಿ ಪಾಲ್ಗೊಳ್ಳಬೇಕು. ಅಂದರೆ ಮಾತ್ರ ಅಭಿವೃದ್ಧಿ ಪ್ರಕ್ರಿಯೆಯು ನಿರಂತರವೂ, ನ್ಯಾಯಸಮ್ಮತವೂ ಆಗಲು ಸಾಧ್ಯ.

**ಬೇರೆ ರಾಜ್ಯದ ರಾಜಧಾನಿ ನಗರಗಳ ಉದಾಹರಣೆ ನಮಗೆ ಬೇಡ**

ಸದ್ಯ ರಾಜ್ಯದ ಬಹುತೇಕ ಜನರಿಗೆ ಅನಾನುಕೂಲ ವಾಗಿರುವ ರಾಜಧಾನಿಯು ಅದು ಎಲ್ಲಿಯೇ ಇದ್ದರೂ ಅದನ್ನು ಸಾರ್ವಜನಿಕರೆಲ್ಲರೂ ಒಮ್ಮತದಿಂದ ತಿರಸ್ಕರಿಸ ಬೇಕು. ರಾಜಧಾನಿ ಪಟ್ಟಣ ಎಲ್ಲಿಯೇ ಇದ್ದರೂ ಸಮಾನ ಅಭಿವೃದ್ಧಿಯನ್ನು ಸಾಧಿಸಬಹುದೆಂಬ ವಾದವನ್ನು ಮಂಡಿಸುತ್ತ ಮಹಾರಾಷ್ಟ್ರದ ಮುಂಬೈ, ರಾಜಸ್ಥಾನದ ಜೈಪುರ ಹಾಗೂ ದೇಶದ ರಾಜಧಾನಿ ದೆಹಲಿ ಪಟ್ಟಣಗಳು ಆಡಳಿತ ವ್ಯಾಪ್ತಿಯ ಯಾವುದೋ ಒಂದು ಭಾಗದಲ್ಲಿರುವುದನ್ನು ಉದಾಹರಿಸುವುದು ಸಮರ್ಥನೀಯವೂ ಅಲ್ಲ, ಸಾಧುವೂ ಅಲ್ಲ. ಕರ್ನಾಟಕ ರಾಜ್ಯದ ರಾಜಧಾನಿ ಸ್ಥಳಾಂತರ ಮಾಡುವುದು ಇತರ ರಾಜ್ಯದ ಜನತೆಗೆ ಮಾದರಿಯಾಗಬಲ್ಲುದು. ನಂತರ ದೇಶದ ರಾಜಧಾನಿ ಸ್ಥಳಾಂತರದ ದಿನಗಳು ದೂರ ಉಳಿಯಲಾರವು. ಅದಕ್ಕೆ ದಕ್ಷಿಣ ಭಾರತದ ಎಲ್ಲ ರಾಜ್ಯಗಳ ಜನತೆ ಹೋರಾಟ ಮಾಡಬೇಕು.

**ಹೊಸ ರಾಜಧಾನಿ ಸ್ಥಾಪನೆ : ಒಂದು ಸವಾಲು**

ಹೊಸ ರಾಜಧಾನಿ ಸ್ಥಾಪನೆಗೆ ಅಗತ್ಯವಿರುವ ಮೂಲಭೂತ ಸೌಕರ್ಯಗಳನ್ನು ಒದಗಿಸುವುದು ಒಂದು ದೊಡ್ಡ ಸವಾಲೇ ಸರಿ. ಆದರೆ ಸ್ವೀಕರಿಸಲಾಗದ, ಸಾಧಿಸ ಲಾಗದ ಸವಾಲೇನಲ್ಲ. ವಿವಿಧ ಇಲಾಖೆಗಳ ಕಛೇರಿಗಳ ಕಟ್ಟಡಗಳು, ಸಾರಿಗೆ ವ್ಯವಸ್ಥೆ, ಇತ್ಯಾದಿ ಮೂಲಭೂತ ಸೌಕರ್ಯಗಳ ನಿರ್ಮಾಣಕ್ಕಾಗಿ ಕರ್ನಾಟಕ ಕೇಂದ್ರ ಸ್ಥಳದ ಜನ ತಮ್ಮ ಹೊಲ-ಮನೆಗಳನ್ನು ಬಿಟ್ಟುಕೊಟ್ಟು ಔದಾರ್ಯವನ್ನು ಮೆರೆಯಬೇಕು. ಈ ಕಾರ್ಯ ಹೇಳುವಷ್ಟು ಸುಲಭವಲ್ಲ. ರಾಜಧಾನಿ ಪಟ್ಟಣ ಸ್ಥಾಪನೆಯಿಂದ ನಿರ್ವಸಿತರಾಗಲಿರುವ ಜನರಿಗೆ ಯೋಗ್ಯ ಪರಿಹಾರ ಕೊಟ್ಟು ಪುನರ್ವಸತೀಕರಣ ಗೊಳಿಸಬೇಕಾಗುತ್ತದೆ. ಈ ನಿಟ್ಟಿನಲ್ಲಿ ಸರ್ಕಾರ, ಸರ್ಕಾರೇತರ ಸಂಘಟನೆಗಳು, ಉದ್ಯಮಿಗಳು, ಸಾರ್ವಜನಿಕರು, ಜನಪರ ಸಂಘಟನೆಗಳು ಮನಃ ಪೂರ್ವಕವಾಗಿ ಸಹಕರಿಸಿ ಸಮಗ್ರ ಹಾಗೂ ಸಮೃದ್ಧ ಕರ್ನಾಟಕದ ಪೋಷಣೆಗೆ ನೆರವಾಗಬೇಕು. ರಾಜ್ಯದ ಕೇಂದ್ರಸ್ಥಳವೆಂದೊಡನೆ ಅದು ದಾವಣಗೆರೆ ಅಥವಾ ಹುಬ್ಬಳ್ಳಿಯೇ ಆಗಬೇಕಾಗಿಲ್ಲ. ನಕ್ಷೆಯಲ್ಲಿ ತೋರಿಸಿದಂತೆ ಕರ್ನಾಟಕದ ದಕ್ಷಿಣೋತ್ತರ ಹಾಗೂ ಪೂರ್ವ ಪಶ್ಚಿಮ ಗಳಿಂದ ಅಳೆದು ಭೂಗರ್ಭ ಶಾಸ್ತ್ರಜ್ಞರ ಸಲಹೆ ಪಡೆದು ಭೂಕಂಪ ಪೀಡಿತ ಪ್ರದೇಶ ಹಾಗೂ ಹಳ್ಳ-ಹೊಳೆ ಗಳನ್ನು ಹೊರತುಪಡಿಸಿ ರಾಜ್ಯದ ಮಧ್ಯಸ್ಥಳದಲ್ಲಿ ಸ್ಥಾಪನೆಯಾಗಬೇಕು.

**ರಾಜಧಾನಿ ನಗರದ ಸಮಾನ ಸಾಮೀಪ್ಯತೆ ಹಾಗೂ ಸಮರ್ಥ ಆಡಳಿತಾತ್ಮಕ ನಿರ್ವಹಣೆ**

ರಾಜ್ಯದ ರಾಜಧಾನಿಯನ್ನು ಕರ್ನಾಟಕದ ಮಧ್ಯ ಭಾಗಕ್ಕೆ ಸ್ಥಳಾಂತರಿಸಿದರೆ ಎಲ್ಲ ಪ್ರದೇಶಗಳು ಸಮಾನ ಅಂತರದಲ್ಲಿ ಇರುತ್ತವೆ. ರಾಜ್ಯದ ರಾಜಧಾನಿಯಲ್ಲಿರುವ ಎಲ್ಲ ಇಲಾಖೆಗಳ ಕೇಂದ್ರ ಕಛೇರಿಗಳು ಎಲ್ಲ ಜಿಲ್ಲೆಯ ಜನರಿಗೆ ಸಮೀಪವಾಗುತ್ತವೆ. ಜನರ ದೈನಂದಿನ ಅಗತ್ಯಗಳಿಗೆ ಸರ್ಕಾರದ ಕೇಂದ್ರ ಕಛೇರಿಗಳಲ್ಲಿರುವ ಅಧಿಕಾರಿಗಳು, ಸಚಿವರು, ಜನಪ್ರತಿನಿಧಿಗಳು ತಾರತಮ್ಯವಿಲ್ಲದೆ, ವಿಳಂಬವಿಲ್ಲದೆ ಸ್ಪಂದಿಸುವುದರಿಂದ ಜನರಿಗೆ ಅನುಕೂಲತೆಗಳನ್ನು ಹಾಗೂ ಸಮಸ್ಯೆಗಳಿಗೆ ಪರಿಹಾರವನ್ನು ಕಲ್ಪಿಸಿಕೊಡಬಹುದು. ಇದರಿಂದಾಗಿ ರಾಜ್ಯದಲ್ಲಿ ಕಾನೂನು ಮತ್ತು ಸುವ್ಯವಸ್ಥೆ ನೆಲೆಗೊಂಡು ಸಮರ್ಥ ಆಡಳಿತಾತ್ಮಕ ನಿರ್ವಹಣೆ ಸಾಧ್ಯವಾಗುತ್ತದೆ.

**ಎಸ್. ಬಿ. ಬಿರಾದಾರ**
ಉಪನ್ಯಾಸಕರು, ಎಸ್. ಸಿ. ಪಿ. ಡಿಗ್ರಿ ಕಾಲೇಜು
ಮಹಾಲಿಂಗಪುರ - ೫೮೭ ೩೧೨, ಬಾಗಲಕೋಟ ಜಿಲ್ಲೆ



# ಅಪರೂಪದ ಕಲಾವಿದ
# ಶಂಕರ ಕೆ. ಪತ್ತಾರ



ತೈಲಚಿತ್ರ

ಶ್ರೀ ಶಂಕರ ಕೆ. ಪತ್ತಾರ ಕೊಪ್ಪಳ ಜಿಲ್ಲೆಯ, ಯಲಬುರ್ಗಾ ತಾಲೂಕಿನ ಭಾನಾಪುರ ಪಾ||. ಸಾಮಾನ್ಯ ಜನರ ಮಧ್ಯೆ ಬೆಳೆದು ಅರಳಿದ ಕಲಾವಿದ.

ಇವರು ಚಿತ್ರಕಲೆಯನ್ನು ಯಾವುದೇ ಕಲಾಶಾಲೆಯಲ್ಲಿ ಕಲಿತವರಲ್ಲ. ತಂದೆಯ ನಿಧನದ ನಂತರ, ಓದಿಗೆ ವಿದಾಯ ಹೇಳಿ ಸಂಸಾರದ ಭಾರ ಹೊರಬೇಕಾದ ಅನಿವಾರ್ಯತೆ ಉಂಟಾಯಿತು. ಆಗ ಇವರ ನೆರವಿಗೆ ಬಂದದ್ದು ಕುಂಚ. ತಾನೊಬ್ಬ ಕಮರ್ಷಿಯಲ್ ಆರ್ಟಿಸ್ಟ್ ಎಂದು ಹೇಳಿಕೊಳ್ಳಲು ಅವರಿಗೆ ಯಾವ ಸಂಕೋಚವೂ ಇಲ್ಲ.



ವೈದ್ಯ ವಿಜ್ಞಾನಿ ರಾಬರ್ಟ್‌ಕಾಕ್



ಶಿಲಾಫಲಕ ಮತ್ತು ಪ್ಲೈವುಡ್ ಮೇಲೆ ಚಿತ್ರ

ನಾಮ ಫಲಕಗಳು, ಭಿತ್ತಿ ಚಿತ್ರಗಳು, ಜಲವರ್ಣ, ತೈಲವರ್ಣ ಚಿತ್ರಗಳ ರಚನೆಯಾಗಲಿ, ದೇಗುಲಗಳ ಚಿತ್ರಾಲಂಕಾರ ಅಥವಾ ಡ್ರಾಮಾ ಸೀನರಿಗಳ ಪೇಯಿಂಟಿಂಗ್ ಆಗಲಿ – ಇವರ ಕುಂಚ ಶ್ರದ್ಧೆಯಿಂದ ಹರಿದಾಡುತ್ತದೆ.

ಹಲವಾರು ರಾಷ್ಟ್ರನಾಯಕರ, ಖ್ಯಾತ ಅಂತರರಾಷ್ಟ್ರೀಯ ವ್ಯಕ್ತಿಗಳ, ಧಾರ್ಮಿಕ ಸಂತರ ಚಿತ್ರಗಳನ್ನು ಬಿಡಿಸಿದ್ದಾರೆ. ಗಾಜಿನ ಮೇಲೆ ವರ್ಣಚಿತ್ರ ರಚಿಸುವುದರಲ್ಲಿ ಸಿದ್ಧಹಸ್ತರು. ಇವರು ಗಾಜಿನ ಮೇಲೆ ಬಿಡಿಸಿರುವ ಕರ್ನಾಟಕದ ಕವಿಗಳ, ಲೇಖಕರ ಚಿತ್ರಗಳು ಎಲ್ಲರಿಂದ ಶ್ಲಾಘನೆ ಗಳಿಸಿವೆ.

೧೯೩೪ರ ಮೇ ೩ರಂದು ಹರಿಜನ ಪತ್ರಿಕೆಗೆ ನಿಧಿ ಸಂಗ್ರಹಕ್ಕಾಗಿ ಮಹಾತ್ಮಾಗಾಂಧಿಯವರು ಉತ್ತರ ಕರ್ನಾಟಕ ಪ್ರವಾಸದ ಸಂದರ್ಭದಲ್ಲಿ ಭಾನಾಪುರ ರೈಲು ನಿಲ್ದಾಣದಲ್ಲಿ ಅರ್ಧ ಗಂಟೆ ತಂಗಿದ್ದರು. ಆಗ ಶಂಕರರ ತಂದೆ ಗಾಂಧೀಜಿಯವರ ಚಿತ್ರ ಬಿಡಿಸಿ ಅರ್ಪಿಸಿದ್ದರಂತೆ. ಅದೇ ಸ್ಥಳದಲ್ಲಿ ಇಂದು ಶಂಕರರು ರಚಿಸಿರುವ ಗಾಂಧೀಜಿಯವರ ಭಾವಚಿತ್ರವನ್ನು ಪ್ರತಿಷ್ಠಾಪಿಸಲಾಗಿದೆ.



ಗಾಜಿನ ಮೇಲೆ ಚಿತ್ರ



ಖಜುರಾಹೊ ಲೇಟಿನ - ಸುಂದರಿ (ತೈಲವರ್ಣ)

ಕೊಪ್ಪಳದಲ್ಲಿ ನಡೆದ ೭೨ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಸ್ಮರಣ ಸಂಚಿಕೆಯ ಮುಖಪುಟ ರಚನೆಯಲ್ಲದೆ, ಕಲಾಪ್ರದರ್ಶನದ ಸಂಚಾಲಕರೂ ಆಗಿದ್ದರು. ಚಿತ್ರಕಲೆಗಾಗಿ ಹಲವು ಪ್ರಶಸ್ತಿಗಳನ್ನು ಪಡೆದಿದ್ದಾರೆ.

ಸರಳ ಸ್ನೇಹಜೀವಿಯಾದ ಇವರಿಗೆ ಚಿತ್ರಕಲೆಯಂತೆಯೇ ಸಾಹಿತ್ಯದಲ್ಲೂ ಸಂಗೀತದಲ್ಲೂ ಆಸಕ್ತಿ ಇದೆ. ತಬಲಾ ವಾದನವೂ ಇವರಿಗೆ ಸಿದ್ಧಿಸಿದೆ. ಒಳ್ಳೆಯ ವಿಚಾರಗಳು ಎಲ್ಲ ಕಡೆಗೂ ಹರಡಲಿ ಎಂದು ಅಪೇಕ್ಷಿಸುವವರು. ತಮ್ಮ ಸಂಪರ್ಕಕ್ಕೆ ಬಂದವರಿಗೂ ಓದುವ ಹವ್ಯಾಸ ಉಂಟು ಮಾಡುವವರು.

'ಹೊಸತು' ಪತ್ರಿಕೆಯ ಅಭಿಮಾನಿ. ಈವರೆಗೆ ಸುಮಾರು ಎಪ್ಪತ್ತರಷ್ಟು ಸಹೃದಯ ಓದುಗ-ಚಂದಾದಾರರನ್ನು ನೋಂದಾಯಿಸಿಕೊಟ್ಟಿದ್ದಾರೆ. ಇವರಿಗೆ 'ಹೊಸತು' ಬಳಗದ ಅಭಿನಂದನೆಗಳು ಸಲ್ಲುತ್ತವೆ.

– ಕೆ. ಪಿ. ಎಸ್

ಕಲಾವಿದರ ವಿಳಾಸ
ಶಂಕರ ಕೆ. ಪತ್ತಾರ, 'ವರ್ಣಶ್ರೀ', ಅಂಚೆ : ಭಾನಾಪುರ – [illegible]

# ಪುಸ್ತಕ ಲೋಕಕ್ಕೆ ನವಕರ್ನಾಟಕ



**ಬಿಡುವಿನ ವೇಳೆಯ ಸದುಪಯೋಗ ಹೇಗೆ ?** — *ಕಮಲಾ ರಾಮಸ್ವಾಮಿ*

ನಾವು ಸಾಕಷ್ಟು ಸಮಯ ಪೋಲು ಮಾಡಿದರೂ 'ಅಯ್ಯೋ! ಟೈಂ ಎಲ್ಲಿದೆ ಮಾರಾಯ' ಅಂಥ ಬಡಬಡಿಸುತ್ತೇವೆ. ಸಿಕ್ಕ ಸಮಯವನ್ನು ಸಮರ್ಥವಾಗಿ, ಸೃಜನಾತ್ಮಕವಾಗಿ ಬಳಸಿಕೊಳ್ಳುವ ಮನೋಭಾವವಿದ್ದಲ್ಲಿ ಪ್ರತಿಕ್ಷಣ ಕೂಡ ಅಮೂಲ್ಯವಾದುದೆ. ಬಿಡುವಿನ ವೇಳೆಯಲ್ಲಿ ಕಾಲಹರಣ ಮಾಡುವ ಬದಲು ಈ ಪುಸ್ತಕ ಓದಿ ಸದುಪಯೋಗ ಪಡೆದುಕೊಳ್ಳಿ.

*ಡಾ॥ ಪಿ. ಎಸ್. ಗೀತಾ* — **ಕಾಲೇಜು ವಿದ್ಯಾರ್ಥಿನಿಯರ ವ್ಯಕ್ತಿತ್ವ ವಿಕಾಸ ಹೇಗೆ ?**

ಕಾಲೇಜು ಅಂದಕೂಡಲೆ ಅಲ್ಲೊಂದು 'ಜೋಶ್' ಕಂಡುಬರುತ್ತದೆ. ಓದು, ಆತ್ಮೀಯರ ಒಡನಾಟ, ತುಂಟಾಟ ಅಲ್ಲಿ ಸಹಜ. ಈ ನಡುವೆ ವಿದ್ಯಾರ್ಥಿಗಳ ವ್ಯಕ್ತಿತ್ವ ಅಲ್ಲೆಲ್ಲಿಯೋ ಕಳೆದುಹೋಗಬಾರದು. ತಮ್ಮ ಬದುಕನ್ನು ಸುಂದರವಾಗಿ ರೂಪಿಸಿಕೊಳ್ಳಲು ಅವರು ಚಿಂತಿಸಬೇಕು. ಆ ಚಿಂತನೆಗೆ ಒತ್ತಾಸೆಯಾಗಿ ನಿಲ್ಲಬೇಕಾದವರು ಹೆತ್ತವರು ಮತ್ತು ಅಧ್ಯಾಪಕರು. ಇವರು ಮಕ್ಕಳ ಬಗ್ಗೆ ಸಹಾನುಭೂತಿಯಿಂದ ವರ್ತಿಸುವುದು ಅಗತ್ಯವಾಗುತ್ತದೆ. ಆ ದಿಸೆಯಲ್ಲಿ ಈ ಕೃತಿ ಮಾರ್ಗದರ್ಶಿಯಾಗಿದೆ.





**ಅನ್ಯೋನ್ಯ ದಾಂಪತ್ಯ ಹೇಗೆ ?** — *ಡಾ॥ ಸಿ. ಆರ್. ಚಂದ್ರಶೇಖರ್*

ಗಂಡ-ಹೆಂಡತಿ ಪರಸ್ಪರ ಹೊಂದಿಕೊಂಡು ಪ್ರೀತಿ-ವಿಶ್ವಾಸದಿಂದ ಬಾಳಲು ಕಲಿಯಬೇಕು. ಇಲ್ಲದಿರೆ ದಾಂಪತ್ಯ ಸೂತ್ರ ಕಳೆದ ಗಾಳಿಪಟವಾಗುತ್ತದೆ. ಅಲ್ಲಿ ಯಾರಿಗೂ ನೆಮ್ಮದಿಯಿರುವುದಿಲ್ಲ. ದಾಂಪತ್ಯವನ್ನು ಅನ್ಯೋನ್ಯವಾಗಿಸಿ, ಪರಸ್ಪರ ಸಾಮರಸ್ಯದಿಂದ ಬಾಳುವುದು ಹೇಗೆ? ಸಾಮರಸ್ಯಕ್ಕೆ ಕುಂದುಂಟಾಗುವ ಸಂದರ್ಭ ಬಂದಾಗ ಏನು ಮಾಡಬೇಕು ? ಸಮಸ್ಯೆಗಳನ್ನು ಯಾರಲ್ಲಿ ಹೇಳಿಕೊಂಡು ಪರಿಹಾರಕ್ಕೆ ಪ್ರಯತ್ನಿಸಬೇಕು ? ಈ ಪುಸ್ತಕ ಓದಿ ತಿಳಿಯಿರಿ.

*ಡಾ॥ ಸಿ. ಆರ್. ಚಂದ್ರಶೇಖರ್* — **ಮನಸ್ಸೇ ನೀ ಪ್ರಶಾಂತವಾಗಿರು**

ಮನಸ್ಸು ತಿಳಿಯಾದ ಪ್ರಶಾಂತ ಕೊಳದ ಹಾಗಿರಬೇಕು. ಅಲ್ಲಿ ಪುಟ್ಟದೊಂದು ಕಲ್ಲು ಬಿದ್ದರೂ ಅದು ಕದಡಿ ಬಗ್ಗಡವಾಗುತ್ತದೆ. ಮನಸ್ಸು ಗೊಂದಲದ ಗೂಡಾಗುತ್ತದೆ. ಹಾಗಾದರೆ ಇಂದಿನ ಈ ಗಡಿಬಿಡಿಯ ಜೀವನದಲ್ಲಿ ಮನಸ್ಸು ಪ್ರಶಾಂತವಾಗಿರಲು ಏನು ಮಾಡಬೇಕು ? ಏನಾದರೂ ಸರಳ ಕ್ರಮಗಳಿವೆಯೇ ? ಅವು ಯಾವುವು ಎಂಬುದನ್ನು ಕುರಿತ ಪುಸ್ತಕ ಇದು.





**ನಮ್ಮ ಆಹಾರ ಹೇಗಿರಬೇಕು ?** — *ಡಾ॥ ನಾ. ಸೋಮೇಶ್ವರ*

'ಊಟ ಬಲ್ಲವನಿಗೆ ರೋಗವಿಲ್ಲ' ಅನ್ನುವ ಮಾತಿದೆ. ಆರೋಗ್ಯವಂತರಾಗಿರಲು ಉತ್ತಮ, ಹಿತಮಿತ ಆಹಾರ ಸೇವನೆ ಅಗತ್ಯ. ಯಾವುದನ್ನು ತಿನ್ನಬೇಕು ? ಯಾವುದನ್ನು ಬಿಡಬೇಕು ಎನ್ನುವ ಪರಿಜ್ಞಾನವಿಲ್ಲದಿದ್ದರೆ, ಸಿಕ್ಕಿದ್ದನ್ನು ಮುಕ್ಕಿದರೆ ದೇಹ ರೋಗದ ಗೂಡಾಗುತ್ತದೆ. ಹಾಗಾದರೆ ನಮ್ಮ ಆಹಾರ ಹೇಗಿರಬೇಕು ? ಸೇವನೆಯ ಮಧ್ಯೆ ಇರಬೇಕಾದ ಕಾಲದ ಅಂತರ ಎಷ್ಟು ? ಸಮತೂಕದ ಆಹಾರವೆಂದರೇನು ? ಯಾವ ಆಹಾರ ನಮಗೆ ಒಳ್ಳೆಯದು ? ಓದಿ ನೋಡಿ.

*ಡಾ॥ ಜಾನಕಿ ಸುಂದರೇಶ್* — **ನೀವು ಚೆನ್ನಾಗಿ ಆಲೋಚಿಸಬಲ್ಲಿರಾ ?**

ಪ್ರತಿಯೊಂದು ಮನಸ್ಸು ಸಕಾರಾತ್ಮಕವಾಗಿ, ಸೃಜನಶೀಲವಾಗಿ ಆಲೋಚಿಸಲು ಕಲಿಯಬೇಕು. ಇದರಿಂದ ಜೀವನ, ಸಮಾಜ ಮತ್ತಷ್ಟು ಸಹ್ಯವಾಗಿ ಹೊಸ ಆವಿಷ್ಕಾರಗಳಿಗೆ ನಾಂದಿಯಾಗುತ್ತದೆ. ಇಂತಹ ಆರೋಗ್ಯಪೂರ್ಣ ಆಲೋಚನೆಗಳು ಯಾವುವು ? ನಕಾರಾತ್ಮಕ ಆಲೋಚನೆಗಳ ನಿವಾರಣೆ ಹೇಗೆ ? ಚೆನ್ನಾಗಿ ಆಲೋಚಿಸಲು ಬಯಸುತ್ತೀರಾ ? ಈ ಕೃತಿ ಓದಿ.






ಆಯಾ ಕ್ಷೇತ್ರಗಳಲ್ಲಿ ಅನುಭವಿಗಳಾದ, ಸಮರ್ಥ ಲೇಖಕರು ರಚಿಸಿರುವ 12 ಕೃತಿಗಳು – ಖ್ಯಾತ ಚಿತ್ರಕಾರರ ಸಂದರ್ಭೋಚಿತ ಚಿತ್ರಗಳ ಸಹಿತ.

ತಲಾ ರೂ. 40 ಬೆಲೆಯ,
ರೂ. 480 ಮೌಲ್ಯದ ಪುಸ್ತಕಗಳು
ಪ್ರಕಟಣಪೂರ್ವ ರಿಯಾಯಿತಿ
ಬೆಲೆ ರೂ. 350ಕ್ಕೆ ಲಭ್ಯ !

ಅನಾವರಣ ದಿನಾಂಕದ ನಂತರ ಈ ರಿಯಾಯಿತಿ ಲಭ್ಯವಿಲ್ಲ

## ವ್ಯಕ್ತಿ ವಿಕಸನ ಮಾಲ



ಸಂಪಾದಕರು
ಡಾ॥ ಸಿ. ಆರ್. ಚಂದ್ರಶೇಖರ್

# ಪ್ರಕಾಶನದ ಹೆಮ್ಮೆಯ ಕೊಡುಗೆ



**ನೀವು ಯಶಸ್ವೀ ಗೃಹಿಣಿಯೇ ?** — *ಶಾಂತಾ ನಾಗರಾಜ್*

'ಹೆಣ್ಣು ಮನೆಯ ಕಣ್ಣು' ಎಂಬುದೊಂದು ಮಾತಿದೆ. ಸಂಸಾರ ಸುಸೂತ್ರವಾಗಿ ಸಾಗಲು ಅವಳ ಕೊಡುಗೆ ಅಪಾರ. ಆದರೆ ಹಲವು ಒತ್ತಡಗಳ ನಡುವೆ ಸಿಕ್ಕ ಗೃಹಿಣಿ ಮನಸ್ಸಿನ ಸ್ಥಿಮಿತತೆ ಕಳೆದುಕೊಂಡು ಒದ್ದಾಡಬೇಕಾದ ಸಂದರ್ಭಗಳು ಉಂಟಾಗಬಹುದು. ಅಂಥ ಒದ್ದಾಟದಿಂದ ಹೊರಬಂದು ಯಶಸ್ವಿ ಗೃಹಿಣಿಯಾಗಲು ಬಯಸಿದ್ದೀರಾ ? ಈ ಕೃತಿ ಓದಿ.



*ಡಾ|| ಕೆ. ಆರ್. ಶ್ರೀಧರ್* — **ವೃದ್ಧಾಪ್ಯವನ್ನು ನಿಭಾಯಿಸುವುದು ಹೇಗೆ ?**

ವೃದ್ಧಾಪ್ಯವನ್ನು ಗೆದ್ದವರಾರ್‍ದ್ದೀಳೆ ? ಅದೊಂದು ಸಹಜ ಕ್ರಿಯೆ. ಆದರೆ ಅದರೊಳಗೆ ಸಿಕ್ಕಿ ನೋವಿನಿಂದ ನರಳುವವರೇ ಹೆಚ್ಚು. ಮುದಿತನ ಶಾಪವಲ್ಲ, ವ್ಯಕ್ತಿಯ ಜೀವನದಲ್ಲಿ ಅದೊಂದು ಅವಸ್ಥೆ. ವೃದ್ಧಾಪ್ಯವನ್ನು ಸಹ್ಯವಾಗಿಸಿಕೊಂಡು, ಜೀವನದ ಅಂತ್ಯಕಾಲವನ್ನು ಸುಖಮಯವಾಗಿಸಿಕೊಂಡು ಚಟುವಟಿಕೆಯಿಂದಿರುವ ನಿಟ್ಟಿನಲ್ಲಿ ಈ ಕೃತಿ ಅತ್ಯುಪಯುಕ್ತ.



**ಲೈಂಗಿಕ ಚಿಕಿತ್ಸೆ ನೈಜ ಪ್ರಕರಣಗಳು** — *ಡಾ|| ವಿನೋದ್ ಛೆಬ್ಬಿ*

ಆರೋಗ್ಯಕರ ಲೈಂಗಿಕ ಜೀವನ ಸುಖ ಸಂಸಾರಕ್ಕೆ ಭದ್ರ ಬುನಾದಿ. ಸಮಾಜದ ಸ್ವಾಸ್ಥ್ಯಕ್ಕೂ ಸಹಾಯಕ. ಕೆಲವೊಮ್ಮೆ ಇದು ಸಾಧ್ಯವಾಗದೆ ಹೋಗಬಹುದು. ಆಗ ತಜ್ಞರ ಸಲಹೆ, ಚಿಕಿತ್ಸೆ ಅಗತ್ಯವಾಗಬಹುದು. ಸಮಸ್ಯೆಗಳು ತಲೆದೋರಿದಾಗ ವೈದ್ಯರ ಸಲಹೆ ಚಿಕಿತ್ಸೆ ಪಡೆಯಲು ಸಂಕೋಚಪಡಬಾರದು. ಇಂಥ ಹಲವು ನೈಜ ಪ್ರಕರಣಗಳನ್ನು ವಿವರಿಸುವ ಕೃತಿ ಇದು.



*ಅರವಿಂದ ಚೊಕ್ಕಾಡಿ* — **ಪರೀಕ್ಷೆಯನ್ನು ಯಶಸ್ವಿಯಾಗಿ ಎದುರಿಸುವುದು ಹೇಗೆ ?**

ಪರೀಕ್ಷೆ ಮಕ್ಕಳಿಗೆ ಪೆಡಂಭೂತದಂತೆ ಕಾಡುತ್ತದೆ. ಅದು ಬಂತೆಂದರೆ ಇನ್ನಿಲ್ಲದ ಆತಂಕ, ಭಯ ಆವರಿಸಿ ಮನಸ್ಸು ಖಿನ್ನವಾಗುತ್ತದೆ. ಅಂತಹ ಪರೀಕ್ಷೆಯನ್ನು ಯಶಸ್ವಿಯಾಗಿ ನಿಭಾಯಿಸುವುದು ಹೇಗೆ ? ಶಿಕ್ಷಕರು, ಹೆತ್ತವರು ಯಾವ ರೀತಿಯಲ್ಲಿ ಈ ಪರೀಕ್ಷಾ ಭೀತಿಯನ್ನು ನಿವಾರಿಸಲು ಸಹಾಯಕವಾಗಬಹುದು ? ಹಲವು ಸಲಹೆಗಳಿರುವ ಇದನ್ನು ಓದಿ.



**ಮಕ್ಕಳಲ್ಲಿ ಸೃಜನಶೀಲತೆಯನ್ನು ವೃದ್ಧಿಸುವುದು ಹೇಗೆ ?** — *ಡಾ|| ಕಿಕ್ಕೇರಿ ವೀರನಾರಾಯಣ*

ಮಕ್ಕಳ ಮನಸ್ಸು ಸದಾ ಹೊಸತನಕ್ಕೆ ತುಡಿಯುತ್ತಾ ಕ್ರಿಯಾಶೀಲವಾಗಿರುವಂಥದು. ಅಂತಹ ಮನಸ್ಸುಗಳಿಗೆ ನಾವು ಬರೀ ಓದು ಬರೆಹವನ್ನಷ್ಟೆ ಹಚ್ಚಿದರೆ ಅವು ಏಕತಾನತೆಯಿಂದ ನರಳುತ್ತವೆ. ಓದಿನ ಜೊತೆ ಜೊತೆಗೆ ಸೃಜನಶೀಲ ಮಾಧ್ಯಮಗಳಲ್ಲೂ ಅವರನ್ನು ತೊಡಗಿಸಿಕೊಳ್ಳುವ ಸಹೃದಯತೆ ಇರಬೇಕು. ಯಾವುವು ಆ ಸೃಜನಶೀಲ ಮಾಧ್ಯಮಗಳು ? ಪುಸ್ತಕ ಓದಿ.



*ಅರವಿಂದ ಚೊಕ್ಕಾಡಿ* — **ಯಶಸ್ವೀ ಶಿಕ್ಷಕರಾಗುವುದು ಹೇಗೆ ?**

'ಶಿಕ್ಷಕರು ನಾಳಿನ ಯಶಸ್ವೀ ಪ್ರಜೆಗಳ ರೂವಾರಿಗಳು' ಎನ್ನುವ ಮಾತಿದೆ. ತಿದ್ದಿ, ತೀಡಿ, ಅವರನ್ನು ಪ್ರೋತ್ಸಾಹಿಸಿ ಅವರ ಬುದ್ಧಿಯನ್ನು ಸೌಜನ್ಯದಿಂದ ಒರೆಹಚ್ಚುವ ಗುಣ ಶಿಕ್ಷಕರಲ್ಲಿರಬೇಕು. ಎಳವೆಯಲ್ಲೆ ಕುಡಿ ಚಿವುಟಿ ಹಾಳುಗೆಡವಬಾರದು. ಹಾಗಾದರೆ ಯಶಸ್ವೀ ಶಿಕ್ಷಕರಾಗಲು ಏನು ಮಾಡಬೇಕೆನ್ನುತ್ತೀರ ? ಇಲ್ಲಿವೆ ನೋಡಿ ಅಂತಹ ಹಲವು ಸರಳ ಸೂತ್ರಗಳು.

ರಿಯಾಯಿತಿ ಬೆಲೆ ಜೊತೆಗೆ ಅಂಚೆ ವೆಚ್ಚ ರೂ. 30 ಸೇರಿಸಿ ನಮಗೆ ಎಂ.ಓ/ಡಿ.ಡಿ. ಕಳಿಸಿ




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**

1, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ 5159, ಕುಮಾರ ಪಾರ್ಕ್ ಪೂರ್ವ
ಬೆಂಗಳೂರು - 560 001 ದೂರವಾಣಿ/ಫ್ಯಾಕ್ಸ್ : 22203580/81/82
e-mail : nkp@bgl.vsnl.net.in website : www.navakarnatakabooks.com

ಶಾಖೆಗಳು

ಗಾಂಧಿನಗರ, ಬೆಂಗಳೂರು - 560 009
✆ 22251382

ಕೆ. ಎಸ್. ರಾವ್ ರಸ್ತೆ, ಮಂಗಳೂರು - 575 001
✆ 2441016

ರಾಮಸ್ವಾಮಿ ವೃತ್ತ, ಮೈಸೂರು - 570 024
✆ 2424094

ಸ್ಟೇಷನ್ ರಸ್ತೆ, ಗುಲ್ಬರ್ಗಾ - 585 102
✆ 224302



ಬಂಧಿ



ಆಲೋಚನೆ

# ಗ್ರಾಮೀಣ ಬದುಕಿನ ಪ್ರತಿಭಾನ್ವಿತ ಕಲಾವಿದ



ಅನಿಲ್‌ಕುಮಾರ್ ಹೆಚ್. ಪಿ.

''ನೋಡಿ ಕಲಿ ಮಾಡಿ ತಿಳಿ'' ಎಂಬಂತೆ ಯಾವುದೇ ವ್ಯಕ್ತಿಯಾಗಲಿ ತನ್ನಲ್ಲಿ ಅಡಗಿರುವ ಪ್ರತಿಭೆಯನ್ನು ಹೊರ ಸೂಸಲು ಕಲೆ ತುಂಬಾ ಮುಖ್ಯವಾದುದು. ಕಲೆ ಎಲ್ಲರಲ್ಲಿಯೂ ಇದೆ, ಆದರೆ ಅದನ್ನು ಸರಿಯಾದ ರೀತಿಯಲ್ಲಿ ಬಳಸಿಕೊಂಡಾಗ ಮಾತ್ರ ವಿಕಸನ ಹೊಂದಲು ಸಾಧ್ಯ. ಆ ದಿಸೆಯಲ್ಲಿ ಗ್ರಾಮೀಣ ಬದುಕಿನಲ್ಲಿ ಹುಟ್ಟಿ ಉನ್ನತ ಮಟ್ಟಕ್ಕೆ ಏರಿದ ಪ್ರತಿಭಾನ್ವಿತ ಕಲಾವಿದ ಅನಿಲ್‌ಕುಮಾರ್ ಹೆಚ್. ಪಿ.

ತಮ್ಮ ಸ್ವಗ್ರಾಮದಲ್ಲಿ ಮಾಧ್ಯಮಿಕ ಶಾಲೆಯವರೆಗೆ ವ್ಯಾಸಂಗ ಮಾಡಿ ಪ್ರೌಢ ಶಿಕ್ಷಣ ಮತ್ತು ಪಿ.ಯು.ಸಿ.ಯನ್ನು ಪಾಂಡವಪುರ ವಿಜಯ ಪದವಿಪೂರ್ವ ಕಾಲೇಜಿನಲ್ಲಿ ಮುಗಿಸಿದ ಅನಿಲ್‌ಕುಮಾರ್ ''ಬಾಲ್ಯದಂತೆ ಭವಿಷ್ಯ'' ಎಂಬಂತೆ ಬಾಲ್ಯದಿಂದಲೇ ಚಿತ್ರಗಳನ್ನು ಬಿಡಿಸುವುದನ್ನು ರೂಢಿಸಿಕೊಂಡಿದ್ದರು. ಮಂಡ್ಯದ ಜೈಭಾರತ ಚಿತ್ರಕಲಾ ವಿದ್ಯಾಲಯದಲ್ಲಿ ಅಭ್ಯಾಸ ಮಾಡಿದ ಇವರು ಇಲ್ಲಿ ಮೂರು ವರ್ಷದ ಡಿ.ಎಂ.ಸಿ. ಡ್ರಾಯಿಂಗ್ ಮಾಸ್ಟರ್ ಕೋರ್ಸ್ ಮುಗಿಸಿ ಅಲ್ಲಿಂದ ಉನ್ನತ ಶಿಕ್ಷಣ ಪಡೆಯಲು ಮೈಸೂರಿನ ಶ್ರೀಕಲಾನಿಕೇತನ ಶಾಲೆ ಸೇರಿ ಮಾಸ್ಟರ್ ಆಫ್ ಡ್ರಾಯಿಂಗ್ ಮತ್ತು ಪೇಯಿಂಟಿಂಗ್ ಕೋರ್ಸ್ ಮುಗಿಸಿ ಕಲೆಯಲ್ಲಿ ಪರಿಪೂರ್ಣತೆ ಪಡೆದರು.

ನೈಜ ಕಲೆ ಇಷ್ಟವೆನ್ನುವ ಅನಿಲ್‌ಕುಮಾರ್ ಹಲವು ಶಿಬಿರಗಳಲ್ಲಿ, ಕಲಾಗೋಷ್ಠಿಗಳಲ್ಲಿ ಭಾಗವಹಿಸಿದ್ದು ಕರ್ನಾಟಕ ಲಲಿತಕಲಾ ಅಕಾಡೆಮಿಯಿಂದ ಭಿತ್ತಿಚಿತ್ರಕ್ಕೆ ಬಹುಮಾನ ಪಡೆದಿದ್ದಾರೆ. ಪಾಂಡವಪುರದ ಪ್ರಸೂ ಆರ್ಟ್ಸ್ ಕ್ರಿಯೇಷನ್ಸ್ ಬಳಗದ ಸಕ್ರಿಯ ಸದಸ್ಯರಾಗಿದ್ದಾರೆ.

ಮೈಸೂರಿನ ''ವೆಲ್ಲಿಂಗ್‌ಟನ್ ಆರ್ಟ್ ಗ್ಯಾಲರಿ''ಯಲ್ಲಿ ಮೂರು ದಿನಗಳ ಕಾಲ ಇವರು ''ರೇಖಾ ಚಿತ್ರ ಪ್ರದರ್ಶನ'' ನೀಡಿ ಮೆಚ್ಚುಗೆ ಪಡೆದಿದ್ದಾರೆ.

ಮಾರುತಿ ನಿಲಯ, ಶಾಂತಿನಗರ, ಪಾಂಡವಪುರ - ೫೭೧ ೪೩೪



ಮನೋಭಾವನೆ

# ಧರ್ಮಗಳೆಂಬ ಮೂಢನಂಬಿಕೆಗಳಿಗಾಗಿ...

**ಪ್ರಪಂಚದ ಹೆಚ್ಚಿನ ಜನರು ಒಂದಲ್ಲ ಒಂದು ಧರ್ಮವನ್ನು ಒಪ್ಪಿಕೊಂಡಿರುವುದರಿಂದ ಅವುಗಳನ್ನು ಮೂಢನಂಬಿಕೆಗಳು ಎಂದು ಕರೆಯಲು ಯಾರೂ ತಯಾರಿಲ್ಲ. ಏಕೆಂದರೆ, ಒಂದು ನಂಬಿಕೆಯನ್ನು ಮೂಢನಂಬಿಕೆ ಎಂದೆನ್ನಬೇಕಾದರೆ ಆ ವ್ಯಕ್ತಿ ಆ ನಂಬಿಕೆಯಿಂದ ಹೊರಗಿರಬೇಕಾಗುತ್ತದೆ. ಧಾರ್ಮಿಕ ನಂಬಿಕೆಗಳಿಂದ ಹೊರಗಿರುವವರ ಸಂಖ್ಯೆ ತೀರಾ ಕಡಿಮೆ. ಅವರಿಗೆ ಧ್ವನಿಯೇ ಇಲ್ಲ. ಆದ್ದರಿಂದ ಧರ್ಮಗಳನ್ನು ಮೂಢನಂಬಿಕೆ ಎಂದರೆ ಯಾರೂ ಒಪ್ಪಲಾರರು. ಆ ನಿಟ್ಟಿನಲ್ಲಿ ಸಾಕಷ್ಟು ವೈಚಾರಿಕತೆ ಮತ್ತು ವೈಜ್ಞಾನಿಕತೆಗಳ ಅವಶ್ಯಕತೆ ಇದೆ.**

ಸೀತಾರಾಂ ಕುರುವರಿ

ಧರ್ಮ ಎಂದರೇನು ಎನ್ನುವ ಪ್ರಶ್ನೆಗೆ ಉತ್ತರಿಸುವುದು ಕಷ್ಟ. ಇಂಗ್ಲಿಷ್‌ನಲ್ಲಿ ರಿಲಿಜನ್ ಎಂದರೆ ಪಾರಭೌತಿಕ ಶಕ್ತಿಯ ಆಜ್ಞೆಯನ್ನು ನಂಬುವುದು ಎಂದರ್ಥ. ಅಂದರೆ ಇದು ಸಾಂಘಿಕ ಧರ್ಮಗಳ ಮೂಲ ಉದ್ದೇಶಗಳ ಆಧಾರದಲ್ಲಿ ಹೇಳುವ ಮಾತು. ಆದರೆ 'ಧರ್ಮ' ಎನ್ನುವ ಪದಕ್ಕೆ ಭಾರತೀಯ ಪರಿಭಾಷೆಯಲ್ಲಿ ಎರಡು ಅರ್ಥಗಳಿವೆ. ಒಂದು, 'ಧರ್ಮ' ಎಂದರೆ ಒಳ್ಳೆಯದು ಎನ್ನುವ ಅರ್ಥ. ಉದಾಹರಣೆಗೆ ಸಹಜಧರ್ಮ, ಮಾನವಧರ್ಮ ಇತ್ಯಾದಿ. ಎರಡನೆಯದು, ಪ್ರಪಂಚದಲ್ಲಿರುವ ವಿವಿಧ ಧರ್ಮಗಳ ಹೆಸರುಗಳನ್ನು ಸೂಚಿಸುವುದು. ಉದಾಹರಣೆಗೆ, ಹಿಂದೂ, ಕ್ರಿಶ್ಚಿಯನ್, ಇಸ್ಲಾಂ, ಬೌದ್ಧ, ಜೈನ, ಸಿಖ್ ಇತ್ಯಾದಿ ಸಾಂಘಿಕ ಧರ್ಮಗಳು. ಮೂಢನಂಬಿಕೆಗಳು ಎಂದು ಇಲ್ಲಿ ಹೇಳ ಹೊರಟಿರುವುದು ಈ ಸಾಂಘಿಕ ಧರ್ಮಗಳನ್ನು.

ಪ್ರಪಂಚದ ಹೆಚ್ಚಿನ ಜನರು ಒಂದಲ್ಲ ಒಂದು ಧರ್ಮವನ್ನು ಒಪ್ಪಿಕೊಂಡಿರುವುದರಿಂದ ಅವುಗಳನ್ನು ಮೂಢನಂಬಿಕೆಗಳು ಎಂದು ಕರೆಯಲು ಯಾರೂ ತಯಾರಿಲ್ಲ. ಏಕೆಂದರೆ, ಒಂದು ನಂಬಿಕೆಯನ್ನು ಮೂಢನಂಬಿಕೆ ಎಂದೆನ್ನಬೇಕಾದರೆ ಆ ವ್ಯಕ್ತಿ ಆ ನಂಬಿಕೆಯಿಂದ ಹೊರಗಿರಬೇಕಾಗುತ್ತದೆ. ಧಾರ್ಮಿಕ ನಂಬಿಕೆಗಳಿಂದ ಹೊರಗಿರುವವರ ಸಂಖ್ಯೆ ತೀರಾ ಕಡಿಮೆ. ಅವರಿಗೆ ಧ್ವನಿಯೇ ಇಲ್ಲ. ಆದ್ದರಿಂದ ಧರ್ಮಗಳನ್ನು ಮೂಢನಂಬಿಕೆ ಎಂದರೆ ಯಾರೂ ಒಪ್ಪಲಾರರು. ಆ ನಿಟ್ಟಿನಲ್ಲಿ ಸಾಕಷ್ಟು ವೈಚಾರಿಕತೆ ಮತ್ತು ವೈಜ್ಞಾನಿಕತೆಗಳ ಅವಶ್ಯಕತೆ ಇದೆ.

ಈಗ ಮೂಢನಂಬಿಕೆಗಳು ಎಂದು ಗುರುತಿಸಿ ನಿಷೇಧಿಸಿರುವ ಅನೇಕ ಆಚರಣೆಗಳು ಎಷ್ಟೇ ಸೀಮಿತ ವ್ಯಾಪ್ತಿಯನ್ನು ಹೊಂದಿದ್ದರೂ ಸಾವಿರಾರು ವರ್ಷಗಳವರೆಗೆ ಅವು ರೂಢಿಯಲ್ಲಿದ್ದವು. ಅವುಗಳನ್ನು ಆಚರಿಸುತ್ತಿದ್ದ ಜನರೇನೂ ಪ್ರಜ್ಞಾಪೂರ್ವಕವಾಗಿ ಅವನ್ನು ಕೈಬಿಡಲಿಲ್ಲ. ಉದಾಹರಣೆಗೆ, ಭಾರತದಲ್ಲಿದ್ದ ಸತಿ ಪದ್ಧತಿ, ಬಾಲ್ಯ ವಿವಾಹ, ದೇವದಾಸಿ, ಬೆತ್ತಲೆ ಸೇವೆ ಇತ್ಯಾದಿ. ಇವುಗಳನ್ನು ಆಚರಿಸುತ್ತಿದ್ದವರು ಯಾರೂ ಅವನ್ನು ತಪ್ಪು ಎಂದು ತಿಳಿದು ಹೊರಬರಲಿಲ್ಲ. ಇಂಗ್ಲಿಷ್ ಶಿಕ್ಷಣ, ವಿಜ್ಞಾನ, ವೈಚಾರಿಕತೆಗಳೆಲ್ಲ ಭಾರತದಲ್ಲಿ ಸಾಕಷ್ಟು ರೂಢಿಗತವಾದ ನಂತರವೇ ಸಾಮಾನ್ಯರು, ಸರ್ಕಾರಗಳು, ಮೂಢನಂಬಿಕೆಗಳನ್ನು ನಿಷೇಧಿಸಿದವು.

ಧರ್ಮಗಳನ್ನು ಮೂಢನಂಬಿಕೆಗಳು ಎಂದು ಯಾರೂ ಸಾಮಾನ್ಯವಾಗಿ ಹೇಳುತ್ತಿಲ್ಲ. ಏಕೆಂದರೆ ಅಂಥವರು ಧರ್ಮಗಳಿಂದ ಹೊರಬರಲಾಗಿಲ್ಲ. ಬೇಕಾದರೆ ಒಂದು ಧರ್ಮದವರು ಇನ್ನೊಂದು ಧರ್ಮವನ್ನು ಅಥವಾ ಧರ್ಮದ ಆಚರಣೆಯನ್ನು ಮೂಢನಂಬಿಕೆ ಎಂದು ಜರಿಯುವರು. ಸಹಜವಾಗಿಯೇ ತಮ್ಮದೇ ಆದ ಧರ್ಮವನ್ನು ಅಥವಾ ಧಾರ್ಮಿಕ ಆಚರಣೆಗಳನ್ನು ಮೂಢನಂಬಿಕೆ ಎಂದು ಒಪ್ಪಿಕೊಳ್ಳುವುದಿಲ್ಲ. ಮೂರ್ತಿಪೂಜೆ ಮಾಡುವ ಕ್ರಿಯೆಯನ್ನು ಕೇವಲ ಪ್ರಾರ್ಥನೆ ಮಾಡುವ ಧರ್ಮದವರು ಮೂಢನಂಬಿಕೆ ಎನ್ನುತ್ತಾರೆ.

ಮೂಢನಂಬಿಕೆ ಎಂದರೇನು ಎಂದು ತಿಳಿವ ಮೊದಲು ನಂಬಿಕೆ ಎಂದರೇನು ಎಂದು ತಿಳಿಯುವುದೊಳ್ಳೆಯದು. ನಂಬುವುದು ಎಂದರೆ ಒಪ್ಪಿಕೊಳ್ಳುವುದು ಎಂದು ಹೇಳಬಹುದು. ಒಂದು ಪ್ರದೇಶದ ಅಥವಾ ಸಮಾಜದ ಬೌದ್ಧಿಕ ಒಪ್ಪಂದವನ್ನೂ ನಂಬಿಕೆ ಎನ್ನಬಹುದು. ಅನೇಕ ಸಾಮಾಜಿಕ ಆಚರಣೆಗಳು ಧರ್ಮಗಳಲ್ಲಿನ ನಂಬಿಕೆಗಳೇ.

ಮೂಢನಂಬಿಕೆಗೆ ಉದಾಹರಣೆಗಳನ್ನು ಕೊಡಬಹುದು, ಆದರೆ ವ್ಯಾಖ್ಯಾನಿಸುವುದು ಸ್ವಲ್ಪ ಕಷ್ಟ. ಹೀಗೆ ಹೇಳಬಹುದೇನೋ: ಮೂಢನಂಬಿಕೆಯೆಂದರೆ ಅದು ಒಂದು 'ವೈಜ್ಞಾನಿಕ ಆಧಾರವಿಲ್ಲದ, ಜಗತ್ತಿನ ಹಿತಕ್ಕೆ ಧಕ್ಕೆ ಉಂಟುಮಾಡುತ್ತಿರುವ, ಅವಶ್ಯಕವಲ್ಲದ ಆಚರಣೆ ಅಥವಾ ನಂಬಿಕೆ.' ಒಂದು ನಂಬಿಕೆ ಮೂಢನಂಬಿಕೆಯಾಗುವ ಕ್ರಿಯೆ ಬಹಳ ಮಹತ್ವದ್ದು. ನಂಬಿಕೆ ಮೂಢನಂಬಿಕೆಯಾಗುವ ಎನ್ನುವುದಕ್ಕಿಂತ ಒಂದು ನಂಬಿಕೆಯನ್ನು ಮೂಢನಂಬಿಕೆ ಎಂದು ಗುರುತಿಸುವ ಕ್ರಿಯೆ ಬಹುಮುಖೀ. ಏಕೆಂದರೆ, ನಂಬಿಕೆ ತಾನಾಗಿಯೇ ಮೂಢನಂಬಿಕೆಯಾಗುವುದಿಲ್ಲ, ಜ್ಞಾನ ಪ್ರಪಂಚ ಒಂದು ನಂಬಿಕೆಯನ್ನು ಮೂಢನಂಬಿಕೆ ಎಂದು ಗುರುತಿಸುತ್ತದೆ. ಸಮಾಜದಲ್ಲಿ ಬೆಳೆಯುತ್ತಿರುವ ಜ್ಞಾನದ ಜೊತೆಗೆ ಬೆರೆತು ಬದಲಾಗದ ಒಂದು ನಂಬಿಕೆ ಬೇಗ ಮೂಢನಂಬಿಕೆಯಾಗುತ್ತದೆ. ಆದರೆ ಜ್ಞಾನದ ಜೊತೆಗೆ ಸ್ವಲ್ಪಮಟ್ಟಿಗೆ ಬೆರೆತು ಬದಲಾಗುವ ನಂಬಿಕೆಗಳು ತಕ್ಷಣ ಮೂಢನಂಬಿಕೆಗಳು ಎನ್ನಿಸಿಕೊಳ್ಳುವುದಿಲ್ಲ. ಧರ್ಮಗಳು ಕೂಡ ಈ ಗುಂಪಿಗೆ ಸೇರಿದವು. ಜ್ಞಾನದ ಜೊತೆಗೆ ಅಲ್ಪಸ್ವಲ್ಪ ಬದಲಾಗುತ್ತಿರುವುದರಿಂದ ಧರ್ಮಗಳನ್ನು ಇನ್ನೂ ಮೂಢನಂಬಿಕೆಗಳ ಗುಂಪಿಗೆ ಸೇರಿಸಿಲ್ಲ.

### ಧರ್ಮಗಳನ್ನು ಮೂಢನಂಬಿಕೆ ಎಂದು ನಿರ್ಧರಿಸುವ ಅಂಶಗಳು

ಇಪ್ಪತ್ತೊಂದನೆ ಶತಮಾನದಲ್ಲಿರುವ ನಾವು ಧರ್ಮಗಳಿಂದ ಒಂದು ಕ್ಷಣ ಹೊರಗೆ ನಿಂತು ಯೋಚಿಸಿದರೆ ಧರ್ಮಗಳನ್ನು ಮೂಢನಂಬಿಕೆಗಳು ಎಂದು ಹೇಳಲು ಕಷ್ಟವಾಗಲಾರದು. ಈಗಾಗಲೇ ಗುರುತಿಸಿರುವ ಮೂಢನಂಬಿಕೆಗಳಿಗೆ ಕೊಡುವ ವ್ಯಾಖ್ಯಾನವನ್ನು ಧರ್ಮಕ್ಕೆ ಕೊಟ್ಟರೆ ಸರಿ. ಯಾವುದೇ ಒಂದು ಮೂಢನಂಬಿಕೆ ಜಾಗದಲ್ಲಿ ಧರ್ಮವನ್ನಿಟ್ಟು ನೋಡಿದರೆ ಇದು ಸ್ಪಷ್ಟವಾಗುತ್ತದೆ. ಉದಾಹರಣೆಗೆ, ಬೆತ್ತಲೆ ಸೇವೆ, ದೇವದಾಸಿ ಪದ್ಧತಿಗಳ ಆಶಯಗಳೂ ಧರ್ಮಗಳ ಆಶಯಗಳ ಹಾಗೆ ದೇವರನ್ನು ತೃಪ್ತಿಪಡಿಸುವುದು. ದೇವರು ತಮಗೆ ಸುಖವನ್ನು ನೀಡಲಿ ಎಂದು ಕೆಲವು ಧರ್ಮಾನುಯಾಯಿಗಳು ಪ್ರಾರ್ಥಿಸುತ್ತಾರೆ. ಮತ್ತೆ ಕೆಲವರು ಪೂಜಿಸುತ್ತಾರೆ, ಹರಕೆ ಹೊರುತ್ತಾರೆ, ಎದೆ ಬಡಿದುಕೊಳ್ಳುತ್ತಾರೆ, ಉರುಳುಸೇವೆ ಮಾಡುತ್ತಾರೆ ಇತ್ಯಾದಿ. ಹಾಗೆಯೇ ಬೆತ್ತಲೆ ಸೇವೆ, ದೇವದಾಸಿ, ಸತಿ ಪದ್ಧತಿಗಳು ಕೂಡ ತಮ್ಮ ಕಷ್ಟಗಳು ಪರಿಹಾರವಾಗಲೆಂದು ಚಂದ್ರಗುತ್ತಿ ರೇಣುಕಮ್ಮಗೆ ಹರಕೆ ಹೊತ್ತವರೆ ಬೆತ್ತಲೆ ಸೇವೆ ಮಾಡಿದವರು. ಎಲ್ಲಮ್ಮನ ಇಷ್ಟಾರ್ಥ ಪೂರೈಕೆಗಾಗಿ ದೇವದಾಸಿಯರಾಗುತ್ತಾರೆ. ಗಂಡನೇ ದೇವರು, ಗಂಡನ ಸುಖಕ್ಕಾಗಿ ಹೆಂಡತಿ, ಎಂದು ಹೇಳುವ ಒಂದು ಸಮಾಜದಲ್ಲಿ ಗಂಡನಿಗೆ (ಅಂದರೆ ದೇವರಿಗೆ) ಅರ್ಪಿಸಿದ ಒಂದು ಹೆಣ್ಣು (ಹೆಂಡತಿ) ಗಂಡ ಸತ್ತ ಮೇಲೆ ತಾನು ಬೇರೆಯವರ ಜೊತೆಗೂಡಿ ಬಾಳಬಾರದು. ತನ್ನನ್ನು ದೇವರಿಗೆ ಅರ್ಪಿಸಿಕೊಳ್ಳಬೇಕು ಎಂದು ವಿಧವೆ ಸತಿ ಹೋಗುತ್ತಿದ್ದಳು. ಗಂಡ ಎನ್ನುವ 'ದೇವರಿಗೆ' ಅರ್ಪಿತವಾದ ಹೆಣ್ಣನ್ನು ಹಾಗೆಯೇ ಉಳಿಸಬೇಕು ಎನ್ನುವ ಕಾರಣಕ್ಕೆ ವಿಧವಾಪದ್ಧತಿ ಆಚರಣೆಯಲ್ಲಿತ್ತು. ಇದು ಸುಧಾರಣೆಗೊಂಡ ಸತಿಪದ್ಧತಿ. ಈಗ ೨೧ನೇ ಶತಮಾನದಲ್ಲಿ ಕೂಡ ಗಂಡ ಎಂದರೆ ದೇವರು, ಹೆಂಡತಿ ಎಂದರೆ ಆ ದೇವರ 'ಸುಖ'ಕ್ಕಾಗಿ ಇರುವ ಒಂದು 'ವಸ್ತು' ಅಥವಾ ಸೇವಕಿ ಎಂದು ಹೇಳುವ ಮತ್ತು ಆಚರಿಸುವ ಅನೇಕ ಧರ್ಮಗಳು ಸಮಾಜಗಳು ಇರುವುದು ಹೆಣ್ಣಿನ ದುರ್ದೈವವೇ ಸರಿ.

### ದೇವರ ಕಲ್ಪನೆ ಮೂಢನಂಬಿಕೆಗಳ ಮೂಲ

ನಿಸರ್ಗ (ಸೃಷ್ಟಿ) ನಮಗೆ ಅರ್ಥವಾಗಿರುವುದು ತೀರಾ ಕಡಿಮೆ. ನಮಗೆ ಅರ್ಥವಾದದ್ದಷ್ಟನ್ನೆ ಗಮನಿಸಿದರೆ ಅನೇಕ ವೈಚಿತ್ರ್ಯಗಳು, ಅದ್ಭುತಗಳು, ವೈಶಿಷ್ಟ್ಯಗಳು ನಮ್ಮನ್ನು ಬೆರಗುಗೊಳಿಸುತ್ತವೆ. ಸಾವಿನ ಬಗೆಗಿರುವ ಭಯದ ಮೂಲವೂ ಇಲ್ಲಿದೆ. ಬೌದ್ಧಿಕ ಕಲ್ಪನೆಯ ಮಟ್ಟದಲ್ಲಿ ಸ್ವಲ್ಪ ಮುಂದುವರೆದಿದ್ದ ಮಾನವನಿಗೆ ಸಾವಿನ ಭಯ ಹಲವು ಬಿರುಕುಗಳನ್ನು ಸೃಷ್ಟಿಸಿತು. ಬಹಳ ಹಿಂದೆ ನಿಸರ್ಗವು ಗೂಢವೆನಿಸಿದ್ದ ಕಾಲದಲ್ಲಿ (ಈಗಲೂ ಅರ್ಥವಾಗದಿರುವುದು ಬೇರೆ ಮಾತು) ನಿಸರ್ಗದ ಆಗುಹೋಗುಗಳ ಬಗ್ಗೆ ಭಯ

ಗೊಂಡ ನೈಸರ್ಗಿಕ ನಿಯಮಗಳು, ಹಗಲು-ರಾತ್ರಿ, ಕಾಲಗಳು, ಮಳೆ, ಗಾಳಿ, ಬಿಸಿಲು ಯಾವುದೂ ಅರ್ಥವಾಗಿರಲಿಲ್ಲ. ಪ್ರಾಕೃತಿಕ ವಿಕೋಪ, ಹುಟ್ಟು, ಸಾವು ಇತ್ಯಾದಿಗಳಿಗೆ ಕಾರಣಗಳಾಗಲಿ ಪರಿಹಾರಗಳಾಗಲಿ ಸಿಗಲಿಲ್ಲ. ಹೀಗೆ ಭೀತಿಗೊಂಡ ಮನುಷ್ಯನ ಕಲ್ಪನೆಯಲ್ಲಿ ದೇವರ ಸೃಷ್ಟಿಯಾಯಿತು. ಹಾಗಾಗಿ ನಮ್ಮಲ್ಲಿ ದೇವರಿಲ್ಲದಿದ್ದರೂ ದೇವರ ಕಲ್ಪನೆ ಇದೆ.

ಆರಂಭದಲ್ಲಿ ಮಾನವ ನಿಸರ್ಗವನ್ನೇ ದೇವರು ಎಂದು ಪೂಜಿಸಿದ. ನಿಸರ್ಗ ನಿಗೂಢವಾಗೇ ಉಳಿದಿದ್ದರಿಂದ ಭಯ, ಆತಂಕಗಳು ಹೆಚ್ಚುತ್ತಲೇ ಹೋದವು. ಆ ಸಂದರ್ಭದಲ್ಲಿ ನಮ್ಮ ಬದುಕನ್ನು ನಿಯಂತ್ರಿಸುವ ಯಾವುದೋ ಪಾರಭೌತಿಕ ಶಕ್ತಿಯಿದೆ ಎಂದು ಭ್ರಮಿಸಿದ. ಈ ಭ್ರಾಮಿಕ ಜಗತ್ತಿನಿಂದ ಮನುಷ್ಯ ದೇವರ ಕಲ್ಪನೆಯತ್ತ ಹೆಜ್ಜೆ ಇಟ್ಟ. ವೈಜ್ಞಾನಿಕ ಚಿಂತನೆ ಸಾಕಷ್ಟು ಬೆಳೆಯದೆ ನಿಸರ್ಗವು ಅರ್ಥವಾಗದಿದ್ದಾಗ ಹುಟ್ಟಿಕೊಂಡ ಈ ಕಲ್ಪನೆ ಈಗಲೂ ಅಸ್ತಿತ್ವ ಉಳಿಸಿಕೊಂಡಿರುವುದು ಮನುಷ್ಯನ ಜ್ಞಾನಕ್ಕೆ ಹಿಡಿದ ಗ್ರಹಣವೇ ಸರಿ. ಇದಕ್ಕೆ ಕಾರಣ ದೇವರ ಕಲ್ಪನೆಯ ಸೃಷ್ಟಿಗೆ ಕಾರಣವಾದ ಸಾವಿನ ಭಯ ಇನ್ನೂ ಮನುಷ್ಯನನ್ನು ಕಾಡುತ್ತಿರುವುದು. ಹಾಗೆಯೆ ನಿಸರ್ಗ ನಿಗೂಢವೆನಿಸಿ ಅರ್ಥವಾಗದೇ ಇರುವುದು. ಜಗತ್ತಿನ ಅತ್ಯಂತ ದೊಡ್ಡ ಮೂಢನಂಬಿಕೆ ಎಂದು ಹೇಳಬಹುದಾದ ದೇವರ ಹಿನ್ನೆಲೆಯಲ್ಲಿ ಅನೇಕ ಮೂಢನಂಬಿಕೆಗಳು ಇನ್ನೂ ಜೀವಂತವಾಗಿವೆ. ಅಂತಹ ಮೂಢನಂಬಿಕೆಗಳಲ್ಲಿ ಧರ್ಮಗಳು ಅತ್ಯಂತ ಪ್ರಮುಖವಾದವುಗಳು.

### ಧರ್ಮಗಳ ಹುಟ್ಟು

ಮನುಷ್ಯ ದೇವರನ್ನು ಸೃಷ್ಟಿಸಿ ನಿಸರ್ಗವನ್ನು ಪೂಜಿಸಿದ, ಪಾರಭೌತಿಕ ಶಕ್ತಿಯನ್ನು ಪೂಜಿಸಿದ, ಸಮಸ್ಯೆಗಳು ಮಾತ್ರ ಪರಿಹಾರವಾಗಲಿಲ್ಲ. ಜನರು ಚಿಕ್ಕ ಚಿಕ್ಕ ಗುಂಪು, ಪಂಗಡಗಳಾಗಿ ತಮ್ಮ ತಮ್ಮ ನಂಬುಗೆಗಳಿಗೆ ಜೋತುಬಿದ್ದಿದ್ದರು. ಅನೇಕ ಶ್ರೇಷ್ಠ ವಿಚಾರವಂತರು ಹುಟ್ಟಿದರು. ಬುದ್ಧ, ಮಹಾವೀರ, ಏಸು ಕ್ರಿಸ್ತ, ಮಹಮದ್ ಪೈಗಂಬರ್ ಮತ್ತು ಇತರರು ಲೋಕಕಲ್ಯಾಣಕ್ಕಾಗಿ ಶ್ರಮಿಸಿದರು. ಅಂಧಕಾರದಲ್ಲಿ ನರಳುತ್ತಿದ್ದ ತಮ್ಮ ಸುತ್ತಲಿನವರಿಗೆ ಜ್ಞಾನದ ಬೆಳಕನ್ನು ಚೆಲ್ಲಿದರು. ಆ ನಿಟ್ಟಿನಲ್ಲೇ ಅನೇಕ ಪಂಥಗಳು ಹುಟ್ಟಿಕೊಂಡು ಸಮಾಜದ ಪಾಲನೆ ಪೋಷಣೆಗೆ ಅನೇಕ ನಿಯಮಗಳನ್ನು ತಂದರು. ಆ ಶ್ರೇಷ್ಠರು ಹೇಳಿದ ಮಾತುಗಳು ಜ್ಞಾನದ ಮೆಟ್ಟಿಲುಗಳಾಗಬೇಕಿತ್ತು. ಆದರೆ ಜ್ಞಾನದ ಅಂತಿಮರೂಪವೆಂದರೆ ಅದರ ಮುಂದೆ ಇತರ ಸತ್ಯಗಳೇ ಇಲ್ಲ ಎಂದು ವಾದಿಸುವ ಇನ್ನೊಂದು ಅಂಧಕಾರಕ್ಕೆ ಜಗತ್ತನ್ನು ತಳ್ಳುವ ಮೂಲಕ ಧರ್ಮಗಳು ಹುಟ್ಟಿಕೊಂಡವು. ಈ ಧರ್ಮಗಳಿಗೆ ಆ ಶ್ರೇಷ್ಠರ ಹಿತನುಡಿಗಳಿಗಿಂತ ಅವುಗಳ ಪಾಲನೆ ಪೋಷಣೆಗಿಂತ ನಿಯಮಗಳೇ ಮುಖ್ಯವಾದವು. ಈ ನಿಯಮಗಳ ಆಚರಣೆಯೇ ಧರ್ಮಗಳೆನಿಸಿದವು.

ದೊಡ್ಡ ದುರಂತವೆಂದರೆ ಜಗತ್ತಿನಲ್ಲಿ ಅನೇಕ ಧರ್ಮಗಳು ಹುಟ್ಟಿಕೊಂಡಿರುವುದು. ಜಗತ್ತಿನಾದ್ಯಂತ ಸಂಪರ್ಕವಿಲ್ಲದೆ ತಮ್ಮ ಸುತ್ತಲಿನದು ಮಾತ್ರ ಪ್ರಪಂಚ ಎಂದು ತಿಳಿದುಕೊಂಡಿದ್ದ ಅಂದಿನ ಆ ಕಾಲದಲ್ಲಿ ಅದು ಅನಿವಾರ್ಯವಾಗಿತ್ತೇನೋ. ಜೊತೆಗೆ ಧರ್ಮಗಳಲ್ಲೇ ಆಂತರಿಕ ವೈರುಧ್ಯಗಳಿದ್ದವು. ದೇವರನ್ನು ಸೃಷ್ಟಿಸಿದರೂ ಸಮಸ್ಯೆಗಳು ಪರಿಹಾರವಾಗದೆ ಧರ್ಮಗಳು ಹುಟ್ಟಿದ ಹಾಗೆ, ಧರ್ಮಗಳು ಸೃಷ್ಟಿಯಾದರೂ ಸಮಸ್ಯೆಗಳು ಪರಿಹಾರವಾಗದೆ ಬೇರೆ ಬೇರೆ ಧರ್ಮಗಳು ದೇವರುಗಳು ಸೃಷ್ಟಿಯಾದವು. ಧರ್ಮಗಳನ್ನು ಸುಧಾರಣೆಗೊಳಿಸಿದ ಪಂಥಗಳು ಹುಟ್ಟಿದವು. ಈ ಪ್ರಕ್ರಿಯೆ ಸುಮಾರು ಕ್ರಿ.ಶ. ೧೨-೧೩ನೇ

## ಒಡೆಲಳೆಲು

ಬಿರುಕು ಬಿಟ್ಟ ಬುರಡೆಯ ಮೇಲೆ ಹಿಮಗಟ್ಟಿ
ನೇತಾಡುತ್ತಿದೆ ಮರದ ಮೇಲೆ, ಒಂದು ಉದುರಿ ಬಿದ್ದ ತಲೆ.
ಯುವ ಆಕಾಶದ ಶೋಕ,
ಒಂದು ಕೂಗು: ಓ ನನ್ನ ಖುಷಿಯೇ !

ಗಗನಚುಂಬಿ ಗೋಪುರಗಳ ಹೊತ್ತು ನಿಂತ ಅರಮನೆಗಳು
ಗೋಡೆಗಳ ತುಂಬೆಲ್ಲಾ ಕಾವ್ಯಪಂಕ್ತಿಗಳು
ಅಂತಃಪುರದೊಳಗೆ ಕಾಮಾಗ್ನಿ
ಎರಡು ನೆರಳುಗಳ ಮಿಲನ,
ದಿನ ಬಿಟ್ಟು ದಿನ
ಪ್ರಣಯದಾಟದ ದಣಿವು.

ಆದರೆ ಅಂಗಳದಲ್ಲಿನ ಒಂದು ಸಣ್ಣ ಹುಳ
ಆಕಾಶದತ್ತ ಕತ್ತೆತ್ತಿ ನೋಡುವ ಪ್ರಯತ್ನ ಮಾಡುವುದೇ ತಡ,
ಭೀತಿಯ ಸೈನ್ಯವೇ ಧಾಳಿಯಿಡುವುದು ಹುಳದ ಮೇಲೆ.

ಒಮ್ಮೆ ಹೀಗಾಯಿತು:
ಒಂದು ಹುಳ ಒಂಟಿಕಾಲಿನ ಮೇಲೆ ನಿಂತು
ಆಕಾಶದತ್ತ ಮುಖ ಮಾಡುವ ದುಸ್ಸಾಹಸಗೈತು.
*ಕಚಕ್ ! ಮಾವಿನ ಹಣ್ಣಿನಂತೆ ಅದರ ತಲೆ ಉದುರಿಬಿತ್ತು.
ಕೊಳೆತ ಹಣ್ಣೆಲೆಗಳ ಮುದಿಮರವೊಂದು
ದೌರ್ಜನ್ಯದ ವಿರುದ್ಧ ಕಣ್ಣೀರಿಡುತ್ತಾ ಹೊರಟಿತು –
ಇಲ್ಲಿ 'ಬಿಳಿ'ಯರ ಮತವೇ ಸದಾ ನ್ಯಾಯಸಮ್ಮತವೇ ?
ನೇತಾಡುತ್ತಿದೆ ಮರದ ಮೇಲೆ, ಒಂದು ನಿರ್ಜೀವ ತಲೆ.

**ಮರದ ಒಂದು ರೆಂಬೆಯ ಮೇಲೆ ಚಿಗುರಿತೊಂದು ಹೆಬ್ಬೆರಳು.
ಒಬ್ಬ ಸನ್ಯಾಸಿ ಹೆಬ್ಬೆರಳನ್ನೇ ಕತ್ತರಿಸಿಬಿಟ್ಟ !
ಆದರೆ ಆ ಹೆಬ್ಬೆರಳು ನನ್ನನ್ನಿನ್ನೂ ಕುಕ್ಕುತ್ತಿದೆ,



ಬಾಣಗಳು ತುಂಬಿರಲು ಬತ್ತಳಿಕೆ ತುಂಬಾ
ಮತ್ತು ತಲೆ ಪೆಂಡುಲಮ್‌ನಂತೆ ಜೀಕುತ್ತಿದೆ.
ನೇತಾಡುತ್ತಿದೆ ಮರದ ಮೇಲೆ, ಒಂದು ಬೇರ್ಪಟ್ಟ ತಲೆ
ನೇತಾಡುತ್ತಿದೆ ಮರದ ಮೇಲೆ, ಒಂದು ಬೇರ್ಪಟ್ಟ ತಲೆ
ನೇತಾಡುತ್ತಿದೆ ಮರದ ಮೇಲೆ....

ಮೂಲ : **ಕಿಸನ್ ಸೋಸಾ**
ಕನ್ನಡಕ್ಕೆ : **ಎಂ. ಎಸ್. ಶಿವಸ್ವಾಮಿ**
ಇ.ಡಬ್ಲ್ಯು.ಎಸ್. ೧೦೮, ೨ನೇ ಹಂತ,
ಕೆ.ಎಚ್.ಬಿ., ಕುವೆಂಪುನಗರ, ಮೈಸೂರು - ೫೭೦ ೦೨೩

* ಶ್ರೀರಾಮನಿಂದ ವಧಿಸಲ್ಪಟ್ಟ ಶೂದ್ರ ತಪಸ್ವಿ ಶಂಬೂಕ
** ಏಕಲವ್ಯನಿಗೆ ಸಂಬಂಧಿಸಿದಂತೆ

ಶತಮಾನದವರೆಗೆ ಜರುಗಿತು. ಆ ನಂತರ ಪ್ರಭಾವಶಾಲಿಯಾದ ಹೊಸದಾದ ಧರ್ಮ ಅಥವಾ ಹೊಸ ಪಂಥ ಉದಯವಾಗಿಲ್ಲವೆಂದೇ ಹೇಳಬಹುದು. ಇದಕ್ಕೆ ಮುಖ್ಯವಾಗಿ ಎರಡು ಕಾರಣಗಳು. ಮೊದಲನೆಯದು, ೧೭-೧೮ನೇ ಶತಮಾನದ ನಂತರ ಹೆಚ್ಚಿನ ಜನರು ವಿಚಾರಶಕ್ತಿ ಬೆಳೆಸಿಕೊಂಡಿದ್ದರಿಂದ ವೈಚಾರಿಕತೆ ಹಾಗೂ ವಿಜ್ಞಾನ ಬೆಳೆಯುತ್ತಾ ಹೋಯಿತು. ಎರಡನೆಯದು, ಮೊದಲು ತಾವು ಒಪ್ಪಿಕೊಂಡಿದ್ದ ಧರ್ಮವನ್ನು ಬಿಡಲು ಹಿಂಜರಿದ ಜನರು ಬೇರೊಂದು ಧರ್ಮ ಉದಯಿಸಲು ಅವಕಾಶ ಮಾಡಿಕೊಡಲಿಲ್ಲ, ತಮ್ಮ ತಮ್ಮ ಧರ್ಮಗಳಲ್ಲಿ ಹೆಚ್ಚು ನಿಷ್ಠಾವಂತರಾಗುತ್ತಾ ಅಂಧಾನುಕರಣೆಯಲ್ಲಿಯೇ ಮುಂದುವರೆದರು. ಈ ಬಗೆಯ ಜನರು ಹೆಚ್ಚಿರುವುದರಿಂದ ಇಂದಿನ ಜಗತ್ತು ಬಹಳ ಅಪಾಯವನ್ನೂ ಎದುರಿಸುತ್ತಿದೆ. ಇವರು ತಮ್ಮ ಧರ್ಮ, ಪಂಥ, ಸಿದ್ಧಾಂತಗಳಿಗಾಗಿ ಸಾಯಲಿಕ್ಕೂ ಸಿದ್ಧರು, ಕೊಲ್ಲಲಿಕ್ಕೂ ಸಿದ್ಧರು. ದೇವರು ಧರ್ಮಗಳಂಥ ಮೂಢನಂಬಿಕೆಗಳಿಗಾಗಿ ಹಿಂಸೆಯನ್ನು ಆನಂದಿಸುವ ಮಟ್ಟ ತಲುಪಿದ್ದಾರೆ.

**ಧರ್ಮಗಳಿಂದ ಜ್ಞಾನಕ್ಕೆ ಪೆಟ್ಟು**

ಜ್ಞಾನಕ್ಕೆ ಮೊದಲ ಪೆಟ್ಟು ಬಿದ್ದದ್ದು ದೇವರ ಕಲ್ಪನೆ ಹುಟ್ಟಿದಾಗ. ಈ ಜಗತ್ತಿನ ಆಗು ಹೋಗುಗಳನ್ನು ನಿಯಂತ್ರಿಸಲಿಕ್ಕೆ ದೇವರಿದ್ದಾನೆ, ದೇವರು ಮನುಷ್ಯರನ್ನು ಸೃಷ್ಟಿಸಿ ಮನುಷ್ಯರಿಗಾಗಿ ನಿಸರ್ಗವನ್ನು ಸೃಷ್ಟಿಸಿದ್ದಾನೆ ಎನ್ನುವ ತೀರ್ಮಾನಕ್ಕೆ ಬಂದಾಗ ಜ್ಞಾನದ ಜ್ಯೋತಿ ಮಂಕಾಯಿತು. ಮನುಷ್ಯನ ಬದುಕಿನ ದಿಕ್ಕೇ ಬದಲಾಗಿ ಅಜ್ಞಾನದೆಡೆಗೆ ನಡೆಯುವಂತಾಯಿತು. ನಿಸರ್ಗ ಕಡೆಗಣಿಸಲ್ಪಟ್ಟಿದ್ದರ ಮೊದಲ ಕಾರಣ ದೇವರ ಕಲ್ಪನೆ ಹಾಗೂ ಧರ್ಮಗಳು. ಹಾಗಾಗಿ ಅವು ಇಂದಿನ ಪರಿಸರ ಸಮಸ್ಯೆಯ ಮೂಲ ಕಾರಣಗಳಾಗಿವೆ.

ಯಾವ ಧರ್ಮವೂ ಮನುಷ್ಯನ ವಿಕಾಸಕ್ಕೆ ಅವಕಾಶ ಮಾಡಿಕೊಡಲಿಲ್ಲ. ಬದಲಿಗೆ, ವಿಚಾರವಂತರನ್ನು, ವಿಜ್ಞಾನಿಗಳನ್ನು ಕ್ರೂರವಾಗಿ ಶಿಕ್ಷಿಸಿದೆ. ಜ್ಞಾನವನ್ನು ಅರಸಿ ಧರ್ಮಾಂಧತೆಗೆ ಬಲಿಯಾದ ಮೊದಲ ವ್ಯಕ್ತಿ ಸಾಕ್ರಟೀಸ್. ಆರ್ಯಭಟ, ಬೇಕನ್, ಕೋಪರ್ನಿಕಸ್, ಗೆಲಿಲಿಯೋ, ಡಾರ್ವಿನ್, ಇತ್ಯಾದಿ ನೂರಾರು ಸಾವಿರಾರು ವಿಜ್ಞಾನಿಗಳು, ವಿಚಾರ ವಂತರು ಧರ್ಮದಡಿ ನರಳಿದ್ದಾರೆ, ಕೊಲೆಯಾಗಿದ್ದಾರೆ. ಈಗಿನ ೨೧ನೇ ಶತಮಾನದಲ್ಲಿ ಕೂಡ ಜ್ಞಾನದ ಮೇಲಿನ ಧರ್ಮದ ದೌರ್ಜನ್ಯ ನಡೆಯುತ್ತಲೇ ಇದೆ.

**ಧರ್ಮ-ಶೋಷಣೆ-ಹೆಣ್ಣು**

ಇಂದು ನಾವು ಕಾಣುತ್ತಿರುವ ಪುರುಷಪ್ರಧಾನ ಸಮಾಜಕ್ಕೆ ಧರ್ಮಗಳೇ ಕಾರಣ. ಸ್ತ್ರೀವಿರೋಧಿ ಧಾರ್ಮಿಕ ನಿಯಮಗಳನ್ನು ರಚಿಸಿದ ಪುರುಷನೂ ಇದಕ್ಕೆ ಕಾರಣನಾಗಿದ್ದಾನೆ. ನಿಸರ್ಗದಲ್ಲಿ ಒಂದು ಗಂಡು ಜೀವಿಗೆ ಹೆಣ್ಣು ಜೀವಿಯನ್ನು ಕೀಳಾಗಿ ಕಾಣುವ ನಿಯಮವಿಲ್ಲ. ನಿಸರ್ಗದಲ್ಲಿ ಹೆಣ್ಣೇ ಪ್ರಧಾನವೆಂದರೂ ತಪ್ಪಾಗಲಾರದು.

ಪ್ರಪಂಚದ ಎಲ್ಲಾ ಧರ್ಮಗಳಲ್ಲೂ ಹೆಣ್ಣನ್ನು ತುಚ್ಛೀಕರಿಸಲಾಗಿದೆ. ಹೆಣ್ಣನ್ನು ಕೀಳಾಗಿಯೇ ಕಾಣಬೇಕು ಎನ್ನುವ ನಿಯಮ ಹೇರಲಾಗಿದೆ. ಹೆಣ್ಣು ಸ್ವಲ್ಪಮಟ್ಟಿಗೆ ಸ್ವಾತಂತ್ರ್ಯ ಅನುಭವಿಸುತ್ತಿರುವ ಕ್ರಿಶ್ಚಿಯನ್ ಧರ್ಮದಲ್ಲಿಯೇ ಹೆಣ್ಣನ್ನು ಕೀಳಾಗಿ ಕಂಡಿರುವಾಗ ಉಳಿದ ಧರ್ಮಗಳ ಬಗ್ಗೆ ಮಾತನಾಡುವಂತಿಲ್ಲ. ಬೈಬಲ್ 'ಹೆಣ್ಣು ಎಲ್ಲಾ ಕೆಡಕುಗಳ ಮೂಲ' ಎಂದಿದೆ. ಉಳಿದ ಧರ್ಮಗಳಲ್ಲಿ ಹೆಣ್ಣನ್ನು ಕೀಳಾಗಿ ಕಾಣುವುದು, ಶೋಷಣೆ ಮಾಡುವುದನ್ನೆಲ್ಲಾ ಮುಖ್ಯ ನಿಯಮಗಳಂತಿರುವುದು ಎಲ್ಲರಿಗೂ ಗೊತ್ತಿರುವ ಸತ್ಯ.

**ಮನುಷ್ಯನನ್ನು ಪ್ರತ್ಯೇಕಿಸಿದ ಧರ್ಮಗಳು**

ಧರ್ಮಗಳು ಮನುಷ್ಯ ಕುಲದ ಮೇಲೆ ಮಾಡಿದ ಅತ್ಯಂತ ಘೋರ ಅಪರಾಧವೆಂದರೆ ಮನುಷ್ಯರನ್ನು ಪ್ರತ್ಯೇಕಿಸಿದ್ದು. ಮನುಷ್ಯರನ್ನು ಪ್ರತ್ಯೇಕಿಸುವುದೇ ಧರ್ಮಗಳ ಗುರಿ ಅಲ್ಲವೆನ್ನಿ . ಆದರೆ ಧರ್ಮಗಳಿಂದಲೇ ಮನುಷ್ಯ ಪ್ರತ್ಯೇಕಗೊಂಡಿದ್ದು ಎನ್ನುವುದು ಮಾತ್ರ ಸತ್ಯ. ಮನುಷ್ಯರೆಲ್ಲ ಒಂದೇ ಭೂಮಿಯ ಮೇಲಿದ್ದರೂ ತಾವು ಬೇರೆ ಬೇರೆ ಎನ್ನುವ ವ್ಯವಸ್ಥೆಯಲ್ಲಿ ಬದುಕಬೇಕಾಗಿದೆ. ಮೇಲು ಕೀಳು ಎನ್ನುವ ವಿಂಗಡಣೆಯನ್ನು ಪ್ರಮುಖ ಲಕ್ಷಣವಾಗಿಟ್ಟುಕೊಂಡು ರಚಿತವಾದ ಧರ್ಮ ಹಿಂದೂಧರ್ಮ ಒಂದೇ ಎಂದು ಕಾಣುತ್ತದೆ. ಹಾಗಾಗಿ ಪ್ರಪಂಚದ ಮನುಷ್ಯರೆಲ್ಲ ಧರ್ಮಗಳ ಹೆಸರಿನಲ್ಲಿ ಒಮ್ಮೆ ವಿಂಗಡಿಸಲ್ಪಟ್ಟರೆ, ಭಾರತೀಯರು ಧರ್ಮಗಳಿಂದ ವಿಂಗಡಿಸಲ್ಪಡುವುದರ ಜೊತೆಗೆ ಜಾತಿಗಳಿಂದಲೂ ಅತ್ಯಂತ ಕ್ರೂರವಾಗಿ ವಿಂಗಡಿಸಲ್ಪಟ್ಟಿದ್ದಾರೆ. ಭಾರತೀಯರಿಗೆ ಧರ್ಮಗಳಿಂದ ಡಬಲ್ ಡಬಲ್ ಶಿಕ್ಷೆ.

ಈಗ ಮನುಷ್ಯ ಎಷ್ಟೇ ಧರ್ಮನಿರಪೇಕ್ಷಕ-ಜಾತ್ಯತೀತ ಎಂದರೂ ಎಲ್ಲೋ ಆಳದಲ್ಲಿ ಒಂದು ಬಗೆಯ ಪ್ರತ್ಯೇಕತಾ ಭಾವನೆ ಕೆಲಸ ಮಾಡುತ್ತಿದೆ. ಆದ್ದರಿಂದ ಒಂದು ಧರ್ಮದವರು ಇನ್ನೊಂದು ಧರ್ಮದವರನ್ನು ಸ್ವಲ್ಪವೂ ಅಡ್ಡಿಯಾಗದ ಮುಕ್ತಭಾವನೆಯಿಂದ ಒಪ್ಪಿಕೊಳ್ಳಲಿಕ್ಕಾಗಲಿಲ್ಲ.

**ಧರ್ಮಗಳಿಂದ ಸದ್ಯದ ಜಗತ್ತಿನಲ್ಲಿ ಹಿಂಸೆ ಆತಂಕಗಳು**

೨೧ನೇ ಶತಮಾನದಲ್ಲಿ ಮನುಷ್ಯನಿಗಿರುವ ದೊಡ್ಡ ಆತಂಕ ಹಾಗೂ ಹಿಂಸೆ ಧರ್ಮಗಳಿಂದ ಹುಟ್ಟಿಬರುತ್ತಿವೆ. ಹೆಚ್ಚಿನ ಜನರು ಧರ್ಮವನ್ನು ಒಪ್ಪಿಕೊಂಡಿದ್ದಾರೆ. ಅಂತೆಯೇ ಅವು ಮೂಢನಂಬಿಕೆಗಳು ಎನ್ನುವ ತೀರ್ಮಾನಕ್ಕೆ ಬಾರದಿರುವುದರಿಂದ ಧರ್ಮಗಳಿಂದಾಗುತ್ತಿರುವ ಹಿಂಸೆ, ಆತಂಕಗಳು ಧಾರ್ಮಿಕ ಮೂಲಭೂತವಾದಕ್ಕೆ ಎಡೆಮಾಡಿಕೊಡುತ್ತಿವೆ. ಧಾರ್ಮಿಕ ಮೂಲ ಭೂತವೆಂದರೆ ನಿಜವಾದ ಅರ್ಥದಲ್ಲಿ ಧರ್ಮಕ್ಕೆ ಆಚಾರಿತ್ರಿಕವಾಗಿ ಅತ್ಯಂತ ಬದ್ಧರಾಗುವುದು, ಧರ್ಮಾಂಧತೆ ಎಂದಾಗುತ್ತದೆ. ಧರ್ಮದ ಹೆಸರಿನಲ್ಲಿ ಎಲ್ಲ ಮಾನವ ವಿರೋಧಿ ಕೃತ್ಯಗಳಿಗೂ ಸಿದ್ಧರು.

ವಿಜ್ಞಾನ ಹೊಸ ಆವಿಷ್ಕಾರಗಳೊಂದಿಗೆ ವಿಕಾಸಗೊಳ್ಳುತ್ತಿದೆ. ಜೊತೆಗೆ ಅನಿವಾರ್ಯವಾಗಿ ಸುಧಾರಣೆಗೊಳ್ಳುತ್ತಿರುವ ಸಮಾಜದಲ್ಲಿಯ ಧರ್ಮದ ಪ್ರಭಾವ ದಟ್ಟವಾಗಿಯೇ ಉಳಿದಿದೆ. ಅಂಥ ಧಾರ್ಮಿಕ ವ್ಯಕ್ತಿಗಳು ಸ್ವಲ್ಪವೂ ಬದಲಾಗಿಲ್ಲ. ಜಗತ್ತು ಶೀಘ್ರ ಬದಲಾಗುತ್ತಿರುವುದರಿಂದ ತಮ್ಮ ಧರ್ಮಕ್ಕೆ ಧಕ್ಕೆಯಾಗುತ್ತಿದೆ ಎನ್ನುವ ಆತಂಕ ಅವರಲ್ಲಿ ಶುರುವಾಗಿದೆ. ಇದೆಲ್ಲದರಿಂದ ತಮ್ಮ ಧರ್ಮದ ಪ್ರಭಾವ ಕಡಿಮೆಯಾಗುತ್ತಿದೆ, ತಮ್ಮ ಧರ್ಮ ನಾಶವಾಗುತ್ತಿದೆ ಎನ್ನುವ ಆತಂಕ ಕ್ಕೊಳಗಾಗುತ್ತಿರುವ ಧಾರ್ಮಿಕ ಮುಖಂಡರು ಸಾಮಾನ್ಯ ಜನರ ಮೇಲೆ ಧಾರ್ಮಿಕ ಭಾವ ಪ್ರಚೋದನೆಯನ್ನು ಮಾಡುತ್ತಿದ್ದಾರೆ. ಜ್ಞಾನದ ಬದಲು ಧರ್ಮವನ್ನೇ ಬೋಧಿಸುತ್ತ ಮನಸ್ಸನ್ನು ವಶೀಕರಣಗೊಳಿಸಿಕೊಂಡಿದ್ದಾರೆ. ನಿನ್ನ ಧರ್ಮ ರಕ್ಷಣೆಗೆ ನೀನು ತಯಾರಾಗು, ನಿನ್ನ ಧರ್ಮಕ್ಕಾಗಿ ನೀನು ಸಾಯುವುದು ಶ್ರೇಷ್ಠವೆ, ನಿನ್ನ ಧರ್ಮಕ್ಕಾಗಿ ಕೊಲ್ಲುವುದೂ ಶ್ರೇಷ್ಠವೆ ಎಂಬ ಮಾತುಗಳು ಜನರನ್ನು ಪ್ರಚೋದಿಸುತ್ತಿವೆ. ಧರ್ಮಗಳ ಈ ರೀತಿಯ ಭಾವಪ್ರಚೋದನೆಗೆ ಒಳಗಾಗಿರುವವರು ತಮ್ಮ ಆಚರಣೆ ಕಟ್ಟು ಪಾಡುಗಳಿಗೆ ಮಾತ್ರ ಸೀಮಿತಗೊಳಿಸಿಕೊಂಡಿದ್ದ ಮೂಲಭೂತವಾದವನ್ನು ಈಗ ಆತಂಕ ವಾದವಾಗಿ ಪರಿವರ್ತಿಸಿಕೊಂಡಿದ್ದಾರೆ. ತಮ್ಮ ಆಚರಣೆಗೆ ಸೀಮಿತಗೊಂಡಿದ್ದ ಅವರ ಧಾರ್ಮಿಕತೆ ತಮ್ಮನ್ನು ಒಪ್ಪದವರ ಮೇಲೆ ಹಿಂಸೆ ಗಿಳಿಯುವುದು ಸರಿ ಎನ್ನುವ ಸ್ಥಿತಿ ತಲುಪಿದೆ. ಆದ್ದರಿಂದ ಭಯೋತ್ಪಾದಕ ಹಿಂಸೆಯನ್ನು, ಕೊಲೆಯನ್ನು ತನ್ನ ಧರ್ಮಕ್ಕಾಗಿ ಮಾಡುವ 'ಪವಿತ್ರ' ಕೆಲಸವೆಂದು ಧರ್ಮಾಂಧರು ಭಾವಿಸುತ್ತಾರೆ. ಅಜ್ಞಾನಕ್ಕೆ, ಕೆಲವು ಅಂಧ ಆಚರಣೆಗೆ ಸೀಮಿತವಾದ ಧರ್ಮಗಳು ಇಂದು ಹಿಂಸೆ ಕೊಲೆಗಳಿಗೆ ಕಾರಣವಾಗಿರುವುದರಿಂದ ಜಗತ್ತಿನ ಸಮಸ್ಯೆ ಖಂಡಿತವಾಗಿಯೂ ಹೆಚ್ಚಾಗಿದೆ.

**ನಿಸರ್ಗಧರ್ಮ ಹೊಸ ಆಶಾವಾದ**

ಯಾವುದೇ ಸಮಸ್ಯೆಗಳು ವ್ಯಾಪಕವಾಗಿ ಉಲ್ಬಣಗೊಂಡಾಗ ಅವು ನಾಶವಾಗಬಹುದು ಇಲ್ಲ ಬದಲಾಗಬಹುದು. ಮಾನವನ ಇತ್ತೀಚಿನ ಇತಿಹಾಸದಲ್ಲಿಯೇ ಅನೇಕ ಸಮಸ್ಯೆಗಳು ಬಂದಿವೆ. ಹಾಗೆಯೇ ಬದಲಾವಣೆಗಳೂ ಆಗಿವೆ. ಸಮಸ್ಯೆಗಳ ಕಾಲವನ್ನು ಸಂಕ್ರಮಣ ಕಾಲವೆಂದು ಕರೆಯುವುದು ಈ ಕಾರಣಕ್ಕಾಗಿಯೇ.

ವೈಜ್ಞಾನಿಕವಲ್ಲದ, ಮನುಷ್ಯನನ್ನು ಅಜ್ಞಾನಕ್ಕೆ ತಳ್ಳಿರುವ, ಮನುಷ್ಯ ಮನುಷ್ಯರನ್ನು ಬೇರ್ಪಡಿಸಿರುವ, ಅನಾವಶ್ಯಕ ಆಚರಣೆಗಳಾದ, ಜಗತ್ತಿನಲ್ಲಿ ಅನೇಕ ಸಮಸ್ಯೆಗಳನ್ನು ಸೃಷ್ಟಿಸಿ ಇತ್ತೀಚೆಗೆ ಹಿಂಸೆ ಆತಂಕಗಳಿಗೆ ಮೂಲ ಕಾರಣವಾಗಿರುವ ಧರ್ಮಗಳನ್ನು ಮೂಢ ನಂಬಿಕೆಗಳು ಎಂದು ತೀರ್ಮಾನಿಸಿ ಅವುಗಳಿಂದ ಹೊರಬರುವ ಕಾಲ ಸನ್ನಿಹಿತವಾಗಿದೆ. ಈ ಕ್ರಿಯೆ ಮೊದಲೇ ಆಗಬೇಕಿತ್ತು. ಆ ದಿಕ್ಕಿನಲ್ಲಿ ವಿಚಾರ ಮಾಡಿದವರ ಸಂಖ್ಯೆ ಕಡಿಮೆಯಿತ್ತು. ಈಗ ಧರ್ಮಗಳಿಂದ ಭೀಕರ ಸಮಸ್ಯೆಗಳು ಎದುರಾಗಿರುವುದರಿಂದ ಹೆಚ್ಚಿನ ಜನರು ಧರ್ಮಗಳು ಮೂಢನಂಬಿಕೆ ಎಂದು ತೀರ್ಮಾನಿಸುವ ಅಗತ್ಯತೆಯಿದೆ.

ಸದ್ಯದ ಜಗತ್ತಿನಲ್ಲಿ ದೇವರು, ಧರ್ಮ ಎಲ್ಲವೂ ಆಗಿ ಕಾಣುವುದು ನಿಸರ್ಗ. ಮನುಷ್ಯನೂ ಸೇರಿದಂತೆ ಸಕಲ ಜೀವಿಗಳ ಸೃಷ್ಟಿಯಾಗಿರುವುದು ದೇವರಿಂದಲ್ಲ, ನಿಸರ್ಗದ ಜೈವಿಕ ಕ್ರಿಯೆಯಿಂದ ಎಂದು ಎಲ್ಲರಿಗೂ ಗೊತ್ತಾಗುತ್ತದೆ. ದೇವರು ಧರ್ಮಗಳೆಲ್ಲ ಕಲ್ಪನೆ, ಭ್ರಮೆ, ಮೂಢನಂಬಿಕೆಗಳಾದರೆ, ನಿಸರ್ಗ ಸತ್ಯ; ಬದುಕು. ಜಗತ್ತಿನ ಎಲ್ಲರೂ ಒಂದೇ, ಇಡೀ ವಿಶ್ವವೇ ಒಂದು ಕುಟುಂಬ. ಪ್ರತಿಯೊಂದು ಜೀವಜಾಲವೂ ಅದರ ಸದಸ್ಯರು, ಮೇಲು-ಕೀಳು, ಪೂಜೆ-ಪ್ರಾರ್ಥನೆ, ಮಸೀದಿ-ಮಂದಿರಗಳಾವುವೂ ಇಲ್ಲದ ಸ್ವತಂತ್ರ ಬದುಕು. ಪ್ರತಿಯೊಬ್ಬರೂ ಆರೋಗ್ಯವಾಗಿ ಸುಖವಾಗಿ, ಸಂತೋಷದಿಂದ, ಪ್ರೀತಿಯಿಂದ ಬದುಕಬೇಕೆನ್ನುವುದೇ ನಿಸರ್ಗದ ತತ್ವ. ನಿಸರ್ಗದ ಸೃಷ್ಟಿಯಾಗಿರುವ ಮನುಷ್ಯ ಧರ್ಮಗಳಂಥ ಮೂಢನಂಬಿಕೆಗಳಿಂದ ಹೊರಬಂದು ತಾನೊಂದು ಜೀವಿಯಾಗಿ ನಿಸರ್ಗದ ಮಡಿಲಲ್ಲಿ ನಿಸರ್ಗವನ್ನೂ ನಂಬಿ ನಿಸರ್ಗನಿಯಮಗಳ ಆಧಾರದಲ್ಲಿ ಬದುಕುವುದು ಸೂಕ್ತ. ನಿಸರ್ಗನಿಯಮದಡಿ ಮನುಷ್ಯನೂ ಸೇರಿದಂತೆ ಎಲ್ಲಾ ಜೀವಜಾಲಗಳು ಸೌಹಾರ್ದಯುತವಾಗಿ, ಸುಖವಾಗಿ ಬಾಳುವ ಸಾಧ್ಯತೆಯಿದೆ.

ಸೀತಾರಾಂ ಕುರುವರಿ
ಆವಿನಹಳ್ಳಿ (ಅಂಚೆ), ಸಾಗರ (ತಾಲ್ಲೂಕು), ಶಿವಮೊಗ್ಗ ಜಿಲ್ಲೆ- ೫೭೭ ೪೦೧

# ಜನ್ಮಾಷ್ಟಮಿಯ ಗುಟ್ಟು



ಡಾ|| ಬಿ. ಎಸ್. ಶೈಲಜಾ

ಸೆಪ್ಟೆಂಬರ್ ಅಂದರೆ ಮಳೆಗೆ ಸ್ವಲ್ಪ ಬಿಡುವು ಎಂದುಕೊಳ್ಳಬಹುದು. ಹಾಗೊಮ್ಮೆ ಆಕಾಶ ಶುಭ್ರವಾದಾಗ ಗಮನ ಸೆಳೆಯುವುದು ನಕ್ಷತ್ರಗಳ ಸಾಮ್ರಾಜ್ಯ. ನಿಮ್ಮ ಗಮನವನ್ನು ತನ್ನೆಡೆ ಸೆಳೆಯುವ ಗ್ರಹಗಳು ಯಾವುವೂ ಸಂಜೆಯಲ್ಲಿಲ್ಲ. ತಿಂಗಳ ಮೊದಲರ್ಧ ಚಂದ್ರನೂ ಸಂಜೆಯಲ್ಲಿಲ್ಲ. ಆದ್ದರಿಂದ ಆಕಾಶಗಂಗೆಯನ್ನು ನೋಡಲು ಇದೊಂದು ಒಳ್ಳೆಯ ಅವಕಾಶ. ಪಶ್ಚಿಮದ ಅಂಚಿನಲ್ಲಿ ಪ್ರಕಾಶಮಾನವಾದ ಪುಂಜಗಳೇನೂ ಇಲ್ಲ. ದಕ್ಷಿಣದಲ್ಲಿಯೂ ಖಾಲಿ ಎನ್ನಿಸಿಬಿಡಬಹುದು. ಆದರೆ ಆ ದಿಕ್ಕಿಗೆ ತಿರುಗಿದೊಡನೆ ಆಕರ್ಷಿಸುವ ವೃಶ್ಚಿಕ-ಧನುರಾಶಿಗಳ ಸೌಂದರ್ಯ ಅನುಪಮವಾದದ್ದು. ಆಕಾಶಗಂಗೆ ಗ್ಯಾಲಕ್ಸಿಯ ಈ ಭಾಗ ನಕ್ಷತ್ರ, ನಕ್ಷತ್ರ ಸಮೂಹ, ನೆಬ್ಯುಲಗಳಿಂದ ತುಂಬಿದೆ. ನೆತ್ತಿಯ ಮೇಲೆ ಒಫಿಯೂಕಸ್ (ಉರಗಧರ). ಉತ್ತರಕ್ಕೆ ತಿರುಗಿದಿರಾದರೆ ದಿಗಂತದ ಅಂಚನ್ನು ಮುಟ್ಟಿರುವ ಸಪ್ತರ್ಷಿ ಮಂಡಲ ಕಾಣುವುದು. ಒಫಿಯೂಕಸ್‌ಗೂ ಇದಕ್ಕೂ ನಡುವೆ ಇರುವ ಪುಂಜವೇ ಭೀಮಸೇನ (ಹರ್‌ಕ್ಯುಲೆಸ್). ಇದರ ಪಕ್ಕದ ವೀಣಾ (ಲೈರಾ), ರಾಜಹಂಸ (ಸಿಗ್ನಸ್) ಮತ್ತು ಗರುಡ (ಅಕ್ವಿಲಾ) ಸಾಕಷ್ಟು ಪ್ರಕಾಶಮಾನವಾಗಿವೆ. ಗರುಡನಿಗೆ ಅಂಟಿಕೊಂಡಂತಿರುವ ಡಾಲ್ಫಿನ್ ಮೀನು ಡೆಲ್ಫಿನಿಸ್. ಇನ್ನು ಪೂರ್ವಕ್ಕೆ ದೃಷ್ಟಿ ಹರಿಸಿದಿರಾದರೆ ನಕುಲ (ಪೆಗಸಸ್) ಚೌಕ ಕಾಣುತ್ತದೆ. ಆಗ್ನೇಯದ ಅಂಚಿನಲ್ಲಿ ಕಾಣುವ ಏಕಾಂಗಿ ನಕ್ಷತ್ರ – ದಕ್ಷಿಣ ಮೀನು.

ಗ್ರಹಗಳು ಬೆಳಗಿನಲ್ಲಿ ಒತ್ತಟ್ಟಿಗೆ ಸೇರಿಬಿಟ್ಟಿವೆ. ಗುರು ಮತ್ತು ಮಂಗಳ ಎರಡೂ ಸೂರ್ಯನ ಇನ್ನೊಂದು ಬದಿಯಲ್ಲಿ ಹಾದು ಬರುತ್ತಿರುವುದರಿಂದ ಈ ತಿಂಗಳುದ್ದಕ್ಕೂ ಕಾಣುವಂತೆಯೇ ಇಲ್ಲ. ಇನ್ನುಳಿದ ಬೆಳಿಗ್ಗೆ ಪೂರ್ವದ ಸೊಬಗನ್ನು ಹೆಚ್ಚಿಸಲಿವೆ. ಹತ್ತರ ಬೆಳಿಗ್ಗೆ ಬಾಲ ಚಂದ್ರದ ಪಕ್ಕದಲ್ಲಿ ಶನಿಗ್ರಹ, ಸ್ವಲ್ಪ ಮೇಲೆ ಶುಕ್ರ ಕಾಣಲಿವೆ. ದಿಗಂತದ ಅಂಚಿನಲ್ಲಿ ಬುಧವೂ ಕಾಣಲಿದೆ. ಮಿಥುನರಾಶಿಯ ಅಂಚಿನಲ್ಲಿರುವ ಶನಿಯ ಪಕ್ಕವೇ ಶುಕ್ರ, ತಿಂಗಳ ಮೊದಲಲ್ಲಿ ಕಾಣುವುದು. ತಿಂಗಳ ಕೊನೆಯ ಹೊತ್ತಿಗೆ ಕಟಕರಾಶಿಯನ್ನು ದಾಟುವುದನ್ನು ಗಮನಿಸಬಹುದು. ತಿಂಗಳ ಮಧ್ಯದಲ್ಲಿ ಶುಕ್ರವನ್ನು ದುರ್ಬೀನಿನಿಂದ ನೋಡಿದಿರಾದರೆ ಪಕ್ಕದಲ್ಲಿ ಪ್ರೆಸಿಪಿ ಎಂಬ ನಕ್ಷತ್ರ ಗುಚ್ಛವನ್ನೂ ನೋಡಬಹುದು. ಬುಧ ತಿಂಗಳ ಮೊದಲರ್ಧ ಮಾತ್ರ ಬೆಳಗಿನ ಜಾವ ಕಾಣುವುದು. ಹಾಗಾಗಿ ಈ ತಿಂಗಳಲ್ಲಿ ಬೆಳಗಿನ ನೋಟವೇ ಅತಿ ಚೆನ್ನು. ಮೂರೂ ಗ್ರಹಗಳು, ಓರೈಯನ್ (ಮಹಾವ್ಯಾಧ) ಪುಂಜ, ಮಿಥುನ ರಾಶಿ ಈ ಎಲ್ಲ ದೃಶ್ಯಗಳೂ ಆಗ ನೋಡಲು ಸಿಗುತ್ತವೆ.

ಭೂಮಿಯ ವಾರ್ಷಿಕ ಚಲನೆಯ ಮುಖ್ಯ ಘಟ್ಟವೊಂದು ೨೧ರಂದು ಜರುಗಲಿದೆ. ಇದೇ ಶರದ್ ವಿಷುವ ಬಿಂದುವನ್ನು ಸೂರ್ಯ ದಾಟುವ – ದಾಟಿದಂತೆ ಕಾಣುವ ದಿನ. ಅಲ್ಲಿಯವರೆಗೆ ಹಗಲಿನ ಅವಧಿ ರಾತ್ರಿಯ ಅವಧಿಗಿಂತ ಹೆಚ್ಚು ಇರುತ್ತದೆ. ಅಲ್ಲಿಂದ ಮುಂದೆ ಹಗಲಿನ ಅವಧಿ ಕಡಿಮೆಯಾಗತೊಡಗುತ್ತದೆ. ಆ ದಿನ ಹಗಲು-ರಾತ್ರಿ ಅವಧಿಗಳು ಸಮವಾಗಿರುತ್ತವೆ. ಇದೇ ರೀತಿ ಮಾರ್ಚ್ ೨೧ರಂದು ನಡೆಯುತ್ತದೆ. ಅದಕ್ಕೆ ವಸಂತ ವಿಷುವ ಎಂಬ ಹೆಸರಿದೆ. ನಮಗೆ ಹೊಸವರ್ಷದ ಆರಂಭ ಅದು. ಕೆಲವು ಪ್ರಾಂತ್ಯಗಳಲ್ಲಿ ಶರದ್ ವಿಷುವದಿಂದ ವರ್ಷಾರಂಭವಾಗುತ್ತದೆ. ನಮ್ಮಲ್ಲಿ ಮಾರ್ಚ್ ೨೧ರ ನಂತರ ಬರುವ ಚೈತ್ರದಿಂದ ವರ್ಷ ಆರಂಭವಾಗುವ ಹಾಗೆ, ಗುಜರಾತ್-ಸೌರಾಷ್ಟ್ರ-ರಾಜಸ್ಥಾನಗಳಲ್ಲಿ ಶರದ್ ವಿಷುವದ ನಂತರ ಕಾರ್ತೀಕದಿಂದ ಹೊಸವರ್ಷ ಆರಂಭವಾಗುತ್ತದೆ.

ಹಳೆಯ ಧೂಮಕೇತುಗಳೆರಡು ಮೇ ತಿಂಗಳಲ್ಲಿ ಗರಿಷ್ಠ ಪ್ರಕಾಶ ಪಡೆದು ಸುಂದರ ಬಾಲಗಳನ್ನು ಪ್ರದರ್ಶಿಸಿ ಹಿಂದಿರುಗುತ್ತಿವೆ. ಇನ್ನೊಂದು ಹೊಸ ಧೂಮಕೇತು ಮುಂದಿನ ತಿಂಗಳಲ್ಲಿ ಗರಿಷ್ಠ ಪ್ರಕಾಶ ಪಡೆಯಲಿದೆ.

ನಮ್ಮ ಮಾರ್ಗದರ್ಶಿ ಚಂದ್ರ ಹುಣ್ಣಿಮೆಯಂದು ನಕುಲ ಪುಂಜದ ಚೌಕದ ದಕ್ಷಿಣಕ್ಕೆ ಕಾಣುತ್ತದೆ. ಉತ್ತರಾಭಾದ್ರ[೨] ಎಂಬುದು ಚೌಕದ ಆ ಮೂಲೆಯ ನಕ್ಷತ್ರದ ಹೆಸರು. ಉತ್ತರಾಭಾದ್ರ[೧] ಎಂಬುದು ಚೌಕದಲ್ಲಿಯ ಇನ್ನೊಂದು ನಕ್ಷತ್ರ. ಆರರಂದು ಚಂದ್ರನ ಸ್ಥಾನ ರೋಹಿಣಿಗೂ-ಕೃತ್ತಿಕೆಗೂ ಮಧ್ಯೆ ಎಂಬುದನ್ನು ಗಮನಿಸಲು ಬೆಳಗಿನ ಜಾವ (ಸೂರ್ಯೋದಯಕ್ಕೆ ಮುನ್ನ) ಕತ್ತೆತ್ತಿ ನೋಡಿದರೆ ಸಾಕು. ಅಂದು ಜನ್ಮಾಷ್ಟಮಿ – ಕೃಷ್ಣನ "ನಕ್ಷತ್ರ" ರೋಹಿಣಿ – ಎಂದೇಕೆ ಎಂಬ ಅಂಶ ಸ್ಪಷ್ಟವಾಗುವುದು. ನಡುರಾತ್ರಿಯಲ್ಲಿ ಚಂದ್ರನೊಡನೆಯೇ ರೋಹಿಣಿಯೂ ಉದಯಿಸುತ್ತದೆ. ಈ ಕಾರಣ ಅಂದು ಚಾಂದ್ರಮಾಸದ ಕೊನೆಯ ಪಾದವೂ ಆಗಿದೆ. ನವಜಾತ ಶಿಶುವನ್ನು ಆ ನಡುರಾತ್ರಿಯಲ್ಲಿ ವಸುದೇವ ಕೊಂಡೊಯ್ದು ಎಂದು ಹೇಳುವುದರ ಖಗೋಳ ವೈಜ್ಞಾನಿಕ ಗುಟ್ಟು ಇದೇ. ಬೆಳಗಾಗುವುದರಲ್ಲಿ ವಸುದೇವ ಪುನಃ ಕಾರಾಗೃಹಕ್ಕೆ ಹಿಂದಿರುಗಿಬಿಟ್ಟನಲ್ಲಾ! ಬೇರೆ ಯಾವ ತಿಂಗಳಲ್ಲೂ ಹೀಗೆ ಚಂದ್ರ-ರೋಹಿಣಿ ಒಟ್ಟಾಗಿ ನಡುರಾತ್ರಿಗೆ ಉದಯಿಸುವ ಸಂದರ್ಭ ಒದಗುವುದಿಲ್ಲ.



ಆರರ ಬೆಳಿಗ್ಗೆ ಚಂದ್ರನ ಸ್ಥಾನ ಕೃತ್ತಿಕಾ ಮತ್ತು ರೋಹಿಣಿಗಳ ನಡುವೆ ಎಂಬುದನ್ನು ಗಮನಿಸಿ

## ಖಗೋಳ ದಿನಚರಿ

೧ ಬೆಳಗಿನ ಜಾವ ಶುಕ್ರದ ಪಕ್ಕದಲ್ಲೇ ಕಾಣುವ ಶನಿ.

೪೧ನೇ ಪುಟಕ್ಕೆ

# ಒಂದು ತೀರ್ಥಯಾತ್ರೆ

ಟಿ. ಸಿ. ಶ್ರೀಯಾನ್

ರಜಾ ದಿನಗಳ ಪ್ರವಾಸಕ್ಕೆಂದು ನಾನು ಈ ಸಲ ಆಯ್ಕೆ ಮಾಡಿದ್ದು ಸದಾ ಬರಪೀಡಿತ ದಖ್ಖಿಣ ಪೀಠಭೂಮಿಯಲ್ಲಿರುವ ಅಣದೂರು ಎಂಬ ಕುಗ್ರಾಮವನ್ನು. ಬರಪೀಡಿತ ಮಾತ್ರವಲ್ಲ, ಭೂಕಂಪಗ್ರಸ್ತ ಲಾತೂರು ಎಂಬ ಪಟ್ಟಣವೂ ಅದರ ಹತ್ತಿರವೇ ಇದೆ ಎಂದು ತಿಳಿದರೆ ಇದೆಂಥಾ ಹುಚ್ಚಪ್ಪಾ ಎಂದು ನೀವು ಬೆಚ್ಚಿಬೀಳಬಹುದು. ಆದರೆ ಮರಳುಗಾಡಿನಲ್ಲಿಯೂ ಜಲಾಶಯ ಎಂಬ ಆಶ್ರಯ ಇದೆಯಲ್ಲವೇ ? ಅಂತಹುದೇ ಆದ ಒಂದು ಆತಿಥ್ಯ ನನಗಲ್ಲಿ ಒದಗಲಿತ್ತು.

ಈ ಕ್ಷೇತ್ರದ ಆಯ್ಕೆಗೆ ಒಂದು ಕಾರಣವೂ ಇತ್ತು. ಅಣದೂರು ನಿವಾಸಿಯಾದ ಡಾ॥ ಶ್ರೀಮತಿ ಶುಭಾಂಗಿಯವರು ಮತ್ತು ನನ್ನ ಮಗಳು ಮುಂಬಯಿಯ ತೋಪಿವಾಲಾ ಮೆಡಿಕಲ್ ಕಾಲೇಜಿನಲ್ಲಿ ಒಟ್ಟೊಟ್ಟಾಗಿ ಕಲಿತವರು. ಶುಭಾಂಗಿಯವರು ಅಣದೂರಿನ ಆಸುಪಾಸಿನ ನಿವಾಸಿ ಡಾ॥ ಶಶಿಕಾಂತ ಅಹಂಕಾರಿಯವರನ್ನು ಮದುವೆಯಾಗಿ ಅಣದೂರಿನಲ್ಲಿ ನೆಲೆ ನಿಂತವರು. ಸುಮಾರು ಇಪ್ಪತ್ತು ವರ್ಷಗಳಿಂದ ಆ ವೈದ್ಯ ದಂಪತಿಗಳು ಆ ಬರಪೀಡಿತ ಮತ್ತು ಹಿಂದುಳಿದ ಪ್ರದೇಶದಲ್ಲಿ ಬಡ ನಿವಾಸಿಗಳ ವೈದ್ಯಕೀಯ ಸೇವೆಯನ್ನು ನಡೆಸುತ್ತ ಬಂದವರು. ಆ ಹಿಂದುಳಿದ ವರ್ಗದ ಜನರ ಜೀವನದಲ್ಲಿ ಉಲ್ಲೇಖನೀಯ ಪರಿವರ್ತನೆಯನ್ನು ಮತ್ತು ಉನ್ನತಿಯನ್ನು ತಂದು ಆತ್ಮಸಂತೃಪ್ತಿಯನ್ನು ಪಡೆದವರು. ಆ ಸೇವೆಯನ್ನು ನಡೆಯಿಸುತ್ತಿರುವಾಗ ಮೂಲಭೂತ ಸೌಲಭ್ಯದ ಕೊರತೆಯಿಂದಾಗಿ ಹಲವು ತೊಡಕುಗಳನ್ನು ಅನುಭವಿಸಿದವರು. ತಮ್ಮಲ್ಲಿಗೆ ಬಂದು ತಮ್ಮ ಸಾಧನೆಗಳನ್ನು ಪರಿಶೀಲಿಸಬೇಕು, ತಮಗಾದ ಆನಂದದಲ್ಲಿ ಭಾಗವಹಿಸಬೇಕು ಎಂಬ ಅವರ ಹಲವು ವರ್ಷಗಳ ಕಾಲದ ಆಮಂತ್ರಣವನ್ನು ಸ್ವೀಕರಿಸಿ, ನನ್ನ ಮಗಳು ತನ್ನ ಪತಿ ಮತ್ತು ಪುತ್ರಿಯನ್ನೊಡಗೂಡಿಕೊಂಡು ಹೊರಟಾಗ ಆಮಂತ್ರಿತನಾದ ನಾನೂ ಅವರ ಜೊತೆಗಾರನಾದೆ. ಡಾ॥ ಶುಭಾಂಗಿಯವರ ಪರಿಚಯ ನನಗೆ ಅವರ ಕಾಲೇಜು ಓದಿನ ಸಮಯದಿಂದಲೇ ಇದ್ದಿತ್ತು. ಅವರು



ಮಧ್ಯಮ ವರ್ಗದ ಕುಟುಂಬದಲ್ಲಿ ಜನಿಸಿದ್ದರೂ ಪಟ್ಟಣ ನಿವಾಸಿಯಾಗಿದ್ದವರು. ಹಳ್ಳಿಗಾಡಿನ ಜೀವನಕ್ಕೆ ಅವರು ಹೇಗೆ ಹೊಂದಿಕೊಂಡರು? ಈ ಪರಿವರ್ತನೆಯಲ್ಲಿ ಅವರ ಪತಿಯ ಪಾತ್ರವಾದರೂ ಏನಿತ್ತು? ಎಂಬುದನ್ನೆಲ್ಲ ಪ್ರತ್ಯಕ್ಷವಾಗಿ ಕಂಡರಿಯುವ ಕುತೂಹಲ ನನಗೆ. ಹಳ್ಳಿಯ ಜೀವನ ಯಾವ ವೈದ್ಯರಿಗೆ ತಾನೆ ಬೇಕು? ''ಉಳ್ಳವರು'' ಎಂಬ ವರ್ಗದವರಿಗೂ ಬೇಡ. ''ಇಲ್ಲದವರು'' ಎಂಬುವವರಿಗೂ ಬೇಡ. ಪದವಿ ಸಿಗುವ ಮುನ್ನ ಮಾಡಬೇಕಾದ ಕಡ್ಡಾಯ ೬ ತಿಂಗಳ ''ಹಳ್ಳಿಗಳಲ್ಲಿ ಸೇವೆ'' ಪೂರೈಸಲು ಮೀನ ಮೇಷ ಎಣಿಸುವ ವೈದ್ಯರು ಪದವಿ ಪಡೆದ ನಂತರ ಹಳ್ಳಿಗಳ ಕಡೆಗೆ ಮುಖ ತೋರಿಸುವುದೇ ಅಪರೂಪ. ಬದಲಾಗಿ ಅವರು ಪಟ್ಟಣಗಳಲ್ಲಿಯೇ ತಮ್ಮ 'ಕ್ಲಿನಿಕ್' ತೆರೆಯುವವರು; ಅಲ್ಲಿಯೇ ಆಸ್ಪತ್ರೆ ಕಟ್ಟುವವರು; ತರಾತುರಿಯಿಂದ ಆದಷ್ಟು ಹಣ ಸಂಪಾದಿಸಿ ತಮ್ಮ ಆರ್ಥಿಕ ಸ್ಥಿತಿಯನ್ನು ಭದ್ರವಾಗಿರಿಸುವವರು ಅವರಲ್ಲಿ ಸಾಮಾನ್ಯ. ಬಡವರಾಗಿದ್ದ ಶಶಿಕಾಂತ ದಂಪತಿಗಳು ಮುಂಬಯಿ, ಪೂನಾದಂತಹ ಪಟ್ಟಣ ಗಳತ್ತ ಆಕರ್ಷಿತರಾಗದೆ ಈ ಹಳ್ಳಿಗಳಲ್ಲಿ ಏನನ್ನು ಕಂಡರು ಎಂಬ ಕುತೂಹಲ ನನ್ನಲ್ಲಿ ಮೂಡಿತ್ತು.

ಡಾ॥ ಶಶಿಕಾಂತರು ಒಬ್ಬ ಮಾಧ್ವ ಬ್ರಾಹ್ಮಣರಂತೆ. ಅವರು ಎಂದೂ ತಾನೊಬ್ಬ ಬ್ರಾಹ್ಮಣನೆಂದು ತೋರಿಸಿಕೊಂಡವರಲ್ಲ. ಅವರೊಡನೆ ನಾನು ಮಾತಾಡುತ್ತಿದ್ದಾಗ ತಾನು ಮಾಧ್ವನೆಂದು ಹೇಳಿದ ನೆನಪಿಲ್ಲ. ತನ್ನ ಈ ತರದ ಪರಿಚಯ ಅವರ ಮಟ್ಟಿಗೆ ಅಪ್ರಾಸಂಗಿಕವಾಗಿ ಕಂಡುಬಂದಿರಬೇಕು. ಈ ಸಂಗತಿ ಅವರ ಹಿರಿಯ ಅಣ್ಣನೊಡನೆ ಮಾತನಾಡುವಾಗ ಪ್ರಾಸಂಗಿಕವಾಗಿ ತಿಳಿಯಿತು. ಅಣ್ಣ ಕಾಲೇಜಿನ ಒಬ್ಬ ನಿವೃತ್ತ ಪ್ರಾಧ್ಯಾಪಕ; ಜನಮಾನ್ಯ ಸಮಾಜಸೇವಕರೂ ಕೂಡ. ಅವರು ನನ್ನೊಡನೆ ಮಾತಾಡುತ್ತಿದ್ದಾಗ, ''ಉಡುಪಿ ನಿಮ್ಮ ಊರಿಂದ ಎಷ್ಟು ದೂರ ? ಶೃಂಗೇರಿಯನ್ನು ಹೇಗೆ ತಲುಪಬಹುದು ?'' ಎಂದು ವಿಚಾರಿಸುತ್ತಿದ್ದಾಗ, ಅವರು ಮಾಧ್ವರೆಂದು ತಿಳಿದುಬಂತು. ಆದರೆ ಅವರಿಗೆ ಜಾತಿಭೇದ ಭಾವಗಳಿಲ್ಲ. ಹರಿಜನರು, ದಲಿತರು ಮುಂತಾದ ಕೆಳವರ್ಗದವರನ್ನೂ ಅಲ್ಲದೆ ಮುಸಲ್ಮಾನರನ್ನೂ ಆದರದಿಂದ ನೋಡುವ ಸಂಸ್ಕೃತಿ ಅವರದ್ದಾಗಿತ್ತು. ಹಬ್ಬ ಹರಿದಿನಗಳಲ್ಲಿ ಎಲ್ಲರೂ – ಬ್ರಾಹ್ಮಣರು ಕೂಡಿ – ಸಾರ್ವಜನಿಕರ ಕೂಟದಲ್ಲಿ ಒಂದೇ ಸಾಲಿನಲ್ಲಿ ಊಟ ಉಪಚಾರ ಆಗುತ್ತಿತ್ತು. ಡಾ॥ ಅಂಬೇಡ್ಕರರು ಅವರ ಆದರ್ಶ ವ್ಯಕ್ತಿ. ಬಡವರ ಮತ್ತು ದಲಿತರ ಏಳಿಗೆಗಾಗಿ ಅವರು ಕಾಳಜಿ ಹೊತ್ತವರು. ಇಂತಹ ವಾತಾವರಣದಲ್ಲಿ ಬೆಳೆದು ಪಡೆದ ಆ ಉದಾತ್ತ ಸಂಸ್ಕಾರ ಡಾ॥ ಶಶಿಕಾಂತರ ಜೀವನವನ್ನು ರೂಪಿಸಿತು ಎಂದೆನಿಸುತ್ತಿತ್ತು.

ಸುರತ್ಕಲ್-ಮಂಗಳೂರು ನಿವಾಸಿಗಳಾದ ನಮಗೆ ಅಣದೂರನ್ನು ತಲುಪಲು ನೇರ ಮಾರ್ಗವಿಲ್ಲ. ಬಸ್ಸು ಹಿಡಿದರೂ ಅಲ್ಲಲ್ಲಿ ಹಲವಾರು ಬಸ್ಸುಗಳನ್ನು ಬದಲಾಯಿಸಬೇಕಾಗುತ್ತದೆ. ಅಣದೂರಿಗೆ ಅತಿ ಹತ್ತಿರದ ರೈಲು ನಿಲ್ದಾಣ ಅಲ್ಲಿಂದ ೫೦ ಕಿ.ಮೀ. ದೂರವಿರುವ ಶೋಲಾಪುರವೇ ಸರಿ. ಅಂತೂ ಸುತ್ತಿ ಬಳಸಿ ಬಂದ ನಮ್ಮ ಪ್ರಯಾಸಮಯ ರೈಲು ಪ್ರಯಾಣ ಶೋಲಾಪುರದಲ್ಲಿ ಮುಗಿಯುವಾಗ ಬೆಳಿಗ್ಗೆ ೪ ಗಂಟೆಯಾಗಿತ್ತು. ಶೋಲಾಪುರದಲ್ಲಿ ನಮಗಾಗಿ ಗುರುತು ಹಲಗೆಯನ್ನು ಹಿಡಿದು ಕಾದಿದ್ದ ವಾಹನವನ್ನು ದೃಷ್ಟಿಸಿದಾಗ ಕೊನೆಗಾದರೂ ನಮ್ಮ ಗುರಿಗೆ ಹತ್ತಿರವಾದೆವು ಎಂದು ಅವರೆಗೆ ಉಸಿರುಕಟ್ಟಿಕೊಂಡಿದ್ದ ನಾನು ದೀರ್ಘಶ್ವಾಸವನ್ನು ಎಳೆದುಕೊಂಡೆನು. ವಾಹನವನ್ನೇರಿ ಸುಮಾರು ೫೦ ಕಿ.ಮೀ. ದೂರದಲ್ಲಿದ್ದ

ರಜಾ ದಿನಗಳ ಪ್ರವಾಸಕ್ಕೆಂದು ನಾನು ಈ ಸಲ ಆಯ್ಕೆ ಮಾಡಿದ್ದು ಸದಾ ಬರಪೀಡಿತ ದಖ್ಖಿಣ ಪೀಠಭೂಮಿಯಲ್ಲಿರುವ ಅಣದೂರು ಎಂಬ ಕುಗ್ರಾಮವನ್ನು. ಬರಪೀಡಿತ ಮಾತ್ರವಲ್ಲ, ಭೂಕಂಪಗ್ರಸ್ತ ಲಾತೂರು ಎಂಬ ಪಟ್ಟಣವೂ ಅದರ ಹತ್ತಿರವೇ ಇದೆ ಎಂದು ತಿಳಿದರೆ ಇದೆಂಥಾ ಹುಚ್ಚಪ್ಪಾ ಎಂದು ನೀವು ಬೆಚ್ಚಿಬೀಳಬಹುದು. ಆದರೆ ಮರಳುಗಾಡಿನಲ್ಲಿಯೂ ಜಲಾಶಯ ಎಂಬ ಆಶ್ರಯ ಇದೆಯಲ್ಲವೇ ? ಅಂತಹುದೇ ಆದ ಒಂದು ಆತಿಥ್ಯ ನನಗಲ್ಲಿ ಒದಗಲಿತ್ತು.

ಅಣದೂರನ್ನು ಬರೆ ಅರ್ಧಗಂಟೆಯಲ್ಲಿ ತಲುಪಿದೆವು. ಬಟ್ಟ ಬಯಲಾದ ಪೀಠಭೂಮಿ ದಿಗಂತದುದ್ದಕ್ಕೂ ಸಮಾನಾಂತರವಾಗಿ ಹರಡಿತ್ತು. ಕಾಡುಮೇಡುಗಳ ಅಡೆತಡೆಗಳಿಲ್ಲದ ಹರಿವ ನೀರಿನಿಂದಾಗುವ ಹೊಂಡಗಳಿಲ್ಲದ ಈ ಸಾರಿಗೆ ಹೆದ್ದಾರಿ ನಮ್ಮ ವಾಹನದ ಓಟಕ್ಕೆ ಮುದ ನೀಡುತ್ತಿತ್ತು. ನನ್ನ ಕಲ್ಪನೆಯ ಹಿನ್ನೋಟದಲ್ಲಿ ಇದೇ ಹೆದ್ದಾರಿಯಾಗಿತ್ತು – ಸಹಸ್ರ ಮಾನಗಳಿಂದ – ದಂಡಕಾರಣ್ಯದಿಂದ ಕನ್ಯಾಕುಮಾರಿಯವರೆಗೆ – ಕುದುರೆ ಸವಾರರಿಗೆ, ರಥಾರೂಢರಿಗೆ, ಅಲೆಮಾರಿ ದಾಳಿಕೋರರಿಗೆ, ಆರ್ಯಾವರ್ತವನ್ನು ಸುತ್ತುವರಿದ ನೆನ್ನಲಾದ ಪರಶುರಾಮನಿಗೆ. ಈ ಪೀಠಭೂಮಿಯ ಪುಣ್ಯದರ್ಶನದಿಂದ ಭಾವುಕನಾದೆ.

ನಮ್ಮ ಬರೋಣವನ್ನು ನಿರೀಕ್ಷಿಸಿದ್ದ ವೈದ್ಯದಂಪತಿಗಳು ನಮ್ಮನ್ನು ಸ್ವಾಗತಿಸಿದರು. ನಮಗಾಗಿ ಮೀಸಲಾಗಿರಿಸಿದ್ದ ಅವರ ಮನೆಯ ಕೊಠಡಿಯೊಂದರಲ್ಲಿ ಉಳಿದುಕೊಂಡೆವು. ಪೂರ್ಣ ಬೆಳಗಾಗುವ ತನಕ ನಿದ್ರಿಸಿದೆವು. ಡಾ॥ ಶಶಿಕಾಂತರವರದ್ದು ಚಿಕ್ಕ ಸಂಸಾರ. ಗಂಡ ಹೆಂಡತಿ ಮತ್ತು ಇಬ್ಬರು ಮಕ್ಕಳು. ಒಂದು ಹೆಣ್ಣು ಮತ್ತೊಂದು ಗಂಡು. ಜೊತೆಗೆ ವಿಧವೆ ತಾಯಿ. ಪುಣೆಯಲ್ಲಿ ಓದುತ್ತಿದ್ದ ಆ ಮಕ್ಕಳಿಬ್ಬರು ನಮ್ಮ ಭೇಟಿಗಾಗಿ ಅಂದು ಮನೆಗೆ ಬಂದಿದ್ದರು. ದೊಡ್ಡವಳಾದ ಮಗಳು ಕಾಲೇಜಿನಲ್ಲಿ ಓದುತ್ತಿರುವುದು ವೈದ್ಯಕೀಯ ವನ್ನಲ್ಲ ಎಂದಾಗ ನನಗೆ ಆ ವೈದ್ಯದಂಪತಿಗಳ ಬಗ್ಗೆ ಒಂದು ತರಹದ ಅನುಕಂಪ ಉಂಟಾಯಿತು. ಚುರುಕು ಬುದ್ಧಿಯವಳಾಗಿದ್ದ ಅವಳು ತನ್ನ ಒಲವಿನ ''ಎಲೆಕ್ಟ್ರೋನಿಕ್ಸ್ ಮತ್ತು ಕಮ್ಯುನಿಕೇಷನ್'' ಅನ್ನು ಆರಿಸಿದಳಂತೆ. ಮಗನು ಇನ್ನೂ ಹತ್ತನೆ ತರಗತಿಯಲ್ಲಿ ಓದುತ್ತಿದ್ದಾನೆ. ಅವನ ಇಷ್ಟ ಏನೆಂದು ತಂದೆ ತಾಯಿ ಇನ್ನೂ ತಿಳಿಯದವರಾಗಿದ್ದಾರೆ. ತಮ್ಮ ಮಕ್ಕಳು ತಮ್ಮ ವೃತ್ತಿಗೆ ಉತ್ತರಾಧಿಕಾರಿಗಳು ಆಗಬೇಕೆಂಬ ಉದ್ದೇಶ ಹೊತ್ತು ಅವರ ಮೆಡಿಕಲ್ ಸೀಟಿಗಾಗಿ ತಮ್ಮ ಹಣ-ಬಲವನ್ನೂ ಉಪಯೋಗಿಸುವ ವೈದ್ಯರು ಸಾಮಾನ್ಯ. ಅಹಂಕಾರಿ ದಂಪತಿಗಳು ತಮ್ಮ ಮಗಳು ವೈದ್ಯಕೀಯ ವೃತ್ತಿಯನ್ನು ಅನುಸರಿಸಬೇಕೆಂದು ಅವಳ ಮೇಲೆ ಒತ್ತಡವನ್ನು ಹೇರಿದಂತೆ ಕಂಡುಬರಲಿಲ್ಲ. ಅದು ಅವರ ನಿಲುವು. ಆ ನಿಲುವು ಅವರ ಜೀವನದ ತತ್ವವನ್ನು ಸಾರುವಂತಿತ್ತು. ಈ ದೃಷ್ಟಿಯಲ್ಲಿ 'ಆನಂದವನ'ವನ್ನು ಸೃಷ್ಟಿಸಿದ ಡಾ॥ ಬಾಬಾ ಆಮ್ಟೆಯವರು ತುಂಬ ಅದೃಷ್ಟಶಾಲಿಗಳು. ಅವರ ಮಕ್ಕಳೆಲ್ಲ ವೈದ್ಯರಂತೆ; ಅವರು ತಮ್ಮನ್ನು ಕುಷ್ಠರೋಗಿಗಳ ಸೇವೆಯಲ್ಲಿ ಈಗಾಗಲೇ ತೊಡಗಿಸಿ ಕೊಂಡಿದ್ದಾರಂತೆ. ಆ ಮಕ್ಕಳು ಆಮ್ಟೆಯವರ ಮರಣಾನಂತರ ಆ ಸಂಸ್ಥೆಯ ಉತ್ತರಾಧಿಕಾರಿಗಳಾಗಿ ಅದನ್ನು ಮುಂದುವರಿಸಬಲ್ಲರು. ಬಾಬಾ ಆಮ್ಟೆಯವರು ಶಶಿಕಾಂತರಿಗೊಬ್ಬ ಆದರ್ಶಪ್ರಾಯ ವ್ಯಕ್ತಿಯಾಗಿದ್ದಾರೆ. ಅವರು ಕೂಡಾ ಶಶಿಕಾಂತರ ಸಾಧನೆಗಳನ್ನು ಮೆಚ್ಚಿ ಸೂಕ್ತ ಉಕ್ತಿಗಳಿಂದ ಅವರನ್ನು ಪ್ರಶಂಸಿದವರು.

ವೈದ್ಯರಿಬ್ಬರೂ ತಮ್ಮ ವೃತ್ತಿಯಲ್ಲಿ ಸ್ನಾತಕೋತ್ತರ ಪದವಿಯನ್ನು ಹೊಂದಿದವರು. ಡಾ॥ ಶಶಿಕಾಂತರು ಅರಿವಳಿಕೆಯ ತಜ್ಞರು. ಡಾ॥ ಶುಭಾಂಗಿಯವರು ಪ್ರಸೂತಿ ತಜ್ಞೆ. 'ಜಾನಕಿ ರುಗ್ಣಾಲಯ' ಎಂಬ ಸುಮಾರು ಹತ್ತು ಕೊಠಡಿಗಳನ್ನು ಹೊಂದಿದ ಚಿಕ್ಕದಾದ ಪ್ರಸೂತಿ ಗೃಹದಲ್ಲಿ ಆಗಾಗ್ಗೆ ಸಾಮಾನ್ಯ ಹೆರಿಗೆಯನ್ನು ಶುಭಾಂಗಿಯವರು ನಡೆಸುತ್ತಿದ್ದರು. ಹೊರ ರೋಗಿಗಳ ತಪಾಸಣೆಯನ್ನು ಅವರೇ ಮಾಡುತ್ತಿದ್ದರು. ಅಂತೂ ನಗರ ಪ್ರದೇಶ ದಲ್ಲಿರುವಂತಹ ಹೆಚ್ಚಿನ ಚಟುವಟಿಕೆಗಳೇನೂ ಆ ಪ್ರಸೂತಿ ಗೃಹದಲ್ಲಿ ಕಂಡುಬರುತ್ತಿದ್ದಿಲ್ಲ. ಶಶಿಕಾಂತರು ಅರಿವಳಿಕೆಯ ತಜ್ಞರಾಗಿದ್ದರೂ, ಶಸ್ತ್ರಚಿಕಿತ್ಸೆಗಾಗಿ ಒಂದು ಸುಸಜ್ಜಿತ ಕೊಠಡಿ ಯನ್ನು ಕಟ್ಟಿಕೊಂಡಿರಲಿಲ್ಲ. ಆ ಮಟ್ಟದ ಸೇವೆ ಅವರ ಇಂದಿನ ಗುರಿಯಾಗಿರಲಿಲ್ಲ. ಅದು ಅವರ ಆದ್ಯತೆಯೂ ಆಗಿರಲಿಲ್ಲ. ಸಾರ್ವಜನಿಕ ಸ್ವಾಸ್ಥ್ಯಕ್ಕೆ ಸಂಬಂಧಿತ ಶಿಕ್ಷಣದಲ್ಲಿ ಯೋಗ್ಯತಾ ಪ್ರಮಾಣ ಪತ್ರವನ್ನು (ಡಿಪ್ಲೊಮಾ) ಪಡೆದ ಅವರ ಆದ್ಯತೆ ಬೇರೆಯೇ ಆಗಿತ್ತು. ಅದಾವುದು ?

ಬಡಜನರ ಪರ ಅನುಕಂಪವುಳ್ಳ ಅಣ್ಣ ಅವರಿಗೆ ಒಬ್ಬ ಆದರ್ಶ ವ್ಯಕ್ತಿಯಾಗಿದ್ದರು. ಅಣ್ಣನ ಆದರ್ಶಗಳು ಶಶಿಕಾಂತರವರಿಗಾಗಿದ್ದ ಪ್ರೇರಣೆ ಒಂದಾದರೆ, ಅವರು ವೈದ್ಯಕೀಯ ಶಿಕ್ಷಣವನ್ನು ಪಡೆಯುತ್ತಿದ್ದ ಆ ವರ್ಷಗಳಲ್ಲಿ ಕಾಲೇಜಿನ ವಿಚಾರವಂತ ವಿದ್ಯಾರ್ಥಿಗಳು ನಡೆಯಿಸುತ್ತಿದ್ದ ಕ್ರಾಂತಿಕಾರಿ ವಿಚಾರ ಮಂಥನದ ವಿಷಯ ಅದಕ್ಕೆ ಪೂರಕವಾಗಿತ್ತು. ವೈದ್ಯಕೀಯ ಶಿಕ್ಷಣ ಮತ್ತು ವೃತ್ತಿ ಬಡವರ ಪರವಾಗಿಲ್ಲ; ವೃತ್ತಿಗಳಲ್ಲಿ ಶ್ರೇಷ್ಠವೆನಿಸಿದ ವೈದ್ಯಕೀಯ ವೃತ್ತಿ ವ್ಯಾಪಾರೀಕರಣವಾಗುತ್ತಿದೆ; ಅದನ್ನು ಬಡವರ ಪರವಾಗಿ ಹೇಗೆ ಪರಿವರ್ತಿಸುವುದು ? ಎಂಬುದು ಅವರ ಚಿಂತನೆಯ ವಿಷಯವಾಗಿತ್ತು. ದಖ್ಖಣ ಪೀಠಭೂಮಿಯಂತಹ ಬರಪೀಡಿತ ಪ್ರದೇಶದಲ್ಲಿ, ದೂರ ದೂರ (ನೀರನ್ನಾಶ್ರಯಿಸಿ) ಹರಡಿರುವ ಹಳ್ಳಿಗಾಡಿನ ನಿವಾಸಿಗಳಿಗೆ, ಉಡಲೂ ತೊಡಲೂ ನಿತ್ಯ ಪೇಚಾಟಪಡುವ ಆ ಲಕ್ಷಾಂತರ ಬಡವರಿಗೆ, ಕಡಿಮೆ ಖರ್ಚಿನಿಂದ ಪರಿಣಾಮಕಾರಿಯಾದ ವೈದ್ಯಕೀಯ ಸೇವೆ ಯನ್ನು ಹೇಗೆ ಮನೆ ಬಾಗಿಲಿಗೆ ಮುಟ್ಟಿಸಬಹುದೆಂಬ ವಿಚಾರ ಅವರ ಮುಂದೆ ಇದ್ದಿತ್ತು.

ಜನರಲ್ಲಿ ಸ್ವಾಸ್ಥ್ಯ ಮತ್ತು ಸ್ವಚ್ಛತೆಯ ಬಗ್ಗೆ ಅರಿವು ಹುಟ್ಟಿಸುವುದು; ಅಂಧ ವಿಶ್ವಾಸವನ್ನು ಹೋಗಲಾಡಿಸುವುದು; ಆತ್ಮವಿಶ್ವಾಸವನ್ನು ಹುಟ್ಟಿಸುವುದು, ಪ್ರಕೃತಿದತ್ತ ಸಂಪತ್ತಿನ ಅವಲಂಬನೆಗೆ ಪ್ರೇರಣೆ ನೀಡುತ್ತ ಅವರನ್ನೂ ಸ್ವಾವಲಂಬಿಗಳನ್ನಾಗಿಸುವುದು – ಇಂತಹ ಕಾರ್ಯಕ್ರಮಗಳನ್ನು ಸೇವಾಮನೋಭಾವ ಹೊಂದಿದ ಆ ವೈದ್ಯ ಮತ್ತು ವಿದ್ಯಾರ್ಥಿಗಳ ತಂಡ ಕೈಗೊಂಡಿತು. ಅವರ ಕ್ಷೇತ್ರವಾದ ಉಸ್ಮಾನಾಬಾದ್ ಜಿಲ್ಲೆಯ ತುಳ್ಜಾಪುರ ಮತ್ತು ಉಮರ್‌ಗಾಂವ್ ತಾಲೂಕುಗಳಲ್ಲಿ (ಮರಾಠ್ವಾಡಾ ಪ್ರದೇಶದ) ಸುಮಾರು ೪೮ ಹಳ್ಳಿಗಳಲ್ಲಿ ಅಂದು ಸರಕಾರದ ಪ್ರಾಥಮಿಕ ಆರೋಗ್ಯ ಕೇಂದ್ರಗಳು ಇಲ್ಲದಿದ್ದುದನ್ನು ಗಮನಿಸಿದರು. ಮೊದಲು ಆ ಹಳ್ಳಿಗಳನ್ನು ತಮ್ಮ ಸೇವಾ ವ್ಯಾಪ್ತಿಗಾಗಿ ಆಯ್ಕೆ ಮಾಡಿಕೊಂಡರು. ಈ ಸೇವೆಗಾಗಿ ಅವರು ''ಹಾಲೋ'' (HALO – Health And Auto Learning Organisation) ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ಡಾ॥ ಶಶಿಕಾಂತರೇ ಅದರ ಮುಖ್ಯಸ್ಥರಾದರು. ನಂತರ HMF (Halo Medical Foundation) ಎಂಬ ಟ್ರಸ್ಟ್ ಸ್ಥಾಪನೆಯಾಯಿತು. ಇದರ ಆಶ್ರಯದಲ್ಲಿ ''ಭಾರತ್ ವೈದ್ಯ'' ಎಂಬ ವೈದ್ಯರ ತಂಡ ರೂಪುಗೊಂಡಿತು. ಈ ವೈದ್ಯರು ಚೀನಾ ದೇಶದಲ್ಲಿರುವ ''ಬರೆ ಕಾಲಿನ'' ವೈದ್ಯರ ಮಾದರಿಯ ಮೂಲಭೂತ ಸ್ವಾಸ್ಥ್ಯ ಸೇವೆಯಲ್ಲಿ ತರಬೇತಿ ಹೊಂದಿದ ಅಕ್ಷರಸ್ಥ ಮಹಿಳೆಯರಾಗಿದ್ದರು. ಜನರ ಆರ್ಥಿಕ ಸೌಲಭ್ಯಕ್ಕಾಗಿ 'ಸಂಜೀವಿನಿ ಮಹಿಳಾ ಬಚತ್' ಸಂಘ ರೂಪುಗೊಂಡಿತು. ನೈರ್ಮಲ್ಯ ಕಾಪಾಡಿಕೊಳ್ಳಲು, ಅಂಧ ವಿಶ್ವಾಸವನ್ನು ಹೋಗಲಾಡಿಸಲು ವಿವಿಧ ಕಾರ್ಯಕ್ರಮಗಳನ್ನು ಕೈಗೊಂಡರು. ಈ ಸೇವಾ ಕಾರ್ಯಕ್ರಮಗಳು ಒಂದಕ್ಕೆ ಇನ್ನೊಂದು ಪೂರಕವಾಗಿದ್ದುವು. HALO ಎಂಬ ಈ ಸಂಸ್ಥೆಯು ತನ್ನ ೨೦ ವರ್ಷಗಳ ಅವಧಿಯಲ್ಲಿ ಆ ಹಿಂದುಳಿದ ಪ್ರದೇಶದಲ್ಲಿ ಪವಾಡ ಸದೃಶವಾದ ಬದಲಾವಣೆಯನ್ನು ತಂದಿತು. ದೇಶವಿದೇಶಗಳಲ್ಲಿ ಗಣ್ಯರ ಗಮನ ಸೆಳೆದ, ಹಲವು ಪ್ರಶಸ್ತಿಗಳನ್ನು ಪಡೆದ ಮತ್ತು ಅನುದಾನಕ್ಕೆ ಪಾತ್ರವಾದ ಈ ಸಂಸ್ಥೆಯ ಅಧಿಕೃತ ಪರಿಚಯ ಮಾಡುವುದು ನನ್ನ ಈಗಿನ ಉದ್ದೇಶವಲ್ಲ. ಅದರ ಪೂರ್ಣ ಪರಿಚಯ ನನ್ನ ಈ ಕಿರು ಪ್ರವಾಸ ಕಥನದ ಮಿತಿಗೆ ಮೀರಿದ್ದು. ಅಂತೂ ನಿಷ್ಠಾವಂತ ವೈದ್ಯ ಮತ್ತು ಜನಸೇವಕರಾದ ಡಾ॥ ಶಶಿಕಾಂತರು ಅಲ್ಲಿಯ ಜನರಿಗೆ ಪೂಜನೀಯರಾಗಿದ್ದಾರೆಂದು ನಾನು ಹೇಳಿದರೆ ಅತಿಶಯೋಕ್ತಿಯಾಗದು.

ಈ ಮುಂಚೆ ಪ್ರಸ್ತಾಪಿಸಿದಂತೆ ಅಣದೂರನ್ನು ತಲಪುವ ನಮ್ಮ ಪ್ರವಾಸದ ಮೊದಲ ಹೆಜ್ಜೆ ಪ್ರಯಾಸಮಯವಾಗಿದ್ದರೂ ನಂತರದ ತಿರುಗಾಟ ನಿರಾಯಾಸವಾಗಿತ್ತು. ಅದಕ್ಕಾಗಿ ಡಾ॥ ಶಶಿಕಾಂತರವರು ಅವರ ಸಂಸ್ಥೆಯ ಒಂದು ಜೀಪನ್ನೂ ನಮಗಾಗಿ ಮೀಸಲಾಗಿರಿ ಸಿದ್ದರು. ಅದನ್ನೇರಿ ಆ ಬರಡು ಭೂಮಿಯಲ್ಲಿ ೫-೬ ಕಿ.ಮೀ. ದೂರದ ಅಂತರದಲ್ಲಿ ಹರಡಿರುವ ಅನೇಕ ಹಳ್ಳಿಗಳಲ್ಲಿರುವ ಸ್ವಾಸ್ಥ್ಯ ಕೇಂದ್ರಗಳನ್ನು ಸಂದರ್ಶಿಸಿದೆವು. 'ಭಾರತ್ ವೈದ್ಯ'ರನ್ನು ಭೇಟಿಯಾದೆವು. ಅವರಿಗಿದ್ದ ಮೂಲಭೂತ ಸ್ವಾಸ್ಥ್ಯಪರ ಅರಿವು, ಅವರ ಕಾರ್ಯಕುಶಲತೆ ಮತ್ತು ಆತ್ಮವಿಶ್ವಾಸ, ಪ್ರಸೂತಿ ತಜ್ಞೆಯಾಗಿರುವ ನನ್ನ ಮಗಳು ತುಂಬ ಮೆಚ್ಚಿದಳು. ಸ್ನಾತಕೋತ್ತರ ಪದವೀಧರರಾದ ಸಮಾಜ ಸೇವಕಿಯರು 'ಭಾರತ್ ವೈದ್ಯ' ರೊಂದಿಗೆ ಆ ಪ್ರದೇಶದ ಮೂಲೆಮೂಲೆಗಳಲ್ಲಿರುವ ಹಳ್ಳಿಗಳಿಗೆ ಭೇಟಿ ನೀಡಿ, ಅಲ್ಲಿಯ ಮಹಿಳೆಯರನ್ನು ಸಂದರ್ಶಿಸಿ ಅವರ ಸ್ವಾಸ್ಥ್ಯ, ಆರ್ಥಿಕ ಮುಂತಾದ ವಿಷಯಗಳಿಗೆ ಸಂಬಂಧಿಸಿದ ಸಂಕೀರ್ಣವಾದ ಮಾಹಿತಿಗಳನ್ನು ದಾಖಲಿಸುತ್ತಿದ್ದ ವ್ಯವಧಾನ ಪ್ರಶಂಸನೀಯವಾಗಿತ್ತು.

ಮೊದಲನೆಯ ದಿನ ಡಾ॥ ಶಶಿಕಾಂತರು ಸೂರ್ಯೋದಯಕ್ಕಿಂತ ಮುಂಚಿತವಾಗಿ ನಮ್ಮನ್ನು ಇನ್ನೂ ಆರಂಭದ ಹಂತದಲ್ಲಿರುವ ತಮ್ಮ ಮಾದರಿ ಕೃಷಿ ಕ್ಷೇತ್ರಕ್ಕೆ ಕರೆದುಕೊಂಡು ಹೋಗಿ ತಾವು ಅಲ್ಲಿ ಪ್ರಾಯೋಗಿಕವಾಗಿ ಬೆಳೆಸುತ್ತಿರುವ ಬದನೆಕಾಯಿ, ನೀರುಳ್ಳಿ, ಟೊಮೇಟೊ, ನೆಲಗಡಲೆ ಮುಂತಾದ ಬೆಳೆಗಳನ್ನು ತೋರಿಸಿದರು. ಮಣ್ಣಿನ ಗುಣವನ್ನು ವಿವರಿಸಿದರು. ಪುಡಿಗಲ್ಲು ಮಿಶ್ರಿತ ಸಾರವತ್ತೆಂದು ಕಂಡುಬರುವ ಕಂದುಬಣ್ಣದ ಮಣ್ಣಾಗಿತ್ತದು. ಬೆಳೆಗೆ ನೀರಿನದ್ದೊಂದೇ ಕೊರತೆ. ಈ ಕೊರತೆಯನ್ನು ನೀಗಿಸಬಲ್ಲುದಾದರೆ, ಈ ಪ್ರದೇಶವನ್ನು ದೇಶದ ಆಹಾರ ಧಾನ್ಯಗಳ ಕಣಜವನ್ನಾಗಿ ಪರಿವರ್ತಿಸಬಹುದೆಂದೆ ನಿಸುತ್ತಿತ್ತು. ಆದಿಯಲ್ಲಿ ಈ ಭೂಭಾಗ ರೂಪುಗೊಂಡಾಗ ಹರಿದುಬಂದ ಲಾವಾರಸ ಸಮತಟ್ಟಾದ ಪೀಠಭೂಮಿಯನ್ನು ರಚಿಸಿತು; ಅದು ಮುಂದಕ್ಕೆ ಹರಿಯುತ್ತ ಒಂದು ಕಡೆ ಹೆಪ್ಪುಗಟ್ಟಿ ಪೂರ್ವ ಮತ್ತು ಪಶ್ಚಿಮ ಘಟ್ಟಗಳು ನಿರ್ಮಾಣವಾದುವು ಎಂಬ ಕಲ್ಪನೆಯಿದೆ. ಹಾದುಹೋಗುವ ಮಳೆ ಮೋಡವನ್ನು ತಡೆಗಟ್ಟುವ ಪರ್ವತಗಳಾಗಲೀ ಪಶ್ಚಿಮ ಘಟ್ಟ

ದಿಂದ ಈ ದಾರಿಯಾಗಿ ಹರಿದುಬರುತ್ತಿರುವ ನದಿಗಳಾಗಲೀ ಇಲ್ಲದಿದ್ದುದರಿಂದಾಗಿ ಈ ಪೀಠಭೂಮಿಯು ಸದಾ ನೀರಿನ ಬರಗಾಲವನ್ನು ಅನುಭವಿಸುತ್ತಿದೆ. ಈ ಸಮತಟ್ಟಾದ ಪೀಠ ಭೂಮಿಯಲ್ಲಿ ಅಲ್ಲಲ್ಲಿ ಸುಮಾರು ೫-೬ ಮೈಲುಗಳ ಅಂತರದಲ್ಲಿ ಸ್ವಲ್ಪ ತಗ್ಗುಪ್ರದೇಶ - ಜಲಾನಯನ. ಅವುಗಳ ಸುತ್ತಮುತ್ತ ಮನೆಗಳು, ನಿವಾಸ ಸ್ಥಾನಗಳು – ಅದೇ ಅವರ ಹಳ್ಳಿಗಳು. ಅಪರೂಪಕ್ಕೊಮ್ಮೆ ಋತುವಿನಲ್ಲಿ ಸುರಿವ, ಅಲ್ಪಸ್ವಲ್ಪ ಮಳೆಯಿಂದಾದ ನೀರು ಬತ್ತಿಹೋಗುವ ತನಕ ಜೋಳ, ಕಬ್ಬು, ಹತ್ತಿ, ದವಸ ಧಾನ್ಯಗಳ ಕೃಷಿ. ಇಲ್ಲಿ ಹೆಂಗಸರು ಮತ್ತು ಮಕ್ಕಳೇ ಕೃಷಿಕರು. ಹೆಚ್ಚಿನ ಕೃಷಿಗೆ ಅವಕಾಶ ಇಲ್ಲದಿರುವುದರಿಂದಾಗಿ, ಗಂಡಸರೆಲ್ಲ ದೂರ ದೂರದ ಪಟ್ಟಣಗಳಿಗೆ ವಲಸೆ ಹೋಗಿ ಅಲ್ಲಿ ಕೂಲಿ ಕಾರ್ಮಿಕರಾಗಿದ್ದಾರೆ. ಮುಂಬಯಿಯ ಬಂದರಿನಲ್ಲಿರುವ ಗೋದಾಮುಗಳಲ್ಲಿ ಕಂಡುಬರುವ ಬಿಳಿ ಟೊಪ್ಪಿಯನ್ನು ಧರಿಸಿದ 'ಮತಾಡಿ' ಕೂಲಿಕಾರ್ಮಿಕರಲ್ಲಿ ಹೆಚ್ಚಿನವರು ಇವರೇ. ಬಿಳಿಟೋಪಿ ಇವರ ಪ್ರಾದೇಶಿಕ ತೊಡಿಗೆ.




ಡಾ|| ಶಶಿಕಾಂತರ ಮೋಡೆಲ್ ಫಾರ್ಮ್‌ನಲ್ಲಿ ಸುತ್ತಾಡುತ್ತಿದ್ದಾಗ ದಿಕ್ಕುತಪ್ಪಿಹೋಗಿದ್ದ ನನಗೆ ಪೂರ್ವ ದಿಕ್ಕಿನ ಅರಿವು ಆದದ್ದು ಸೂರ್ಯೋದಯವಾದಾಗ – ಆ ದಿಕ್ಕಿನಲ್ಲಿ ಒಂದು ಪ್ರಕಾಶಮಾನವಾದ ಗೋಲಾಕಾರವನ್ನು ಕಂಡಾಗ. ಅದು ಶುಭ್ರವಾಗಿದ್ದು ಕೆಂಪು ಮಂಗಳಗ್ರಹವೇ ಉದಯಿಸಿ ಭೂಮಿಯತ್ತ ಬರುತ್ತಿದೆಯೋ ಎಂಬಂತೆ ಕಂಡಿತು. ನೀರಿನ ತೇವಾಂಶವಿಲ್ಲದ ಆ ವಾತಾವರಣದಲ್ಲಿ ದಿಗಂತದ ಅಂತ್ಯದವರೆಗಿನ ಎಲ್ಲಾ ದೃಶ್ಯಗಳೂ ಸ್ಪಷ್ಟವಾಗಿ ಗೋಚರಿಸುತ್ತಿದ್ದವು. ತೇವಾಂಶವಿಲ್ಲದ ಕಾರಣದಿಂದಾಗಿ ಮಧ್ಯಾಹ್ನ ಉರಿ ಬಿಸಿಲಿನಲ್ಲಿಯೂ ಬೆವರಿಳಿಕೆ ಇರಲಿಲ್ಲ.

ಅವರು ಅಂದು ಬೆಳಿಗ್ಗೆ ತಮ್ಮ ಫಾರ್ಮಿನಿಂದ ಕೊಯ್ದು ತಂದಿದ್ದ ಕಾಯಿಪಲ್ಯಗಳಿಂದಲೇ ಅಡಿಗೆ ಮಾಡಿದ್ದ ವಿವಿಧ ಬಗೆಯ ಗೊಜ್ಜು ಮತ್ತು ಸಾರು ನಮ್ಮ ಊಟಕ್ಕಾಗಿತ್ತು. ''ಭರ್ಲಿವಾಂಗಿ'' (ಮಸಾಲೆ ತುಂಬಿಸಿ ಹುರಿದ ಚಿಕ್ಕ ಬದನೇಕಾಯಿಗಳು), ವಾಂಗಿಭಾತ್, ಲಟ್ಟಿಸಿದ ರಾಗಿರೊಟ್ಟಿ, ಕೈಯಿಂದ ತಟ್ಟಿ ಗೋಲಾಕಾರಕ್ಕೆ ತಂದ ಜೋಳದ ಹಿಟ್ಟಿನ ಭಾಕರಿ, ಪೂರಣ್‌ಪೋಳಿ (ಹೋಳಿಗೆ); ಅದರ ಮೇಲೆ ಸವರಿತ್ತು ದನದ ಶುದ್ಧ ತುಪ್ಪ. ಉಳಿದಿದ್ದ ಮೂರು ದಿನಗಳಲ್ಲೂ ವೈವಿಧ್ಯಮಯವಾದ ಗೊಜ್ಜು, ಸಾರುಗಳಿಂದ ಕೂಡಿದ ಊಟ ಸ್ವಾದಿಷ್ಟವೂ, ರುಚಿಕರವೂ ಆಗಿತ್ತು. ಸ್ವಾದಿಷ್ಟ ಮತ್ತು ಅತ್ಯಂತ ರುಚಿಕರವಾಗಿರುವ ಸೊಗಸಾದ ಆಹಾರ ಪೌಷ್ಟಿಕವಾಗಿರಬೇಕಲ್ಲವೇ ? ಕೆಲವರ ಪ್ರಕಾರ ಆಹಾರಗಳಲ್ಲಿ ಮಾಂಸಾಹಾರಕ್ಕೊಂದು ಸ್ಥಾನ, ಅದು ಹೆಚ್ಚು ಪೌಷ್ಟಿಕವೆಂದು. ಆ ಸ್ಥಾನವನ್ನು ಅದು ಇಲ್ಲಿ ಕಳೆದುಕೊಂಡಿದೆ ಎಂಬಂತಾ ಯಿತು ನನಗೆ. ಶುದ್ಧ ಶಾಕಾಹಾರಿಗಳಾದ ಈ ಬ್ರಾಹ್ಮಣರ ಮನೆಯಲ್ಲಿ ಮಾಂಸಾಹಾರದ ಕುರಿತಾದ ಮಾತೆತ್ತುವುದು ಅಸಭ್ಯವೆಂದು ನಾನೆಣಿಸುತ್ತಿದ್ದೆನಾದರೆ, ಅಂತಹ ಆಹಾರದ ಬಗ್ಗೆ ತಮಗೇನೂ ಅಭ್ಯಂತರವಿಲ್ಲವೆನ್ನುತ್ತಿದ್ದರು ವಿಶಾಲ ಹೃದಯದ ನಮ್ಮ ಆತಿಥೇಯರು! ಅಂತೂ ಮಾಂಸಾಹಾರಕ್ಕೆ ಮರುಳಾಗದ ಇವರೆಷ್ಟು ಭಾಗ್ಯಶಾಲಿಗಳು ಎಂದೆನಿಸುತ್ತಿತ್ತು.

ಅವರು ನಮ್ಮನ್ನು ವಾಹನದಲ್ಲಿ ಕೂರಿಸಿ ದೂರ ದೂರದ ಸ್ವಾಸ್ಥ್ಯ ಕೇಂದ್ರಗಳಿಗೆ ಕರೆದು ಹೋಗುತ್ತಿದ್ದಾಗ ಅಲ್ಲಿ ಅವರಿಗೆ ಸಿಗುತ್ತಿದ್ದ ಸ್ವಾಗತವು ಅವರ ಜನಪ್ರಿಯತೆಗೆ ನಿದರ್ಶನವೆನಿಸುತ್ತಿತ್ತು. ಅನಕ್ಷರರ ಸೇವೆಯಲ್ಲಿ ಸಂವಹನವೂ ಒಂದು ಮುಖ್ಯ ಅಂಗವಾದುದರಿಂದ ಜನಸಮೂಹವನ್ನು ಪ್ರೇರೇಪಿಸಿ ನಿರರ್ಗಳವಾಗಿ ಮರಾಠಿ ಭಾಷೆಯಲ್ಲಿ ಮಾತನಾಡುತ್ತಿದ್ದ ಡಾ|| ಶುಭಾಂಗಿಯವರು ತಮ್ಮ ಭಾಷಣಕಲೆಯನ್ನು ಕರಗತ ಮಾಡಿಕೊಂಡಿದ್ದರು. ನಾವು ಹೋದಲ್ಲೆಲ್ಲ ಅವರ ಭಾಷಣ ಕೇಳಲು ಸೇರಿದ್ದ ಜನತಾ ಜನಾರ್ದನರ ಸಂದರ್ಶನವೂ ನಮಗಾಗುತ್ತಿತ್ತು. ಅದೇ ನಾನು ಕೈಗೊಂಡ ತೀರ್ಥಯಾತ್ರೆಯ ಸಾಫಲ್ಯವೆಂದೆನಿಸುತ್ತಿತ್ತು.

ತನ್ನ ವಿಲಕ್ಷಣವಾದ ಮಾತುಗಳಿಂದ ದೇಶವಿದೇಶದ ಜನರ ನಗೆಪಾಟಲಿಗೆ ಒಳಗಾಗುತ್ತಿರುವ ಲಾಲೂಪ್ರಸಾದ್ ಯಾದವ್‌ರನ್ನು ಅದೇಕೋ ನಾನು ಕೆಲವೊಮ್ಮೆ ಗುಪ್ತವಾಗಿ ಮೆಚ್ಚುತ್ತೇನೆ. ತೀರ್ಥಯಾತ್ರೆಗಳ ಕುರಿತಾಗಿ ಇತ್ತೀಚೆಗೆ ಅವರು ಮಾಡಿದ ಟೀಕೆ ಹೀಗಿತ್ತು:

''ನಾನು ಕೇದಾರನಾಥಕ್ಕೆ ಹೋಗುವುದಿಲ್ಲ. ತೀರ್ಥಯಾತ್ರೆಗೆ ಹೋಗುವವರು ನಿವೃತ್ತರಾದವರು ಅಥವಾ ಶಾಶ್ವತವಾಗಿ ಈ ಜಗತ್ತನ್ನು ಬಿಟ್ಟುಹೋಗುವವರು.''


**ಟಿ. ಪಿ. ಶ್ರೀಯಾನ್**
ಮಾರಿಗುಡಿ ರಸ್ತೆ, ಸುರತ್ಕಲ್, ಮಂಗಳೂರು - ೫೭೫ ೦೧೪


***೩೮ನೇ ಪುಟದಿಂದ***

೨ ಬುಧಗ್ರಹದ ಹಿನ್ನಡೆ ಮುಕ್ತಾಯ.
೬ ಚಾಂದ್ರಮಾಸದ ಕೊನೆಯಪಾದ-ಚಂದ್ರೋದಯ ನಡುರಾತ್ರಿಗೆ
ಚಂದ್ರನ ಸ್ಥಾನ ರೋಹಿಣಿ ಮತ್ತು ಕೃತ್ತಿಕಾಗಳ ನಡುವೆ.



*೧೦ನೇ ತಾರೀಖು ಬೆಳಿಗ್ಗೆ ಸುಮಾರು ೪ ಗಂಟೆಗೆ ಪೂರ್ವ ದಿಕ್ಕಿನಲ್ಲಿ ಕಾಣುವ ನೋಟ*

೯ ಬುಧಗ್ರಹದ ಕೋನೋನ್ನತಿ – ಗುರುತಿಸುವುದು ಸುಲಭ.
(ದಿಗಂತದಿಂದ ೧೮ ಡಿಗ್ರಿ ಎತ್ತರ – ಸೂರ್ಯೋದಯದಲ್ಲಿ)
ಶನಿ-ಚಂದ್ರ ನಡುವೆ ಕನಿಷ್ಠಕೋನ.
೧೦ ಬುಧಗ್ರಹದ ಪಕ್ಕದಲ್ಲೇ ಮಘ ನಕ್ಷತ್ರ
ಶುಕ್ರ-ಚಂದ್ರ ನಡುವೆ ಏಳು ಡಿಗ್ರಿ. ಚಂದ್ರನ ಪಕ್ಕ ಪುನರ್ವಸು.
೧೩ ಬುಧ-ಚಂದ್ರ ನಡುವೆ ಕನಿಷ್ಠಕೋನ ನಾಲ್ಕು ಡಿಗ್ರಿ
(ಕಾಣುವುದು ಸುಲಭ ಅಲ್ಲ).
೧೪ ಅಮಾವಾಸ್ಯೆ (ರಾತ್ರಿ ೭.೫೯ಕ್ಕೆ)
ಗುರು-ಚಂದ್ರ ನಡುವೆ ಕನಿಷ್ಠಕೋನ (ಕಾಣುವುದಿಲ್ಲ).
೧೫ ಮಂಗಳ ಗ್ರಹದ ಯುತಿ ಸೂರ್ಯನ ನೇರಕ್ಕೆ (ಕಾಣುವುದಿಲ್ಲ).
೨೧ ಚಾಂದ್ರಮಾಸದ ಮೊದಲ ಪಾದ – ಚಂದ್ರಾಸ್ತ ನಡುರಾತ್ರಿಗೆ
ಗುರುಗ್ರಹದ ಯುತಿ – ಸೂರ್ಯನ ನೇರಕ್ಕೆ (ಕಾಣುವುದಿಲ್ಲ).
೨೨ ಶರದ್ ವಿಷುವ – ರಾತ್ರಿ ೧೦ ಗಂಟೆಗೆ.
೨೬ ಮಂಗಳ ಗುರು ನಡುವೆ ಕನಿಷ್ಠಕೋನ ೦.೨ ಡಿಗ್ರಿ (ಕಾಣುವುದಿಲ್ಲ).
೨೮ ಹುಣ್ಣಿಮೆ ೧೮.೩೯ಕ್ಕೆ.
ಚಂದ್ರನ ಸ್ಥಾನ ನಕುಲ ಪುಂಜದ ದಕ್ಷಿಣಕ್ಕೆ-ಉತ್ತರಾಭಾದ್ರದ ನೇರಕ್ಕೆ
ಬುಧ-ಗುರು ನಡುವೆ ಕನಿಷ್ಠಕೋನ (ಕಾಣುವುದಿಲ್ಲ).
೨೯ ಬುಧ-ಮಂಗಳ ನಡುವೆ ಕನಿಷ್ಠಕೋನ (ಕಾಣುವುದಿಲ್ಲ).


ಡಾ|| ಬಿ. ಎಸ್. ಶೈಲಜಾ
ಜವಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧

# ಸಂಪ್ರದಾಯಗಳಿಗೊಂದು ಒಳನೋಟ

**ಗ**ಣ್ಯರೊಬ್ಬರ ಮನೆಗೆ ರಾಮಚಂದ್ರಾಪುರ ಮಠದ ಸ್ವಾಮಿಗಳು ಆಗಮಿಸಿದ್ದರು. ಹೊಸದಾಗಿ ಕಟ್ಟಿದ ಮನೆ ಗ್ರಾನೈಟುಗಳಿಂದ ಥಳಗುಟ್ಟುತ್ತಿತ್ತು. ಮನೆಯ ಮುಂದೆ 'ದೊಡ್ಡ' ತುಳಸೀಕಟ್ಟೆ. ಅದಕ್ಕೂ ಗ್ರಾನೈಟ್ ಅಲಂಕಾರ! ನಾವು ಗೆಳೆಯರು ತುಳಸೀಕಟ್ಟೆ ಪಕ್ಕದಲ್ಲೇ ಹರಟುತ್ತ ನಿಂತಿದ್ದೆವು. ಆ ಮನೆಯ ಅಳಿಯ ನಮ್ಮ ಬಳಿ ಬಂದರು. ''ಈ ತುಳಸೀ ಕಟ್ಟೆ ನೋಡಿ. ಈ ಅಲಂಕೃತ ಕಟ್ಟೇಲಿರೋ ತುಳಸೀ ಗಿಡ ನೋಡಿ. ಇಲ್ಲೇ ನೆಲದಲ್ಲಿರೋ ಆ ತುಳಸೀ ಗಿಡ ನೋಡಿ. ಇದು ಇವತ್ತಿನ ನಮ್ಮ 'ಸಂಸ್ಕೃತಿ'!'' ಅಂದರು. ಒಗಟಿನಂತೆ ಮಾತು ಪ್ರಾರಂಭಿಸಿದ ಅವರನ್ನು ಮಾತಿಗೆಳೆದೆವು.

ಅಲಂಕೃತ ತುಳಸೀಕಟ್ಟೆಯ ಬಾಯಿ ಸಣ್ಣದಿತ್ತು. ಗಿಡ ಪೀರುತ್ತಿತ್ತು. ನೆಲದಲ್ಲಿರೋ ತುಳಸೀ ಗಿಡ ಹುಲುಸಾಗಿ ಐದಡಿ ಎತ್ತರ ಬೆಳೆದಿತ್ತು. ಅದರ ಬುಡ ಸಗಣಿಯಿಂದ ಸಾರಿಸಿತ್ತು. ಈ ಸ್ಥಿತಿಯನ್ನು ತೋರಿಸಿ, ''ನಮ್ಮ ಧರ್ಮ, ಸಂಸ್ಕೃತಿಗಳ ಸ್ಥಿತಿಯೂ ಹೀಗೇ ಆಗಿದೆ. ಚೆನ್ನಾಗಿ ತುಳಸೀ ಗಿಡ ಬೆಳೆಸಬೇಕು ಅನ್ನೋದು ನಮ್ಮೊಳಗಿನ ಉದ್ದೇಶ. ಆದರೆ ನಾವು ಕಟ್ಟೆಯನ್ನೇ ಭರ್ಜರಿಯಾಗಿ ಕಟ್ಟಿ ಗಿಡ ಬೆಳೆಸುವ ಕ್ರಮವನ್ನು ಮರೀತಿದ್ದೇವೆ'' – ಅಂದಾಗ ಆಡಂಬರದ ಸಂಸ್ಕೃತಿಯನ್ನು ಆತ ಲೇವಡಿ ಮಾಡುತ್ತಿರುವ ಪರಿ ಇಷ್ಟವಾಯಿತು. ತನ್ನ ಮಾವನ ಮನೆ ಎಂಬ ಮಮಕಾರ, ಅಂಧಾಭಿಮಾನ ಆ ಮಾತುಗಳಲ್ಲಿ ಇರದಿದ್ದುದು ಆತನ ಬಗ್ಗೆ ನಮ್ಮಲ್ಲಿ ಗೌರವ ಭಾವನೆಯನ್ನು ಮೂಡಿಸಿತು. ನಮ್ಮಲ್ಲಿ ಅನೇಕರು ಈ ಅಂಧಾಭಿಮಾನದಲ್ಲಿ ಸಿಲುಕಿ ಸಮಾಜದ ಆರೋಗ್ಯ ಕೆಡಿಸಿರುವ ಉದಾಹರಣೆಗಳಿವೆ. ಒಂದು ವಿಷಯದ ಬಗೆಗೆ ಅವನ ಆಳದಲ್ಲಿರುವ ನಂಬಿಕೆ ಯಾವುದೇ ಅಡೆತಡೆಗಳನ್ನೂ ಮೀರಬಲ್ಲದು ಎಂಬುದು ಆ ಮನೆಯ ಅಳಿಯನ ಮುಖದಲ್ಲಿ ಕಾಣತೊಡಗಿತ್ತು. ಆ ಅಳಿಯ ಮುಂದುವರೆದು ಹೇಳಿದ: ''ತುಳಸೀ ಗಿಡಕ್ಕೆ ಸಗಣಿ, ನೀರು, ಗೊಬ್ಬರ ಹಾಕಿ ವಿಶಾಲವಾದ ಮಣ್ಣಿನ ಕಟ್ಟೆ ಮಾಡಿ, ಕಟ್ಟೆ ಇಲ್ಲದಿದ್ದರೂ ಪರವಾಗಿಲ್ಲ. ಬಿಡುವಾದಾಗಲೆಲ್ಲ ಕುಡಿ ಕತ್ತರಿಸಿ. ದುಂಡು, ಚೌಕ, ಹಕ್ಕಿ, ಆನೆ ಹೀಗೆ ಯಾವುದೇ ಆಕಾರಕ್ಕೂ ತರಬಹುದು. ಮಧ್ಯಾಹ್ನ ೧೨ ಗಂಟೆ ನಂತರ ತುಳಸೀ ಕುಡಿ ಕತ್ತರಿಸಬಾರದು, ಮುಟ್ಟಬಾರದು, ಇತ್ಯಾದಿ ಯಾವುದನ್ನೂ ನಾನು ನಂಬಲ್ಲ. ನಾನು ಗಮನಿಸಿದಂತೆ ಈ ಗಿಡದ ಆರಾಧನೆಯಲ್ಲಿ ಬಹಳ ಮುಖ್ಯವಾದ ತಿರುಳಿದೆ. ಕುಟುಂಬ ವ್ಯವಸ್ಥೆಯಲ್ಲಿ ಧಾರ್ಮಿಕ ಭಾವನೆಯಿಂದ ಗಿಡಗಳ ಜೊತೆ ಗೆಳೆತನ ಪ್ರಾರಂಭವಾಗೋದೇ ತುಳಸೀ ಗಿಡದಿಂದ. ಈ ಗಿಡದಿಂದ ಹಿತ್ತಲಿನ ಅನೇಕ ಗಿಡಗಳ ಜೊತೆ ಸಂಬಂಧ ಬೆಳೆಯುತ್ತೆ.''

''ದೇವರ ಪೂಜೆಗೆ'' ಹೂ ಹಾಕಿ ನಮಸ್ಕಾರ ಮಾಡೋದು ತುಂಬಾ ಮುಖ್ಯ ಅಂತೇನೆ. ದೇವರಿದ್ದಾನೆ, ಅವನು ನಮ್ಮನ್ನು ಕಾಪಾಡ್ತಾನೆ ಅನ್ನೋ ಕಾರಣಕ್ಕಲ್ಲ, ದೇವರಿಗೆ ಹೂ ಹಾಕಿದರೆ ನಮಗೆ ಒಳ್ಳೇದಾಗುತ್ತೆ. ದೇವರು ನಮ್ಮನ್ನು ಕಾಪಾಡ್ತಾನೆ ಅನ್ನೋ ನಂಬಿಕೆ ಇದ್ದರೆ, ಹೀಗೆ ಮಾಡದೇ ಇದ್ದರೆ ಕೆಡುಕು ಆಗಿಬಿಡುತ್ತೇನೋ ಅನ್ನೋ ಭಯ ಇದ್ದರೆ ಮನೇ ಹಿತ್ತಲಲ್ಲಿ ನಾಲ್ಕಾರು ಹೂವಿನ ಗಿಡ ಬೆಳಸ್ತೇವೆ. ಹೂವು ನಮ್ಮ ಮನಸ್ಸನ್ನು ಅರಳಿಸುತ್ತೆ. ಸೌಂದರ್ಯಪ್ರಜ್ಞೆ ಮೂಡಿಸುತ್ತೆ. ಇದರಿಂದ ಮನುಷ್ಯನಿಗೆ ಪ್ರಕೃತಿ, ಗಿಡ-ಮರ, ನೆಲ-ಜಲ, ಪ್ರಾಣಿ-ಪಕ್ಷಿ, ಕ್ರಿಮಿ-ಕೀಟ – ಹೀಗೆ ಎಲ್ಲದರ ಬಗ್ಗೆ ಪ್ರೀತಿ ಮೂಡುತ್ತೆ ಎಂದು ಅಳಿಯ ಹೇಳುವಾಗ ಅವನೇ ಸ್ವಾಮಿಗಳ ರೀತಿ ಕಾಣತೊಡಗಿದ!

ಆಯುರ್ವೇದ ವೈದ್ಯ ಹಾರೇಗೊಪ್ಪದ ಅನಂತರಾಮು ಹೇಳಿದ ಮಾತೊಂದು ಆ ವೇಳೆಗೆ ನೆನಪಾಯಿತು. ಭೂಮಿ ಹುಣ್ಣಿಮೆ ಹಬ್ಬ ಆಚರಿಸುವಾಗ, ತೋಟ ಗದ್ದೆಗಳಲ್ಲಿ ಹಚ್ಚಂಬಲಿ ಬೀರೋ ಸಂಪ್ರದಾಯವಿದೆ. ನೂರಾ ಒಂದು ಜಾತಿ ಸೊಪ್ಪು ಬೇಯಿಸಿ, ಅನ್ನದಲ್ಲಿ ಕಲಸಿ, ಕೃಷಿಕ್ಷೇತ್ರದಲ್ಲಿ ಬೀರಬೇಕು ಅನ್ನೋದು ಸಂಪ್ರದಾಯ. ನಮ್ಮ ಸುತ್ತಲ ಪರಿಸರವನ್ನು ಉತ್ತಮವಾಗಿಟ್ಟುಕೊಳ್ಳುವ ಗುಟ್ಟು ಈ ಸಂಪ್ರದಾಯದಲ್ಲಿ ಅಡಕಗೊಂಡಿರುವ ಪರಿ ಅಸಾಧಾರಣವಾದದ್ದು ಎಂಬ ನಂಬಿಕೆ ನನ್ನದು. ಭೂಮಿ ಹುಣ್ಣಿಮೆ ಹಬ್ಬ ಆಚರಿಸುವ ಕಾಲದಲ್ಲಿ ಕೃಷಿಗೆ ಪೂರಕವಲ್ಲದ ಕೆಲವು ಕ್ರಿಮಿಗಳು ಭೂಮಿಯಲ್ಲಿ ಇರುತ್ತವೆ. ನಾವು ಬೀರಿದ ಅನ್ನದ ಕಾಳುಗಳ ಆಸೆಗಾಗಿ ಕೆಳಗಿಳಿದ ಪಕ್ಷಿಗಳು ನಮಗೆ ಬೇಡವಾಗಿರುವ ಹುಳುಗಳನ್ನು ತಿಂದು ನಮಗೆ ಉಪಕರಿಸುತ್ತವೆ. ಅವಕ್ಕೂ ಸತ್ವಯುತ ಆಹಾರ ದೊರಕಿದಂತಾಯ್ತು! ನೂರಾ ಒಂದು ಜಾತಿ ಸೊಪ್ಪು ಏಕೆ ಬೇಕು ? ಇಂತಿಂಥಾ ಜಾತಿ ಸೊಪ್ಪು ಇರಲೇಬೇಕು ಎಂದು ಸಂಪ್ರದಾಯ ರೂಢಿಸಿಬಿಟ್ಟರೆ ಬೆಟ್ಟದಲ್ಲಿ ಆ ನೂರಾ ಒಂದು ಜಾತಿ ಸೊಪ್ಪಿನ ಗಿಡಗಳನ್ನು ಕಡಿಯದೇ ಉಳಿಸುತ್ತೇವೆ. ಈ ಸೊಪ್ಪುಗಳು ನಮ್ಮ ಕೃಷಿಭೂಮಿಗೆ ಅಗತ್ಯವಾದವು. ಸೊಪ್ಪಿನ ಜೊತೆ ನಮಗೆ ಹೇರಳ ಕಟ್ಟಿಗೆ ದೊರೆಯುತ್ತೆ. ಗೋಬರ್‌ಗ್ಯಾಸ್, ಸಿಲಿಂಡರ್, ವಿದ್ಯುತ್ (ಇದ್ದರೆ...?) ಹೀಟರ್ ಆಗ ನಮಗೆ ಬೇಡಿತ್ತು. ಈಗ ಪರಿಸ್ಥಿತಿ ಏನಾಗಿದೆ ? 'ಇದೆಲ್ಲಾ ಗೊಡ್ಡು ಸಂಪ್ರದಾಯ ಕಣಯ್ಯ' ಅಂದರೆ ಹೇಗೆ ? ಹೀಗೆಂದಾಕ್ಷಣ ಗೊಡ್ಡು ಸಂಪ್ರದಾಯಗಳು ಇಲ್ಲವೆಂದೂ ಅರ್ಥವಲ್ಲ. ಸಂಪ್ರದಾಯಗಳ ಬಗೆಗೆ ನಮಗಿರೋ ದೃಷ್ಟಿಗೆ ಒಳನೋಟವೊಂದರ ಅಗತ್ಯವಿದೆ, ಅಲ್ಲವೆ ?

**ಬಂದಗದ್ದೆ ರಾಧಾಕೃಷ್ಣ**
ಕೆಳದಿ - ೫೭೭ ೪೦೧, ಸಾಗರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ

## ಹನಿ ಹಾಯ್ಕುಗಳು

೧

ಕತ್ತಲು ಕಪ್ಪಿರಬಹುದು;
ನಮ್ಮ ಮನಸಿಗಿಂತಲೂ ಅಲ್ಲ!

೨

ನೆನಪೊಂದಿಲ್ದೇ ಹೋದ್ರೆ –
ನಾವ್-ನಾವು ಎಷ್ಟು ಅಪರಿಚಿತರು!

೩

ಹೂ ಅರಳಿದ್ರಿಂದ
ಅವಳ ನಗೂಗೊಂದರ್ಥ ಅಲ್ವೇ ?

೪

ಎಣಿಸಿದಷ್ಟು ಸಿಗದ
ತಾರೆಗಳಂತೆ ಹಾಳು ಕನಸುಗಳು!



೫

ಹೋಗ್ಲಿ ಬಿಡಿ; ಮುರಿದ್ರೆ
ಮನಸು ನೆನಪಿನ ಬೆಸುಗೆ ಇದೆ!

೬

ಎದೆಯ ಚಿತ್ತಾರಕ್ಕೆ
ರಂಗು ತುಂಬೋಳೆಲ್ಲೆಂಬ ಚಿಂತೆ ?

೭

ದೀಪಕ್ಕೂ ನಗು
ತನ್ನ ಕೆಳಗಿನ ನೆರಳಿನಾಟ ನೋಡಿ!

ಸಂತೇಬೆನ್ನೂರು ಫೈಜ್ನಟ್ರಾಜ್
ಸರ್ಕಾರಿ ಪ್ರೌಢಶಾಲೆ, ಕಣಿವೆಬಿಳಚಿ - ೫೭೭ ೨೩೧
ಚನ್ನಗಿರಿ ತಾಲ್ಲೂಕು, ದಾವಣಗೆರೆ ಜಿಲ್ಲೆ

# ಶ್ರೀಮತಿ ಜಿ. ಗೀತಾ ನಾಗಭೂಷಣರ ಕಥೆಗಳಲ್ಲಿ ಪ್ರಾದೇಶಿಕತೆ



ಕಾದಂಬರಿಕಾರ್ತಿ ಎಂದೇ ಹೆಚ್ಚು ಪರಿಚಿತರಾದ ಶ್ರೀಮತಿ ಜಿ. ಗೀತಾ ನಾಗಭೂಷಣ ಅವರು ಕತೆಗಾರ್ತಿಯೂ ಹೌದು. ಕತೆ-ಕಾದಂಬರಿಕಾರ್ತಿ ಎಂದು ಸಂಬೋಧಿಸದೆ ಉದ್ದೇಶಪೂರ್ವಕ ವಾಗಿಯೇ ನಾನಿಲ್ಲಿ ಕತೆಗಾರ್ತಿಯೂ ಹೌದು ಎಂದು ದನಿ ಹೊರಡಿಸಿದ್ದೇನೆ. ಏಕೆಂದರೆ, ಎರಡು ಡಜನ್‌ಗಿಂತಲೂ ಹೆಚ್ಚಿನ ಸಂಖ್ಯೆಯ ಕಾದಂಬರಿಗಳನ್ನು ಸಾರಸ್ವತ ಲೋಕಕ್ಕೆ ನೀಡಿರುವ ಈ ಲೇಖಕಿ, ತಮ್ಮ ಬದುಕಿನ ಈ ಸುದೀರ್ಘ ಅವಧಿಯಲ್ಲಿ ಎರಡು ಕಥಾ ಸಂಕಲನ ಗಳನ್ನು ಮಾತ್ರ ಪ್ರಕಟಿಸಿರುವುದು ಗಮನಿಸಿದರೆ ನಾನು ಹೇಳಿದ್ದು ಸರಿಯಾಗಿದೆಯೆಂದೇ ಭಾವಿಸಿಕೊಂಡಿದ್ದೇನೆ. ಗ್ರಾಂಥಿಕ ಭಾಷೆಯಲ್ಲಿಯೂ ಹೆಚ್ಚಿನ ಬರವಣಿಗೆ ಲೇಖಕಿ ನೀಡಿದ್ದಾರೆ. ಆದರೆ ಈ ಶಿಷ್ಟ ಭಾಷೆಯಲ್ಲಿ ಕತೆಗಳು ಮಾತ್ರ ಅತೀ ವಿರಳವೆಂದೇ ಹೇಳಬೇಕು. ನನ್ನ ಮಾತಿನ ತಾತ್ಪರ್ಯವೆಂದರೆ, ಕಥಾ ರಚನೆಯಲ್ಲಿ ಶ್ರೀಮತಿ ಗೀತಾ ಅವರ ಒಲವು ಹೆಚ್ಚು ಹೆಚ್ಚು ಪ್ರಾದೇಶಿಕ ಭಾಷೆಯತ್ತಲೇ ಇದೆ ಅನ್ನುವುದೇ ಆಗಿದೆ.

**ಚಿತ್ರಶೇಖರ ಕಂಠಿ**

**ಕಾ**ದಂಬರಿಕಾರ್ತಿ ಎಂದೇ ಹೆಚ್ಚು ಪರಿಚಿತರಾದ ಶ್ರೀಮತಿ ಜಿ. ಗೀತಾ ನಾಗಭೂಷಣ ಅವರು ಕತೆಗಾರ್ತಿಯೂ ಹೌದು. ಕತೆ-ಕಾದಂಬರಿಕಾರ್ತಿ ಎಂದು ಸಂಬೋಧಿಸದೆ ಉದ್ದೇಶಪೂರ್ವಕವಾಗಿಯೇ ನಾನಿಲ್ಲಿ ಕತೆಗಾರ್ತಿಯೂ ಹೌದು ಎಂದು ದನಿ ಹೊರಡಿಸಿದ್ದೇನೆ. ಏಕೆಂದರೆ, ಎರಡು ಡಜನ್‌ಗಿಂತಲೂ ಹೆಚ್ಚಿನ ಸಂಖ್ಯೆಯ ಕಾದಂಬರಿಗಳನ್ನು ಸಾರಸ್ವತ ಲೋಕಕ್ಕೆ ನೀಡಿರುವ ಈ ಲೇಖಕಿ, ತಮ್ಮ ಬದುಕಿನ ಈ ಸುದೀರ್ಘ ಅವಧಿಯಲ್ಲಿ ಎರಡು ಕಥಾಸಂಕಲನಗಳನ್ನು ಮಾತ್ರ ಪ್ರಕಟಿಸಿರುವುದು ಗಮನಿಸಿದರೆ ನಾನು ಹೇಳಿದ್ದು ಸರಿಯಾಗಿದೆಯೆಂದೇ ಭಾವಿಸಿಕೊಂಡಿದ್ದೇನೆ. ಹಾಗೆ ನೋಡಿದರೆ ನೂರಾರು ಕತೆಗಳನ್ನು ರಚಿಸಿರುವ ಗೀತಾ ನಾಗಭೂಷಣ ಅವರು, ಅನೇಕ ಕತೆಗಳು ಕನ್ನಡದ ಜನಪ್ರಿಯ ಪತ್ರಿಕೆಗಳಲ್ಲಿ, ಬಹುತೇಕ ವಿಶೇಷಾಂಕಗಳಲ್ಲಿ ಪ್ರಕಟಿಸುವುದರ ಮೂಲಕ ಕತೆಗಾರ್ತಿಯಾಗಿಯೂ ನಮಗೆ ಚಿರಪರಿಚಿತರೆ.

''ನೀಲಗಂಗಾ'', ''ಹಸಿ ಮಾಂಸ ಮತ್ತು ಹದ್ದುಗಳು'', ''ಮಾಪುರ ತಾಯಿಯ ಮಕ್ಕಳು'', ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತ ಬೃಹತ್ ಕಾದಂಬರಿ ''ಬದುಕು'' ಇತ್ಯಾದಿ ಕಾದಂಬರಿಗಳು, ಹೆಚ್ಚೂ ಕಡಿಮೆ ಹೈದರಾಬಾದ್ ಕರ್ನಾಟಕದ ಅದರಲ್ಲೂ ಕಲಬುರ್ಗಿ ಜಿಲ್ಲೆಯ ಆಡು ಭಾಷೆಯಲ್ಲೇ ರಚನೆಯಾಗಿರುವುದು ನಾವು ಕಾಣುತ್ತೇವೆ. ಜೊತೆಗೇ ಗ್ರಾಂಥಿಕ ಭಾಷೆಯಲ್ಲಿಯೂ ಹೆಚ್ಚಿನ ಬರವಣಿಗೆ ಲೇಖಕಿ ನೀಡಿದ್ದಾರೆ. ಆದರೆ ಈ ಶಿಷ್ಟ ಭಾಷೆಯಲ್ಲಿ ಕತೆಗಳು ಮಾತ್ರ ಅತೀ ವಿರಳವೆಂದೇ ಹೇಳಬೇಕು. ನನ್ನ ಮಾತಿನ ತಾತ್ಪರ್ಯವೆಂದರೆ, ಕಥಾ ರಚನೆಯಲ್ಲಿ ಶ್ರೀಮತಿ ಗೀತಾ ಅವರ ಒಲವು ಹೆಚ್ಚು ಹೆಚ್ಚು ಪ್ರಾದೇಶಿಕ ಭಾಷೆಯತ್ತಲೇ ಇದೆ ಅನ್ನುವುದೇ ಆಗಿದೆ.

ಸ್ವಾತಂತ್ರ್ಯಪೂರ್ವದಲ್ಲೇ ರಾಷ್ಟ್ರಕವಿ ಕುವೆಂಪು ಅವರು ಮಲೆನಾಡಿನ ಆಡುಭಾಷೆಯನ್ನು ತಮ್ಮ ಬರವಣಿಗೆಯಲ್ಲಿ ಯಥೇಚ್ಛವಾಗಿ ಬಳಸಿಕೊಂಡಿದ್ದರೆನ್ನುವ ಕುತೂಹಲಕರ ಸಂಗತಿ ಅವರ ರಚನೆಗಳಿಂದ ತಿಳಿದುಬರುತ್ತದೆ. ಇಲ್ಲಿ ಸಣ್ಣ ಕತೆಗಳ ಜನಕ ಮಾಸ್ತಿ, ದೇವುಡು, ಲಂಕೇಶ, ಸದಾಶಿವ, ಚಿತ್ತಾಲ ಮೊದಲಾದವರನ್ನೆಲ್ಲ ಬೇಕೆಂದೇ ಬಿಟ್ಟು ಕುವೆಂಪು ಅವರ ಹೆಸರು ಉಲ್ಲೇಖಿಸಿದ್ದೇನೆ. ಕಾರಣವಿಷ್ಟೆ..., ಕುವೆಂಪು ಅವರು ಮೂಲತಃ ಕವಿ ಮತ್ತು ನಾಟಕಕಾರರಾಗಿದ್ದೂ ಅನೇಕ ಸಣ್ಣ ಕತೆಗಳನ್ನು ಬರೆದು ಕತೆಗಾರರೂ ಅನ್ನಿಸಿಕೊಂಡಿದ್ದಾರೆ. ಕೆ. ವಿ. ಪುಟ್ಟಪ್ಪ ಅವರ ''ಯಾರೂ ಅರಿಯದ ವೀರ'' ಕಥೆಯಲ್ಲಿ ಎಂಥಾ ಸೊಗಸಾದ ಆಡುನುಡಿಗಳನ್ನು ಬಳಸಿಕೊಂಡಿದ್ದಾರೆನ್ನುವುದಕ್ಕೆ ಉದಾಹರಣೆ ನೋಡುವುದಾದರೆ, ಸುಬ್ಬಣ್ಣಗೌಡರು ಲಿಂಗನನ್ನು ಕುರಿತು :

''ಮೇಲ್ಮಳೆ ಬಹಳ ಜೋರಾಗಿದೆಯಂತೆ, ಶೃಂಗೇರಿ ಆ ಕಡೆಯಂತೂ ಒಂದು ನಿಮಿಷ ಬಿಡದೇ ಹೊಡೆಯುತ್ತಿದೆಯಂತೆ'' ಎಂದು ಹೇಳುತ್ತಾರೆ. ಇದೇ ಕತೆಯಲ್ಲಿ ಲಿಂಗ ಹೇಳ್ತಾನೆ...

''ಹೌದ್ರಯ್ಯ, ಎಲ್ಲಾ ಕಟ್ಟಿದ್ದೇನೆ. ತುಂಗೆದನ, ಪುಟ್ಟಗುಡ್ಡ ಯಲ್ಡು ಮಾತ್ರ ಕೊಟ್ಟಿಗೆಗೆ ಬರಲೇ ಇಲ್ಲ'' ಎಂದು.

ಲೇಖಕ ಯಾ ಲೇಖಕಿಯಾದವರು ನಿರಂತರ ಶೋಧಕರೆಂದು ನಾನು ಭಾವಿಸಿದ್ದೇನೆ. ಅಂತರಾತ್ಮದ ಉತ್ಖನನದ ಮುಖೇನ ಬರವಣಿಗೆಗೆ ತೊಡಗಿಸಿಕೊಂಡ ಒಬ್ಬ ಸೈದ್ಧಾಂತಿಕ ಕತೆಗಾರನನ್ನು ಕುರಿತು ಇನ್ನೊಬ್ಬ ಮಹಾನ್ ಲೇಖಕ, ಕತೆಗಾರನ ವ್ಯಾಖ್ಯಾನ ಹೇಗಿದೆ ಅನ್ನುವುದೊಂದಿಷ್ಟು ನಾವಿಲ್ಲಿ ನೋಡಬಹುದೇನೊ. ದೇವನೂರ ಮಹಾದೇವರನ್ನು ಕುರಿತು ಪಿ. ಲಂಕೇಶ ಅವರು:

''ಮಹಾದೇವ ಸೋಮಾರಿತನದ, ಡೋಲಾಯಮಾನದ, ಹಿಂಜರಿಕೆಯ ವ್ಯಕ್ತಿ. ಇದೆಲ್ಲದರ ಆಳದಲ್ಲಿ ಹರಿತವಾದ ಸೂಕ್ಷ್ಮ ಮನಸ್ಸಿನ ನ್ಯಾಯವಂತ ಮನುಷ್ಯ ಕೂಡ ಎಂದು ಕರೆಯುತ್ತಲೇ, ಸಾಹಿತಿಯಾದವನು ಎಲ್ಲರಂತೆ ನೋಡ ಬಯಸುತ್ತಾನೆ. ಮನುಷ್ಯ, ಮರ, ಪ್ರಾಣಿ, ಆಕಾಶ, ಮಣ್ಣು ಇದೆಲ್ಲದರ ಖಚಿತ ಗುಣ ಮತ್ತು ಗಾತ್ರ ಅವನಿಗೆ ತಿಳಿಯುವುದೇ ಹೀಗೆ. ಆದರೆ ಎಲ್ಲರಂತೆ ನೋಡುತ್ತಿರುವಾಗಲೇ ಅವನಿ/ಳಿಗೆ ವಿಶೇಷವಾದದ್ದು ಕಾಣುತ್ತದೆ. ಅಂತಹ ವಿಶ್ವಾಸ ಅವನ/ಳಲ್ಲಿದ್ದರೆ ಮಾತ್ರ ಅವನು/ಳು ಅದನ್ನು ಆದಷ್ಟು ಸಮರ್ಪಕವಾಗಿ ಹೇಳುವ ವಿಧಾನಗಳನ್ನು ಕಂಡುಕೊಳ್ಳುತ್ತಾನೆ/ಳೆ. ಪ್ರೀತಿ, ಔದಾರ್ಯವಿಲ್ಲದಿದ್ದರೆ, ತನ್ನ ಬಗ್ಗೆ ನಿಷ್ಠುರತೆ ಮತ್ತು ಇತರರ ಬಗ್ಗೆ ಸಹಾನುಭೂತಿ ಇಲ್ಲದಿದ್ದರೆ ಜೀವನದ ಬಾಗಿಲು ಲೇಖಕನಿಗೆ ತೆರೆಯುವುದೇ ಇಲ್ಲ'' ಅಂದಿರುವ ಲಂಕೇಶರ ಈ ಮಾತುಗಳು ಶ್ರೀಮತಿ ಗೀತಾ ಅವರ ವಿಷಯದಲ್ಲಂತೂ ಅಕ್ಷರಶಃ ನಿಜವೆಂದೇ ಹೇಳಬೇಕು. ಏಕೆಂದರೆ ಶೋಷಿತರ ನೋವಿಗೆ ಸ್ಪಂದಿಸುವ, ನೊಂದವರಿಗೆ ನೆಮ್ಮದಿಯ ನುಡಿ ಸಾಂತ್ವನ ಹೇಳುವ, ಅಬಲೆಯರಿಗೆ ಸಬಲತೆಯ ಕಿಚ್ಚು ತುಂಬುವ, ಅಸಹಾಯಕರಿಗೆ ಆಶ್ರಯದ ಅಭಯಹಸ್ತ ನೀಡುವ ಮತ್ತು ಬಲಾತ್ಕಾರ, ದೌರ್ಜನ್ಯಗಳಿಗೆ ಬಲಿಯಾಗಿ, ಬಿಸಿಯುಸಿರಿಂದ ಬಿಕ್ಕುವವರ ಬೆನ್ನಿಗೆ ಗುದ್ದಿ, ಬಡಿದೆಬ್ಬಿಸಿ, ಬಂಡೆದ್ದು ಬಲ ಪ್ರದರ್ಶಿಸುವ ಅಗಣಿತ ಪಾತ್ರಗಳು ಅನೇಕ ಕತೆಗಳಲ್ಲಿ ಹಸಿ ಹಸಿಯಾಗಿ ಚಿತ್ರಿಸಿದ್ದಾರೆ ಲೇಖಕಿ ಗೀತಾ ಅವರು. ಉದಾಹರಣೆಗಾಗಿ, ದೀಪಾವಳಿ ವಿಶೇಷಾಂಕದಲ್ಲಿ ಪ್ರಕಟವಾಗಿರುವ ''ಬಂಜೆಂಬ ಶಬುದ ಹೊರಲಾರೆ'' ಕತೆಯ ಕೆಲವು ಸಂಭಾಷಣೆಗಳು: ಗೌಡನ ಮಗಳು ಪಾರ್ವತಿ ಕೆಂಪಂಚಿನ ದಟ್ಟ ಹಸುರಿನ ಚೌಕಳಿಯ ಇಳಕಲ್ ಸೀರೆ ಉಟ್ಟು, ರಕ್ತಗೆಂಪಿನ ಗುಳೇದಗುಡ್ಡದ ಕುಪ್ಪಸ ತೊಟ್ಟು, ಅನ್ನುವ ಅವಳ ಉಡುಗೆ-ತೊಡುಗೆಯಿಂದಲೇ ಆರಂಭವಾಗುವ ಪಕ್ಕಾ ಪ್ರಾದೇಶಿಕತೆ ಮುಂದುವರಿದು ಆ ಪಾತ್ರದ ಮಾತುಗಳಲ್ಲಿಯೂ ಅಪ್ಪಟ ಆಡುಮಾತು ಹೀಗೆ ಮೂಡಿಬಂದಿವೆ, ''ಕಣಕ್ಕೆ ದಾನ ಬೇಡಲು ಬಂದ ಶಾಣಪ್ಪ ಮುತ್ಯಾನನ್ನು ಕುರಿತು ಪಾರ್ವತಿ...''

''ಶ್ಯಾಣಪ್ಪ ಮುತ್ಯಾ... ಒಂದು ಮರ ಜ್ವಾಳಾ ನಿನ್ನ ಹೊಟ್ಟಿಗಿ. ಇಗಾ ನನ್ನ ಕಡಿಂದ ಇನ್ನೊಂದು ಮರ ಜ್ವಾಳಾ ನಿನ್ನ ಬೀಡಿ ಗಟ್ಟಕ್ಕ'' ಎಂದು ಹೇಳುತ್ತಾಳೆ. ಎಲ್ಲವೂ ನಮ್ಮ ಗ್ರಾಮೀಣ ಪ್ರದೇಶದ ಜನರು ಬಳಸುವ ಸಹಜ ನುಡಿಗಳೇ.

''ಕಟಗೊಂಡಂವಾ ನಡುಮಧ್ಯಾಣದಾಗೇ ಕೈ ಬಿಟ್ಟು ಕಣ್ಮುಚ್ಚಿದ. ಇದ್ದೊಂದು ಮಗನ ಮ್ಯಾಲ ತಪಾಗಳಿದಿನೇ ನಾನು ಶಿವಮ್ಮಕ್ಕಾ..., ಒಂದಕ್ಕ ಹತ್ತಾಗ್ತಾವ... ನಮ್ಮ ಮನಿತನಾ ಹೊಳಿ ದಂಡ್ಯಾಗಿನ ಕರಕಿ ಬೇರಿನ್ಹಾಂಗ ಹಬ್ಬತಾದ, ಅಂತ ತಿಳ್ಕೊಂಡ್ರ ಹಿಂಗಾಯ್ತು ನೋಡು. ಮಗನ ಮದ್ವಿ ಆಗಿ ನಾಕೊರ್ಸಾದ್ರೂ ಮನ್ಯಾಗ ಒಂದು ಕೂಸಿನ ಅಳು ಕೇಳಲಿಲ್ಲ, ನಗು ಕೇಳಲಿಲ್ಲ. ನನಗ ಹಿಂತಾ ಗೊಡ್ಡು ಸೊಸಿ ಗಂಟು ಬಿತ್ತು.''

ಇದೇ ಕತೆಯ ಈ ಸಂಭಾಷಣೆಯಲ್ಲಿ ಲೇಖಕಿ ಎಂತಹ ಅದ್ಭುತವಾದ ಉಪಮೆಗಳನ್ನು ಬಳಸಿದ್ದಾರೆನ್ನುವುದು ಗೋಚರ ವಾಗುತ್ತದೆ. ಗಂಡ ಅನ್ನುವುದಕ್ಕೆ ಪರ್ಯಾಯವಾಗಿ ಕಟಗೊಂಡವ, ಅಕಾಲಿಕ ಅನ್ನುವುದಕ್ಕೆ ನಡುಮಧ್ಯಾಣ, ಭರವಸೆಗೆ ತಪಾಗಳದೀನಿ, ಮನೆ ತುಂಬ ಮಕ್ಕಳು ಅನ್ನುವುದಕ್ಕೆ ಕರಕಿ ಬೇರಿನ್ಹಂಗ ಹಬ್ಬತಾವ, ಬಂಜೆ ಅನ್ನುವಲ್ಲಿ ಗೊಡ್ಡು ಸೊಸೆ ಹೀಗೆ ಈ ಎಲ್ಲ ಸಾಲುಗಳು ಒಬ್ಬ ಓದುಗ ಓದುವಾಗ ನಮ್ಮ ಹಳ್ಳಿಯ ಪಾತ್ರಗಳೇ ಜೀವ ತಳೆದು ಓದುಗನೆದುರು ಅನಾವರಣಗೊಂಡಂತೆ ಭಾಸ ವಾಗುತ್ತದೆ.... ಹೀಗಾಗಬೇಕು ಕೂಡ. ಏಕೆಂದರೆ ಒಂದು ಕತೆಯ ವಸ್ತು, ಪರಿಸರ, ಭೌಗೋಳಿಕ, ಸಾಮಾಜಿಕ ಚಿತ್ರಣ, ಊಟ, ಉಡುಗೆ, ತೊಡುಗೆ ಎಲ್ಲವೂ ಒಂದು ನಿಖರವಾದ ಪ್ರದೇಶವನ್ನು ಪ್ರತಿನಿಧಿಸುವ ಸಂದರ್ಭದಲ್ಲಿ ಪಾತ್ರಗಳ ಮಾತುಗಳು ಸಹ ಅತ್ಯಂತ ಮಹತ್ವ ಪಡೆದುಕೊಳ್ಳು ವುದರಿಂದ ಪ್ರಾದೇಶಿಕ ಭಾಷೆಯೂ ತಾನೇ ತಾನಾಗಿ ತೆರೆದುಕೊಳ್ಳುವುದು ಶ್ರೀಮತಿ ಗೀತಾ ಅವರ ಕತೆಗಳಲ್ಲಿ.

ಲೇಖಕರಾದವರು ಪಾತ್ರಗಳು ಮಿಂಚಲಿ, ಮೆರೆಯಲಿ ಎಂದು ಭಾವಿಸುವುದು ಬಹಳ ಅಪರೂಪ. ನೊಂದ, ಶೋಷಿತ, ಅಸಹಾಯಕ ಪಾತ್ರಗಳು ಹಾಗೂ ಅವುಗಳ ದನಿ ತಾನೇ ಹೊರಡುತ್ತದೆ. ಇಲ್ಲಿ ಶ್ಲೀಲ-ಅಶ್ಲೀಲ ಅನ್ನುವುದೇ ಗೌಣ.

ಒಂದೆಡೆ ಲೇಖಕಿ ಶ್ರೀಮತಿ ಗೀತಾ ಅವರು ಬರೀತಾರೆ...: ''ನನ್ನ ಮಗನ ಕೈ ಗುಣಾನೇ ಹಂತದ್ದವಾ. ಅಂವ ಬಿತ್ತಿದ ಬೀಜಾ ಒಂದನೂ ಹುಸಿ ಹೋಗಿಲ್ಲ. ಆದರ ಈ ಹೆಣ್ತಿ ಹೊಟ್ಟ್ಯಾಗ ಬಿತ್ತಿದ ಬೀಜಗೊಳೇ ಹುಸಿ ಆಗಲಕತ್ತಾವಲ್ಲ ಅಂತ ಚಿಂತ್ಯಾಗ್ಯಾದವ್ವ ನನಗ'' ಎಂದು. ಇದೇ ಸಂದರ್ಭದಲ್ಲಿ, ದೇವನೂರ ಮಹಾದೇವರ ''ಒಡಲಾಳ''ದ ಒಂದು ಸಂಭಾಷಣೆಯನ್ನು ನಾನಿಲ್ಲಿ ಉಲ್ಲೇಖಿಸಲು ಇಷ್ಟಪಡುತ್ತೇನೆ; ಶಾಲೆಯಿಂದ ಮನೆಗೆ ಬಂದ ಮೊಮ್ಮಗಳು ಪುಟಗೌರಿ, ತಾನು ಬರೆದ ನವಿಲಿನ ಚಿತ್ರ ಹೇಗಿದೆ ನೋಡು ಎಂದು ತನ್ನ ಅಜ್ಜಿಯಲ್ಲಿ ಕೇಳಿಕೊಂಡಾಗ ಸಾಕವ್ವ ಅತ್ಯಂತ ಸಹಜವಾಗಿಯೇ ಮೊಮ್ಮಗಳನ್ನು ಕುರಿತು ಹೇಳ್ತಾಳೆ...:

''ತಗಾ ಅದ್ಯಾರೋ ಒಬ್ಬಳು, ಕುಟ್ಟೋ ಭತ್ತ ಬುಟ್ಟು ಹುಟ್ಟೋ ಶ್ಯಾಟ ನೋಡ್ಕಂತಿದ್ಲಂತೆ'' ಎಂದು.

ಇಂತಹ ಸಂಭಾಷಣೆಗಳು ಮಡಿವಂತ ಓದುಗರಲ್ಲಿ ಮುಜುಗರ ಉಂಟುಮಾಡಬಹುದು, ಬೇಸರವೂ ತರಿಸ ಬಹುದು. ಆದರೆ ಎಂತಹ ಪರಿಸರದಲ್ಲಿ ಯಾವ ವ್ಯಕ್ತಿ ಈ ಮಾತು ಹೇಳುತ್ತಿದ್ದಾನೆ ಅಥವಾ ಹೇಳುತ್ತಿದ್ದಾಳೆ ಅನ್ನುವ ವಾಸ್ತವತೆಯ ಅರಿವಾದಾಗ ಎಲ್ಲವೂ ಸಹಜವೆನ್ನಿಸದಿರದು. ಮನೆಯಲ್ಲಿ ರಾಶಿ ರಾಶಿ ಕೆಲಸವಿರುವಾಗ ಮೊಮ್ಮಗಳ ನವಿಲಿನ ಚಿತ್ರ ಸಾಕವ್ವನಿಗೆ ಮುಖ್ಯವೇ ಅಲ್ಲ. ಅಂತೆಯೇ ಸಹಜವಾಗಿ ಈ ಮಾತು ಹೇಳುತ್ತಾಳೆ. ಶ್ರೀಮತಿ ಗೀತಾ ಅವರ ಕತೆಯ ಸಂದರ್ಭದಲ್ಲಿಯೂ ಅಷ್ಟೇ. ತಾಯಿಯ ದೃಷ್ಟಿಯಲ್ಲಿ ತನ್ನ ಮಗನೇನೋ ಪುರುಷಸಿಂಹನೇ. ಆದರೆ ತನ್ನ ಸೊಸೆ ಮಾತ್ರ ಬಂಜೆ ಅನ್ನುವ ತಾತ್ಸಾರ.

ಎಲ್ಲ ಭಾಗಗಳಲ್ಲಿಯೂ ಆಯಾ ಪ್ರಾದೇಶಿಕ ಭಾಷೆ ಗಳೊಂದಿಗೇ ಆ ಭಾಗದ ನೆರೆಯ ಭಾಷೆಗಳ ಅನೇಕ ಪದಗಳು, ನುಡಿಗಟ್ಟುಗಳು ನಮ್ಮವೇ ಅನ್ನುವಷ್ಟರ ಮಟ್ಟಿಗೆ ನಮ್ಮೆಲ್ಲರ ದೈನಂದಿನ ಕಲಾಪಗಳಲ್ಲಿ ಕಲೆತು, ಬೆರೆತು ಒಂದಾಗಿ ಮಿಳಿತ ವಾಗುತ್ತವೆ. ಉದಾಹರಣೆಗೆ ಹೈದರಾಬಾದ್ ಕರ್ನಾಟಕ ಪ್ರದೇಶದ ಕನ್ನಡದಲ್ಲಿ ಹಾಸು ಹೊಕ್ಕಾಗಿರುವ ಉರ್ದು ಮತ್ತು ಮರಾಠಿ ಪದಗಳು. ಯಾರೋ, ಟೈಂ ಎಷ್ಟು? ಅಂತ ಕೇಳಿದರೆ ಥಟ್ಟನೆ ಬರುವ ಉತ್ತರ, ''ಸಾಡೇಗ್ಯಾರ'' ಅಥವಾ ''ಸಾಡೇಅಖರಾ'' ಎಂದು. ಜೊತೆಗೇ ಹನ್ನೊಂದು ವರೆ ಎಂದೂ ಹೇಳುವವರೂ ಇಲ್ಲದಿಲ್ಲ. ''ತುಮ್ ಕಾಲಿ ಹೈ ತೋ ಕ್ಯಾ ಹುವಾ ದಿಲ್‌ವಾಲೀ ಹೋ...''; ''ಹಮಕೋ... ಹಮಕೋ... ಹಮಕೋ... ಭೀ ಏಕ್ ಚಾನಸ್ ದೋ...''; ''ಪೋರಗಿ ಫಸಲಿಗ... ಫಸಲೀ...'' ಅನ್ನುವ ಶ್ರೀಮತಿ ಗೀತಾ ಅವರ ಈ ಹಿಂದೀ, ಉರ್ದು, ಬೀದರ ಭಾಷೆ ಮಿಶ್ರಿತ ಸಂಭಾಷಣೆ ಅವರ ''ಮೂಡಿ ಬರ್ತಾನ ಚಂದ್ರಾಮ ನೋಡ...'' ಕತೆಯಲ್ಲಿ ಓದುತ್ತೇವೆ. ಹಾಗೆಯೇ, ''ನಾವಿಬ್ರೂ ಹೇಳಿ ಕೇಳಿ **ಲಾವಾರಿಸಗೋಳು**; ಇದರಾಗ ನಂದೇನು ನಿನ್ನ ಮ್ಯಾಲ ಜೋರಿ **ಜಬರದಸ್ತಿಯವಾದನೂ** **ಬಿಲ್‌ಕುಲ್** ಇಲ್ಲ; ನನ್ನ ಮ್ಯಾಲ **ಭರೋಸಾ** ಇಡು; **ದವಾಖಾನಿ** ಮುಂದಿನ ಲಂಗಾ, **ಲಫಂಗ** ಗಂಡುಗೋಳು ನಿನ್ನ **ಇಜ್ಜತಕ** ಕೈ ಹಾಕತಿದ್ದರು'' ಎಂಬ ಮಾತುಗಳು.

ಈ ಮೇಲಿನ ಸಂಭಾಷಣೆಯ ಎಲ್ಲ ತುಣುಕುಗಳೂ ಶ್ರೀಮತಿ ಗೀತಾ ಅವರ ''ಮೂಡಿ ಬರ್ತಾನ ಚಂದ್ರಾಮ ನೋಡ...'' ಕತೆಯಿಂದಲೇ ಆರಿಸಿಕೊಂಡಿದ್ದೇನೆ. ಈ ಭಾಗದ ಅನ್ಯ ಭಾಷೆಗಳು ಕೂಡ ನಮ್ಮ ಆಡುಮಾತುಗಳಲ್ಲಿ ಆಳಕ್ಕೆ ಬೇರುಬಿಟ್ಟು ಕನ್ನಡದ ಪದಗಳೇ ಆಗಿ ಹೋಗಿವೆ. ಲಾವಾರಿಸ್, ಬಿಲ್‌ಕುಲ್, ಜಬರದಸ್ತಿ, ಭರೋಸಾ, ದವಾಖಾನಿ, ಲಫಂಗ್ ಮತ್ತು ಇಜ್ಜತ್ ಇತ್ಯಾದಿ ಉರ್ದು ಪದಗಳಿಗೆ ನಾವ್ಯಾರೂ ನಿಘಂಟು ತೆರೆದು ಅರ್ಥ ಹುಡುಕುವುದಿಲ್ಲ. ಅನಾಥ, ಖಂಡಿತ, ಒತ್ತಾಯ, ನಂಬಿಕೆ, ಆಸ್ಪತ್ರೆ, ಅಯೋಗ್ಯ ಮತ್ತು ಮರ್ಯಾದೆ ಅನ್ನುವ ಅಚ್ಚ ಕನ್ನಡದ ಪದಗಳಿಗೆ ಸಮಾನ ಶಬ್ದಗಳಾಗಿ ನಾವೆಲ್ಲರೂ ಬಳಸುತ್ತಿದ್ದೇವೆ. ಹೀಗೆ ಅತ್ಯಂತ ಸಮರ್ಥ ರೀತಿಯ ಪ್ರಾದೇಶಿಕ ಭಾಷೆಯ ಬಳಕೆ ಶ್ರೀಮತಿ ಗೀತಾ ಅವರ ಬಹುತೇಕ ಕತೆಗಳಲ್ಲಿ ನಾವು ಓದಬಹುದಾಗಿದೆ. ಇಂತಹ ಭಾಷಾ ಬಳಕೆ ಲೇಖಕಿಯ ಲೇಖನಿಗೂ ಹಸಿ ಹಸಿಯಾದ ಚೈತನ್ಯ ತುಂಬುತ್ತಲೇ ಇರುವುದ ರೊಂದಿಗೆ ಅಮೂಲ್ಯವಾದ ಗ್ರಾಮೀಣ ಜನರ ಆಡುನುಡಿಗಳು ಕನ್ನಡ ನಿಘಂಟಿನಲ್ಲಿ ಇಲ್ಲದೆಯೂ, ನಾಲಿಗೆಯಿಂದ ನಾಲಿಗೆಯ ಮೂಲಕ ಜೀವಂತವಾಗಿರಲು ಶಕ್ಯವಿದೆ. ಇಂತಹ ಸ್ತುತ್ಯರ್ಹ ಸಾಹಿತ್ಯ ರಚನೆ ಲೇಖಕಿ ಶ್ರೀಮತಿ ಗೀತಾ ಅವರ ಲೇಖನಿಯ ಮೂಲಕ ಆಗುತ್ತಿರುವುದು ಮೆಚ್ಚುವಂಥದ್ದೇ.

ಶ್ರೀಮತಿ ಗೀತಾ ನಾಗಭೂಷಣ ಅವರು ಕಲಬುರ್ಗಿ ಪ್ರಾಂತ್ಯದ ಹಳ್ಳಿಗಳನ್ನು ಹತ್ತಿರದಿಂದ ಕಂಡಿದ್ದಾರೆ. ಹಳ್ಳಿ ಮಂದಿಯ ಬದುಕಿನೊಂದಿಗೆ ಮುದದಿಂದ ಬೆರೆತಿದ್ದಾರೆ. ಬದುಕು-ಬವಣೆ, ನೋವು-ನಲಿವು, ಆಚಾರ-ವಿಚಾರ, ಪ್ರೀತಿ-ಹಾದರ, ಶಾಂತಿ-ಕಲಹ ಎಲ್ಲವನ್ನೂ ತಮ್ಮ ಲೇಖನಿಗೆ ವಸ್ತುವಾಗಿಸಿದ್ದಾರೆ. ನೊಂದವರಿಗೆ ಸಾಂತ್ವನ ಹೇಳಿದ್ದಾರೆ. ತುಳಿತಕ್ಕೊಳಗಾದವರ ತೊಡೆ, ತೋಳಿಗೆ ಶಕ್ತಿಯಾಗಿದ್ದಾರೆ. ಹೀಗಾದ್ದರಿಂದಲೇ ಬಂಡಾಯ ಧೋರಣೆಯ ಅನೇಕ ಕತೆಗಳು ಇವರು ಬರೆಯಲು ಸಾಧ್ಯವಾಗಿದೆ. ಇಲ್ಲಿಯೂ ಕೂಡ




**ವೈದ್ಯಸಾಹಿತ್ಯ ಕಮ್ಮಟ ಮತ್ತು ಪುಸ್ತಕ ಪ್ರದರ್ಶನ**

ಶಿವಮೊಗ್ಗದಲ್ಲಿ ಜುಲೈ ೩೦ರಿಂದ ಆಗಸ್ಟ್ ೧ರವರೆಗೆ ಕನ್ನಡ ವೈದ್ಯಸಾಹಿತ್ಯ ಕಮ್ಮಟ ಮತ್ತು ವೈದ್ಯಕೀಯ ಸಾಹಿತ್ಯ ರಚನೆಯ ಕಾರ್ಯಾಗಾರ ಹಾಗೂ ಪುಸ್ತಕ ಪ್ರದರ್ಶನ/ಮಾರಾಟ ಕಾರ್ಯಕ್ರಮಗಳು ಜರುಗಿದವು. ಐಎಂಎ ಮತ್ತು ಐಎಂಐ ಕ್ಲಬ್ ಶಿವಮೊಗ್ಗ, ಕನ್ನಡ ವೈದ್ಯಸಾಹಿತ್ಯ ಪರಿಷತ್, ಬೆಂಗಳೂರು, ನವಕರ್ನಾಟಕ ಪಬ್ಲಿಕೇಷನ್ಸ್, ಜಿಲ್ಲಾ ಸರ್ಕಾರಿ ಮೆಗ್ಗಾನ್ ಆಸ್ಪತ್ರೆ ಮತ್ತು ಕರ್ನಾಟಕ ಸಂಘ – ಇವುಗಳ ಜಂಟಿ ಆಶ್ರಯದಲ್ಲಿ ನಡೆದ ಸಮಾರಂಭದಲ್ಲಿ ಹಲವು ವೈದ್ಯರು, ಸಾಹಿತ್ಯಾಸಕ್ತರು ಭಾಗವಹಿಸಿದ್ದರು. ಚಿತ್ರದಲ್ಲಿ (ಎಡದಿಂದ ಬಲಕ್ಕೆ) ಡಾ. ನಂದಾ ಕೋರಿ, ಡಾ. ಕೆ. ಎ. ಅಶೋಕ ಪೈ, ಡಾ. ಕೆ. ಆರ್. ಶ್ರೀಧರ, ಡಾ. ಎಚ್. ಡಿ. ಚಂದ್ರಪ್ಪಗೌಡ ಮತ್ತು ಶ್ರೀ ಪಾಂಡುರಂಗ ಉಡುಪ.

ಶ್ರೀಮತಿ ಗೀತಾ ಅವರು ಪ್ರಾದೇಶಿಕ ಭಾಷೆಯಿಂದ ಒಂದಿಂಚೂ ದೂರ ಸರಿದವರೇ ಅಲ್ಲ. ಎಲ್ಲ ಪರಿಸರ, ಪಾತ್ರ, ಮಾತುಕತೆ, ಹಾಡು, ಘೋಷಣೆಗಳೆಲ್ಲವೂ ಪ್ರಾದೇಶಿಕ ಭಾಷೆಯಲ್ಲಿಯೇ ಇರುವುದು ನಾವು ನೋಡಬಹುದಾಗಿದೆ. ಅಷ್ಟೇ ಏಕೆ, ಚಾರಿತ್ರಿಕ ದಾಖಲೆಯಾಗುಳಿಯುವ, ಪ್ರದೇಶವನ್ನು ಪ್ರತಿನಿಧಿಸುವ ಸ್ಥಳಗಳನ್ನೂ ಯಥೇಚ್ಛವಾಗಿ ಲೇಖಕಿ ಅನೇಕ ಕತೆಗಳಲ್ಲಿ ಬಳಸಿಕೊಂಡಿದ್ದಾರೆ. ಉದಾಹರಣೆಗೆ ಬ್ರಹ್ಮಪುರ, ಮಕ್ತಂಪೂರ, ಲಾಲಗೇರಿ, ಧನಗರ ಗಲ್ಲಿ, ಶಹಾಬಜಾರ್, ಗಂಜ್, ಮಿಲ್, ರೈಲ್ವೇ ಸ್ಟೇಷನ್, ತಿಮ್ಮಾಪುರಿ ಚೌಕ, ರೋಜಾ, ರಾಘವೇಂದ್ರ ಕಾಲೋನಿ, ಗಂಗಾನಗರ ಝೋಪಡಪಟ್ಟಿ, ಚೋಮ ನಗರ ಝೋಪಡಪಟ್ಟಿ, ಕಿಲ್ಲೆ ಝೋಪಡಪಟ್ಟಿ ಇತ್ಯಾದಿ.

''ಸಾವಿರೊರ್ಷಿನ ನಿದ್ದಿ ತೊರದೇಳ್ರೀ...
ಸಾಕಿನ್ನ ಮಲಗಿದ್ದು ಎದ್ದೇಳ್ರೀ...
ಬಿಳಿ ಮಂದಿ, ಬಿಳಿ ಹಂದಿ, ಕೆಂಪಿರುವು ಕಡಿತಾವು
ಸಮಜಾಯಿಸಿ ಒಪ್ಪಂದ ಬ್ಯಾಡ ನಮಗ
ನಂಬಿ ಕುತ್ತಿಗಿ ಕೊಟ್ಟು ಕೆಟ್ಟೇವಿ...
ಇನ್ ಮುಂದ ಕುಡಿಗೋಲು ಹಿಡ್ಕೊಂಡು ಎದ್ದೇಳ್ರೀ..''

''ಮತ್ತೆ ಅದೇ ಕತೆ''ಯ ಈ ಸಂಭಾಷಣೆ ಓದುವಾಗ ಲೇಖಕಿಯ ಬಂಡಾಯ ಧೋರಣೆ ವ್ಯಕ್ತವಾಗುತ್ತದೆ. ಎಲ್ಲ ಘೋಷಣೆಗಳೇ, ಆದರೆಲ್ಲೂ ಗ್ರಾಂಥಿಕ ಭಾಷೆಯ ನೆರಳಿಲ್ಲ.

ಒಬ್ಬ ಸುಶಿಕ್ಷಿತ ದಲಿತ ಅಧಿಕಾರಿ ಇನ್ನೊಬ್ಬ ಸುಶಿಕ್ಷಿತ ದಲಿತ ಯುವಕನನ್ನು ವಾಸ್ತವದತ್ತ ಎಳೆತರುವ, ಸಾಮಾಜಿಕ ಸಮಾನತೆಗಾಗಿ ಹೋರಾಡುವ ಕೈಂಕರ್ಯ ಒದಗಿಸುವ ಕೆಲಸ ನಡೆಯುತ್ತದೆ. ಶ್ರೀಮತಿ ಗೀತಾ ಅವರ ''ಪುಂಡಿ ಪೂಜಾರಿಯಾದಾಗ'' ಕತೆಯಲ್ಲಿ ಹಳ್ಳಿಯ ಒಬ್ಬ ದಲಿತ ಯುವಕ ಯಾವುದೇ ಆಡಂಬರ ಇಲ್ಲದೇ ಎಷ್ಟು ಸಹಜವಾಗಿ ತನ್ನ ಆಡುಭಾಷೆಯಲ್ಲೇ ಮಾತಾಡುತ್ತಾನೆ ಅನ್ನುವುದನ್ನು ಈ ಸಂಭಾಷಣೆಯ ಮೂಲಕ ತಿಳಿದುಕೊಳ್ಳಬಹುದು. ''ತೋಬಾ... ತೋಬಾರ್ರೀ... ಸಾಹೇಬ್ರೆ... ಹೀಂಗಂದು ನನಗ ಪಾಪದಾಗ ಹಾಕಬ್ಯಾಡ್ರೀ. ನಾನಂತೂ ಹೇಳಿಕೇಳಿ ಹೊಲ್ಯಾ. ದಿನ ಬೆಳಗಾದ್ರ ಖಂಡಾ ತಿಂದು, ಸಿಂದಿ ಕುಡ್ದು, ರಾತ್ರಿಯೆಲ್ಲ ಮೈಲಿಗಿಯಾಗೋ ಕಮ್ಮ ಜಾತಿಯಂವಾ, ಆ ಮಾತಾಯಿ ಮಹಾಲಕ್ಷ್ಮೀ ಪೂಜಾಕ್ಕ ನಾ ಯೋಗ್ಯ ಅಲ್ರಿ.'' ಈ ಕತೆಯಲ್ಲೂ ಸವರ್ಣೀಯರು ಮತ್ತು ದಲಿತರ ಮಧ್ಯ ಸಂಘರ್ಷ, ಹೋರಾಟ ನಡೆಯುತ್ತದೆ. ಬಂಡಾಯ ಈ ಕತೆಯಲ್ಲೂ ಮೆರೆಯುತ್ತದೆ.

ಸೂಕ್ಷ್ಮ ಸಂವೇದನೆಯ, ಮಿತಭಾಷಿ, ಸೌಮ್ಯ ನಿಲುವಿನ, ಶಾಂತ ಮನಸ್ಸಿನ ಕತೆಗಾರ್ತಿ ಶ್ರೀಮತಿ ಗೀತಾ ಅವರು ಅದೆಲ್ಲಿ, ಯಾವಾಗ, ಯಾರು, ಯಾರಿಗೆ ಬೈಯ್ಯುವುದನ್ನು ಕೇಳಿಸಿಕೊಂಡರೋ, ತಮ್ಮ ಅನೇಕ ಕತೆಗಳಲ್ಲಿ ಪ್ರಾದೇಶಿಕ ಭಾಷೆಯ ಪಕ್ಕಾ ಜವಾರಿ ಬೈಗುಳಗಳನ್ನು ಪಾತ್ರಗಳ ಮುಖಾಂತರ ಹೇಳಿಸುತ್ತಾರೆ:

''ಏಯ್ ಸುವ್ವರಕೆ ಬಚ್ಚೇ... ಕಲ್‌ಸೆ ತೇರಾ ದಂಧಾ ಇಧರ ಮೇರೆ ಪಾಸ್ ನಹೀ. ನಾಳಿಗಿ ಇಲ್ಲಿಗ್ಗಿ ಬಂದಿ ಅಂದ್ರ ನಿನಗ ಒದ್ದು ಓಡಸ್ತೀನಿ, ತಿಳಿತೇನ್ಲೇ ಭಾಂಚೋದ್'', ಅಂತ.

''ಈ ಲೋಕವೆಲ್ಲ ಘೋರ'' ಕತೆಯ ಈ ಬೈಗುಳಗಳ ಚೆಂದದೊಂದಿಗೇ ಹಳ್ಳಿಯ ಬಡವನ ಬದುಕಿನ ಚಿತ್ರಣವು ಸೊಗಸಾಗಿ ಕೊಡುತ್ತಾರೆ ಲೇಖಕಿ ಶ್ರೀಮತಿ ಗೀತಾ ಅವರು.

''ಕತ್ತಲು ಸತ್ತು ಬೆಳಗಾಯಿತು. ಲವಂಗಿ ಎದ್ದವಳೇ ಮಾರಿ ತೊಳ್ಕೊಂಡು, ಮನೆ ಕಸ ಹೊಡೆದಳು. ರಾತ್ರಿ ಉಂಡು ಖಾಲಿ ಮಾಡಿದ್ದ ಸಿಲಾವರಿನ ನೆಗ್ಗಿದ ಎರಡು ಬಗೋಣಿ, ಒಂದು ಗಿಂಡಿ, ತುಟಿ ಹರಕು ತೆಂಬಿಗಿ ಮತ್ತು ಎರಡು ನೆಗ್ಗಿ ಸೊಟ್ಟಗಾಗಿದ್ದ ತಾಟುಗಳನ್ನು ಬೂದಿ ಹಚ್ಚಿ ತಿಕ್ಕಿ ತೊಳೆದಳು. ಆಟೊತ್ತಿಗೆ ಎದ್ದು ಮಾರಿ ತೊಳ್ಕೊಂಡು ಬಂದ ಸಿದ್ದು; ಯವ್ವಾ... ಡಬಲ್ ರೊಟ್ಟಿ ತರ್ತೀನಂತ ಚಾ ಕಾಸಲಿಕ್ಕಿಡೆ'' ಅಂತಂದು ಹೊರಗೋಡಿದ. ಇಲ್ಲಿ ಒಬ್ಬ ಬಡವನ ನೈಜ ಚಿತ್ರಣ ಕಣ್ಣಿಗೆ ಕಟ್ಟುವಂತಿರುವುದು ನಾವು ಕಾಣುತ್ತೇವೆ.

ಹೀಗೆ ಶ್ರೀಮತಿ ಗೀತಾ ನಾಗಭೂಷಣ ಅವರು ''ದುರಂತ'', ''ವಾಸ್ತವ'', ''ಚಕ್ಕರಕಟ್ಟಾ ಚೌಕ'', ''ಐಬು'', ''ಮಾನಾಪಮಾನ ನಿಮ್ಮದಯ್ಯ'' ಮತ್ತು ''ಗೂಡಿನೊಳಗಿನ ಗುಟ್ಟು'' ಮೊದಲಾದ ಅನೇಕ ಕತೆಗಳಲ್ಲೂ ಪುಂಖಾನುಪುಂಖವಾಗಿ ಕಲಬುರ್ಗಿ ಜಿಲ್ಲೆಯ ಪ್ರಾದೇಶಿಕ ಭಾಷೆಯ ಬಳಕೆ ಆಗಿರುವುದು ನಾವು ಕಾಣುತ್ತೇವೆ.

ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಅನೇಕ ಚಳವಳಿಗಳನ್ನು ನಾವು ನೋಡುತ್ತೇವೆ. ನವೋದಯಪೂರ್ವ, ನವೋದಯ, ನವ್ಯ, ದಲಿತ, ಬಂಡಾಯ ಇತ್ಯಾದಿ. ಯಾವುದೇ ಚಳವಳಿ ಆಗಿರಲಿ ನಿತ್ಯ ನಿರಂತರ, ಶಾಶ್ವತವಲ್ಲ. ಆಯಾ ಸಂದರ್ಭಗಳಲ್ಲಿ ಒಂದು ಹಂತದವರೆಗೆ ಅಥವಾ ಕಾವು ಆರುವವರೆಗೆ ಸಕ್ರಿಯವಾಗಿದ್ದು ಅನಂತರ ನಿಷ್ಕ್ರಿಯವಾಗಿಬಿಡುವುದು ಸಹಜ. ಹಾಗೇನೇ ನಮ್ಮ ಸಾಹಿತ್ಯದ ಚಳವಳಿಗಳೂ ಹಳೆಯದರ ಬೆನ್ನ ಮೇಲೆ ಸಾಗಿ ಹೊಸತರ ಶೋಧದತ್ತ ಮುಖ ಮಾಡಿ ಮುನ್ನಡೆಯುತ್ತಿವೆ. ಒಂದು ಕಾಲದಲ್ಲಿ ಅತ್ಯಂತ ಕ್ರಿಯಾಶೀಲವಾಗಿದ್ದ ದಲಿತ ಚಳವಳಿ ಮುಂದೆಯೂ ಅದೇ ಬಿಸಿ, ಬಿಗು ಉಳಿಸಿಕೊಳ್ಳುವಲ್ಲಿ ವಿಫಲವಾಯಿತೇನೋ ಅನ್ನಿಸುತ್ತದೆ. ಇದೇ ರೀತಿ ಬಂಡಾಯ ಚಳವಳಿ ಕೂಡ. ಒಂದು ಕಾಲವಿತ್ತು, ಕನ್ನಡದ ನೆಲದ ತುಂಬ ಬಂಡಾಯ ಪ್ರತಿಧ್ವನಿಸುತ್ತಿತ್ತು. ಆ ಕಾಲಘಟ್ಟದಲ್ಲಿ ಬರಗೂರು, ಲಂಕೇಶ, ಚಂಪಾ, ಚೆನ್ನಣ್ಣ, ಸಬರದ, ಲಲಿತಾ ನಾಯಕ್, ಸಾರಾ, ಭಾನು ಮುಷ್ತಾಕ್, ಸಿದ್ಧಲಿಂಗಯ್ಯ, ಹನುಮಂತಯ್ಯ, ಸಿದ್ದನಗೌಡ, ಗೀತಾ ನಾಗಭೂಷಣ ಮೊದಲಾದವರೆಲ್ಲರೂ ಬಂಡಾಯ ಸಾಹಿತ್ಯ ರಚಿಸಿದರು, ಸಮ್ಮೇಳನ, ಜಾಥಾ, ಹೋರಾಟ ನಡೆಸಿದರು. ಯಥಾಪ್ರಕಾರ ಮುಂದೊಂದು ದಿನ ಬಂಡಾಯದ ಬಿಸಿಯೂ ತಣ್ಣಗಾಗತೊಡಗಿತು. ಬಂಡಾಯ ಅನ್ನುವುದು ಬರೀ ಘೋಷಣೆಯಾಗುತ್ತಿದೆ ಅನ್ನುವ ಕೂಗೂ ಕೇಳಿಸತೊಡಗಿತು. ಬಂಡಾಯದಿಂದ ಒಂದಷ್ಟು ಪರಿವರ್ತನೆ, ಬದಲಾವಣೆ ಆಗಿರುವುದೇನೋ ನಿಜವೇ. ಆದರೆ, ಶ್ರೀಮತಿ ಗೀತಾ ಅವರ ಬಹುತೇಕ ಕತೆಗಳು ಬಂಡಾಯ ಧೋರಣೆಯವುಗಳೇ ಆಗಿವೆ. ರಾಜಕೀಯ ಅಧಿಕಾರ ವಿಕೇಂದ್ರೀಕರಣದ ನಂತರವಂತೂ ಹಳ್ಳಿಗಳ ಗೌಡ, ಕುಲಕರ್ಣಿ, ಸಾಹುಕಾರರ ಜಮಿನ್ದಾರಿ ಗತ್ತು, ಗಮ್ಮತ್ತು, ಅಟ್ಟಹಾಸ, ದೌರ್ಜನ್ಯಗಳ ದರ್ಬಾರು ನಿಂತು ಹೋದಂತೆಯೇ ಆಗಿದೆ. ಆದರೆ ಈಗಲೂ ಶ್ರೀಮತಿ ಗೀತಾ ಅವರ ಅನೇಕ ಕತೆಗಳಲ್ಲಿ ಈ ಪಾತ್ರಗಳು ಮೆರೆಯುತ್ತಲೇ ಇರುವುದು ಸೋಜಿಗವೆನಿಸುತ್ತದೆ. ಹುಸಿ ಬಂಡಾಯವೇ ಅನ್ನುವ ಅನುಮಾನ ಉಂಟಾಗುತ್ತದೆ. ಬಂಡಾಯ ಮನೋಭಾವವೇ ಬರವಣಿಗೆಯ ಬಂಡವಾಳ ಆಗಲಾರದು, ಭಾಷಾ ಬಳಕೆಯ ಗಿಮಿಕ್ ಮಾತ್ರದಿಂದ ಗಟ್ಟಿ, ದಾಖಲಾರ್ಹ ಸಾಹಿತ್ಯ ಸೃಷ್ಟಿಯಾಗಲಾರದು ಅನ್ನುವುದು ನನ್ನ ವೈಯಕ್ತಿಕ ಅಭಿಪ್ರಾಯ. ಇಂತಹ ಸತ್ಯ ಸಂಗತಿಯನ್ನು, ವಾಸ್ತವಾಂಶವನ್ನು, ಸೂಕ್ಷ್ಮ ಸಂವೇದನೆಯ ಲೇಖಕಿ ಮನಗಂಡಾರೆಂದು ಆಶಿಸುತ್ತೇನೆ.

ಸರಕಾರಿ ಸೇವೆಯಿಂದ ವಿಶ್ರಾಂತಿ ಪಡೆದು, ಆರು ದಶಕಗಳಿಗೂ ಅಧಿಕ ವಸಂತಗಳು ಕಂಡು ಪಕ್ವವಾಗಿರುವ ಕತೆಗಾರ್ತಿ ಶ್ರೀಮತಿ ಜಿ. ಗೀತಾ ನಾಗಭೂಷಣ ಅವರು ಈಗಲೂ ಏಕೆ ಪ್ರಚಲಿತ ವಿದ್ಯಮಾನಗಳತ್ತ ಗಮನಹರಿಸುತ್ತಿಲ್ಲ ಅನ್ನುವುದೇ ಸೋಜಿಗದ ಸಂಗತಿ ಆಗಿ ನನಗೆ ಕಾಡಿದೆ. ಮತ್ತೆ ಮತ್ತೆ ಪುನರಾವರ್ತನೆ ಆಗುವ ಅದೇ ಗ್ರಾಮೀಣ ಶೋಷಿತರ, ನೊಂದವರ, ಬದುಕೇ ಈಗಲೂ ಕಥೆಗೆ ವಸ್ತುವಾಗಿಸುತ್ತಿರುವುದು ಸರಿಯೇ? ಎಲ್ಲಾ ವಿಧದ, ಎಲ್ಲಾ ವರ್ಗಗಳ ಜನರೂ ಇದೇ ಸಮಾಜದಲ್ಲಿದ್ದಾರೆ. ಅನೇಕ ಸಮಸ್ಯೆ, ಸಂಘರ್ಷ ಅವರ ಬದುಕಲ್ಲೂ ನರ್ತಿಸುತ್ತವೆ. ಜಾಗತೀಕರಣ, ಖಾಸಗೀಕರಣ ಅನ್ನುವ ಮಹಾಮಾರಿ ಪ್ರಪಂಚದಾದ್ಯಂತ ಹರಡುತ್ತಿದೆ. ಬಹುರಾಷ್ಟ್ರೀಯ ಕಂಪೆನಿಗಳು ನಮ್ಮ ದೇಶೀಯ ಅತೀ ಸಣ್ಣ ಕಸುಬುದಾರರನ್ನು ಹರಿದು ತಿನ್ನುತ್ತಿವೆ. ಕುಂಬಾರನ ಮಡಿಕೆ, ಕಂಬಾರನ ಕುಲುಮೆ, ಕೊರವನ ಚಾಪೆ, ಪೊರಕೆ, ಗಿಲಗಂಜಿ ಎಲ್ಲ ಮೂಲೆ ಸೇರಿ ಮರೆಯಾಗಿ ತುತ್ತಿನ ಚೀಲ ತುಂಬಿಸಿಕೊಳ್ಳಲು ಇವರೆಲ್ಲ ಏನೇನೋ ಆಗುತ್ತಿದ್ದಾರೆ. ಅರೆಹೊಟ್ಟೆಯಿಂದ ಬದುಕು ಸಾಗಿಸುತ್ತಿದ್ದಾರೆ. ರೈತ ಮುಗಿಲಿಗೆ ಮಾರಿ ಮಾಡಿ ಗಾಳಿ, ಬಿಸಿಲುಂಡು ಉಸಿರಾಡುತ್ತಿದ್ದಾನೆ. ನೇಣಿಗೆ ಬಲಿಯಾಗುತ್ತಿದ್ದಾನೆ. ಕೋಲಾ-ಪೆಪ್ಸಿಗಳು, ಮಜ್ಜಿಗೆ, ಶರಬತ್ತನ್ನು ಮೆಟ್ಟಿ ನಿಂತಿವೆ. ಮಲ್ಟಿ ಚಾನಲ್‌ಗಳ ಅರೆಬೆತ್ತಲೆ ಪ್ರದರ್ಶನಗಳಿಂದ ಯುವ ಜನಾಂಗ ಜಂಗಳ ದನಗಳಂತಾಗುತ್ತಿದ್ದಾರೆ, ರಾಜಕೀಯ ದೊಂಬರಾಟದಿಂದ ದೇಶ ನಜ್ಜುಗುಜ್ಜಾಗುತ್ತಿದೆ. ಇಂದಿನ ಹಸುಗೂಸುಗಳು ನಾಳೆಯ ಕರಾಳ ದಿನಗಳನ್ನು ಎದುರು ನೋಡುತ್ತಾ ತಲ್ಲಣಗೊಂಡು ತತ್ತರಿಸುವಂತಾಗಿದೆ. ಕೊಳ್ಳೆ ಹೊಡೆಯಲು ಬಂದವರಿಗೆ ನಮ್ಮದೆಲ್ಲವನ್ನು ಮಾರಿಕೊಳ್ಳುತ್ತ ಮತ್ತಷ್ಟು ದರಿದ್ರರಾಗುತ್ತಿದ್ದೇವೆ. ಇಲ್ಲಿದ್ದುದೆಲ್ಲ ಏನಾಯ್ತು? ಯಾರದೋ ಅನ್ಯರ ಪಾಲೇಕಾಯ್ತು? ಎಂದು ನಮ್ಮ ಮುಂದಿನ ಪೀಳಿಗೆ ಕೇಳಬಹುದಾದ ಪ್ರಶ್ನೆಗಳಿಗೆ ಉತ್ತರಿಸಲಾಗದಂತಹ ಉತ್ತರಭೂಪರಾಗಬೇಕಾದ ಪ್ರಮೇಯ ಎದುರಾಗುತ್ತಿದೆ. ತೃತೀಯ ಜಗತ್ತಿನ ರಾಷ್ಟ್ರಗಳು, ದೈತ್ಯ ಶಕ್ತಿಗಳ ಎದುರು ತಲ್ಲಣಗೊಂಡು ತತ್ತರಿಸುವಂತಾಗಿದೆ. ದೇಶಗಳೇ ದಿವಾಳಿಯಾಗುತ್ತಿವೆ. ಉದಾಹರಣೆಗೆ ಅರ್ಜಂಟೈನಾ, ಶ್ರೀಲಂಕಾ, ಪ್ಯಾಲಸ್ತೇನ್, ಅಫಘಾನಿಸ್ತಾನ, ಇರಾಕ್ ಮೊದಲಾದವುಗಳು. ಈ ಎಲ್ಲ ವಿದ್ಯಮಾನಗಳೂ ಪ್ರಪಂಚದ ಎಲ್ಲ ಜೀವಿಗಳಿಗೂ ಸಂಬಂಧಿಸಿದವುಗಳೇ ಆಗಿರುವುದರಿಂದ ಇಂತಹ ವಿಷಯಗಳ ಕುರಿತೂ ಬರೆದು, ಬೆಳಕು ಚೆಲ್ಲಬೇಕಾದವರು ಲೇಖಕರೇ ಎಂದು ನಾನಂದುಕೊಂಡಿದ್ದೇನೆ. ನಮ್ಮದರ ಜೊತೆಗೇ ಇದೂ ನಮ್ಮದೇ ಎಂದು ತಿಳಿದು, ತಿಳಿದೇನು... ನಮ್ಮದೇ ಆಗಿರುವುದರಿಂದ ಇದರತ್ತಲೂ ನಮ್ಮ ಅನುಭವಿ ಲೇಖಕಿ ಶ್ರೀಮತಿ ಗೀತಾ ನಾಗಭೂಷಣ ಅವರು ಗಮನ ಹರಿಸುತ್ತಾರೆ ಎಂದು ಆಶಿಸುತ್ತೇನೆ ಹಾಗೂ ಇದೆಲ್ಲವನ್ನೂ ಗ್ರಹಿಸಿ ಈ ದಿಶೆಯಲ್ಲೂ ಒಂದಷ್ಟು ಬರವಣಿಗೆ ಕನ್ನಡಿಗರಿಗೆ ನೀಡುತ್ತಾರೆ ಅನ್ನುವ ವಿಶ್ವಾಸ ನಾನೂ ಇರಿಸಿಕೊಳ್ಳುತ್ತೇನೆ.

ಚಿತ್ರಶೇಖರ ಕಂಠಿ
''ಗ್ರೀಷ್ಮ'', ನಂ. ೧೪೫/೨, ಮಾಕಾ ಬಡಾವಣೆ, ಜೇವರ್ಗಿ ರಸ್ತೆ
ಗುಲಬರ್ಗಾ - ೫೮೫ ೧೦೨

# ಧರ್ಮನಿರಪೇಕ್ಷತೆ ಮತ್ತು ಅಲ್ಪಸಂಖ್ಯಾತರು

ಧರ್ಮನಿರಪೇಕ್ಷತೆ ಎಂಬುದು ಒಂದು ಉದಾತ್ತ, ಮಾನವೀಯ ಆಶಯಗಳುಳ್ಳ, ಆಧುನಿಕ ತತ್ವ. ಭಾರತದ ಸಂದರ್ಭದಲ್ಲಿ ಹೇಳುವುದಾದರೆ, ೮೦ರ ದಶಕದಲ್ಲಿ ಇದು ಹಿಂದೂ ಕೋಮುವಾದಿಗಳ ಹಾಗೂ ಮೂಲಭೂತವಾದಿಗಳ ಆಕ್ರಮಣಕ್ಕೆ ತುತ್ತಾಯಿತು. ಧರ್ಮ ಹಾಗೂ ರಾಜಕಾರಣವನ್ನು ಬೆರೆಸಿ, ಹಿಂದುತ್ವವನ್ನು ಬಳಸಿಕೊಂಡು ಕೋಮುವಾದದ ಏಣಿಯ ಮೂಲಕ ಪ್ರಭುತ್ವದ ಪೀಠವನ್ನು ಏರಬೇಕೆಂಬ ಹುನ್ನಾರದ ಹಿಂದೆ ಭಾಜಪದಂಥ ಶಕ್ತಿಗಳಿದ್ದವು.

ನಮ್ಮ ರಾಷ್ಟ್ರದಲ್ಲಿರುವ ಧರ್ಮನಿರಪೇಕ್ಷತೆಯ ಪರಿಕಲ್ಪನೆ ಹಾಗೂ ಅದರ ವಿವಿಧ ಮಗ್ಗುಲುಗಳನ್ನು ಅಲ್ಪಸಂಖ್ಯಾತರ ದೃಷ್ಟಿಕೋನದಿಂದ 'ಧರ್ಮನಿರಪೇಕ್ಷತೆ ಮತ್ತು ಅಲ್ಪಸಂಖ್ಯಾತರು' ಎಂಬ ತಮ್ಮ ಗ್ರಂಥದಲ್ಲಿ ವಿಶ್ಲೇಷಿಸಿದ್ದಾರೆ ಡಾ|| ಬದ್ರಿನಾಥ್ ಕೆ. ರಾವ್.

— ಮ. ಶ್ರೀ. ಮುರಳಿಕೃಷ್ಣ —

**ಭಾ**ರತ ಸ್ವಾತಂತ್ರ್ಯವನ್ನು ಗಳಿಸಿದಾಗ ಧರ್ಮನಿರಪೇಕ್ಷತೆ ಎಂಬ ತತ್ವವನ್ನು ಸಂವಿಧಾನದಲ್ಲಿ ಅಳವಡಿಸಬೇಕೆಂದು ಹೆಚ್ಚಿನ ಸಂವಿಧಾನ ರೂವಾರಿಗಳ ಅಭಿಮತವಾಗಿತ್ತು. ಆದರೆ ಕೆಲವರು ಅಪಸ್ವರ ಎತ್ತಿದ್ದರು. ಭಾರತ ವಿಭಜನೆಯಾದಾಗ ಭುಗಿಲೆದ್ದ ಕೋಮು ಹಿಂಸೆಯ ಪರಾಕಾಷ್ಠೆಯ ಹಿನ್ನೆಲೆಯಲ್ಲಿ ನವ ರಾಷ್ಟ್ರದ ನಿರ್ಮಾಣಕ್ಕೆ, ಜನರ ನಡುವಿನ ಐಕಮತ್ಯಕ್ಕೆ, ಬಹುಮುಖಿ ಸಂಸ್ಕೃತಿ ಜತನ ಮಾಡುವುದಕ್ಕೆ, ಸರ್ವತೋಮುಖ ಅಭ್ಯುತ್ಥಾನಕ್ಕೆ ಧರ್ಮನಿರಪೇಕ್ಷತೆ ಅವಶ್ಯವೆಂದು ಅನೇಕ ಪರಿಣಿತರು ಮನಗಂಡಿದ್ದರು. ಆದರೂ ಸಂವಿಧಾನದ ಪೀಠಿಕೆಯಲ್ಲಿ ಈ ತತ್ವದ ಸೇರ್ಪಡೆಯಾದದ್ದು ೧೯೭೬ರಲ್ಲಿ (೪೨ನೇ ತಿದ್ದುಪಡಿಯ ಮೂಲಕ). [ನೋಡಿ – 'ಹೊಸತು' ಜೂನ್ ೨೦೦೨ರ ಸಂಚಿಕೆಯ ಶ್ರೀ ಎ. ಪಿ. ಗೌರಿಶಂಕರ್‌ರ 'ಧರ್ಮನಿರಪೇಕ್ಷತೆ – ಧರ್ಮಸಹಿಷ್ಣುತೆ' ಲೇಖನ].

ಧರ್ಮನಿರಪೇಕ್ಷತೆ ಎಂಬುದು ಒಂದು ಉದಾತ್ತ, ಮಾನವೀಯ ಆಶಯಗಳುಳ್ಳ, ಆಧುನಿಕ ತತ್ವ. ಭಾರತದ ಸಂದರ್ಭದಲ್ಲಿ ಹೇಳುವುದಾದರೆ, ೮೦ರ ದಶಕದಲ್ಲಿ ಇದು ಹಿಂದೂ ಕೋಮುವಾದಿಗಳ ಹಾಗೂ ಮೂಲಭೂತವಾದಿಗಳ ಆಕ್ರಮಣಕ್ಕೆ ತುತ್ತಾಯಿತು. ಧರ್ಮ ಹಾಗೂ ರಾಜಕಾರಣವನ್ನು ಬೆರೆಸಿ, ಹಿಂದುತ್ವವನ್ನು ಬಳಸಿಕೊಂಡು ಕೋಮುವಾದದ ಏಣಿಯ ಮೂಲಕ ಪ್ರಭುತ್ವದ ಪೀಠವನ್ನು ಏರಬೇಕೆಂಬ ಹುನ್ನಾರದ ಹಿಂದೆ ಭಾಜಪದಂಥ ಶಕ್ತಿಗಳಿದ್ದವು. ಆ ಕಾಲಘಟ್ಟದಲ್ಲೇ 'ಸೋಗಲಾಡಿ ಧರ್ಮನಿರಪೇಕ್ಷತೆ' (ಸ್ಯೂಡೊ-ಸೆಕ್ಯುಲರಿಸಂ) ಎಂಬ ಪದ ಚಾಲ್ತಿಗೆ ಬಂದದ್ದು, ಧರ್ಮನಿರಪೇಕ್ಷತೆ ಸಾರ್ವಜನಿಕ ಜೀವನದ ಆಗು-ಹೋಗುಗಳಲ್ಲಿ ಭರದಿಂದ ಮಧ್ಯ ಭೂಮಿಕೆಗೆ ಬಂದದ್ದು ಈ ಅವಧಿಯಲ್ಲಿ.

ನಮ್ಮ ರಾಷ್ಟ್ರದಲ್ಲಿರುವ ಧರ್ಮನಿರಪೇಕ್ಷತೆಯ ಪರಿಕಲ್ಪನೆ ಹಾಗೂ ಅದರ ವಿವಿಧ ಮಗ್ಗುಲುಗಳನ್ನು ಅಲ್ಪಸಂಖ್ಯಾತರ ದೃಷ್ಟಿಕೋನದಿಂದ 'ಧರ್ಮನಿರಪೇಕ್ಷತೆ ಮತ್ತು ಅಲ್ಪಸಂಖ್ಯಾತರು' ಎಂಬ ತಮ್ಮ ಗ್ರಂಥದಲ್ಲಿ ವಿಶ್ಲೇಷಿಸಿದ್ದಾರೆ ಡಾ|| ಬದ್ರಿನಾಥ್ ಕೆ. ರಾವ್. ಇದೇ ವಿಷಯದ ಬಗ್ಗೆ ಈ ಲೇಖಕರು ಕೆನಡಾದ ಒಂದು ವಿಶ್ವವಿದ್ಯಾಲಯಕ್ಕೆ ತಮ್ಮ ಪಿಎಚ್.ಡಿ.ಗಾಗಿ ಆಂಗ್ಲಭಾಷೆಯಲ್ಲಿ ಬರೆದ ಪ್ರಬಂಧವನ್ನು ಸಂಗ್ರಹ ರೂಪದಲ್ಲಿ ಕನ್ನಡಕ್ಕೆ ಅನುವಾದಿಸಿದ್ದಾರೆ ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯ.

ಪ್ರಸ್ತಾವನೆಯಲ್ಲಿ ಲೇಖಕರು ೨೦ನೇ ಶತಮಾನದ ಪ್ರಾರಂಭದಲ್ಲಿ ಹಿಂದೂ ಧರ್ಮಕ್ಕೆ ಒಂದು ರಾಜಕೀಯ ಆಯಾಮವಿರಬೇಕೆಂಬ ದಿಶೆಯಲ್ಲಿ ಸ್ವಾಮಿ ದಯಾನಂದ ಸರಸ್ವತಿ, ಲೋಕಮಾನ್ಯ ತಿಲಕ್ ಹಾಗೂ ವಿನಾಯಕ ಸಾವರ್ಕರ್, ಒಂದು ಚೌಕಟ್ಟನ್ನು ನೀಡಲು ಪ್ರಯತ್ನಿಸಿದರು ಎಂದು ಪ್ರಸ್ತಾಪಿಸುತ್ತಾರೆ; ಕಾಂಗ್ರೆಸ್ ಪಕ್ಷ ಧರ್ಮನಿರಪೇಕ್ಷತೆಯ ಬಗ್ಗೆ ಸ್ವಾತಂತ್ರ್ಯ ಪೂರ್ವದಲ್ಲಿ ಹಾಗೂ ನಂತರ ಯಾವ ನಿಲುವು ತಳೆದಿತ್ತು ಎಂಬುದರ ಬಗ್ಗೆ ಗಮನಹರಿಸಿದ್ದಾರೆ. ಸಾಮಾನ್ಯವಾಗಿ ನೆಹರೂ ತಳೆದಿದ್ದ ಧರ್ಮನಿರಪೇಕ್ಷತೆಯ ದೃಷ್ಟಿಯ ಬಗ್ಗೆ ಹೆಚ್ಚಿನವರು ಸಕಾರಾತ್ಮಕವಾಗಿ ಪ್ರತಿಕ್ರಿಯಿಸುತ್ತಾರೆ. ನೆಹರೂ ಅವರ ಪ್ರಕಾರ ಭಾರತ ಧರ್ಮನಿರಪೇಕ್ಷವಾಗಿ ಉಳಿದಿರುವುದಕ್ಕೆ ಹಿಂದೂ ಧರ್ಮದ ಉದಾರತೆ ಹಾಗೂ ಸಹನಶೀಲತೆಯೂ ಕಾರಣಗಳಾಗಿದ್ದವು. ಅಸ್ಪೃಶ್ಯತೆ ಹಾಗೂ ಜಾತಿಪದ್ಧತಿ ಎರಡನ್ನೂ ಸಹಿಸಿಕೊಂಡುಬಂದಿರುವ ಈ ಮತಧರ್ಮ ಹೇಗೆತಾನೆ ಸಹನಶೀಲವಾಗಿರುತ್ತದೆ ಎಂದು ಬದ್ರಿನಾಥ್ ರಾವ್ ಪ್ರಶ್ನಿಸುತ್ತಾರೆ. ಗಾಂಧೀಜಿಗೆ ಧರ್ಮದ ಜೊತೆಗೆ ರಾಜಕಾರಣವನ್ನು ಮೇಳೈಸುವುದರ ಬಗ್ಗೆ ಭಿನ್ನಾಭಿಪ್ರಾಯವಿರಲಿಲ್ಲ. ಆದರೆ ನೆಹರೂ ಅವರಿಗೆ ಈ ಮೈತ್ರಿಯ ಬಗ್ಗೆ ಸ್ಪಷ್ಟ ವಿರೋಧವಿತ್ತು. ಈ ಅಂಶವನ್ನು ಕೃತಿಕಾರರು ಪ್ರಾಮುಖ್ಯವಾಗಿ ಗುರುತಿಸಿದ್ದಾರೆ.

ಎರಡನೇ ಅಧ್ಯಾಯದಲ್ಲಿ ಅಲ್ಪಸಂಖ್ಯಾತರ ಸಂಖ್ಯಾ ಬಲಾಬಲಗಳನ್ನು ಕೆನಡಾದ ಉದಾಹರಣೆ ಕೊಡುವುದರ ಮೂಲಕ ವಿವರಿಸಿದ್ದಾರೆ. ಕೆನಡಾದ ಕ್ವಿಬೆಕ್‌ನಲ್ಲಿ ಇಡೀ ಒಂದು ರಾಜ್ಯಸರ್ಕಾರವಿರುವುದು ಫ್ರೆಂಚ್ ಭಾಷಿಕರ ಆಡಳಿತದಲ್ಲಿ. ಆದ್ದರಿಂದ ಅವರ ದನಿಗೆ ಮಾನ್ಯತೆ ದೊರಕಿದೆ. ಆದರೆ ಭಾರತದಲ್ಲಿ ಜಮ್ಮು ಹಾಗೂ ಕಾಶ್ಮೀರ ರಾಜ್ಯದಲ್ಲಿ ಮಾತ್ರ ಮುಸಲ್ಮಾನರು ಬಹುಸಂಖ್ಯಾತರಾಗಿದ್ದಾರೆ. ಬೇರೆಡೆಯಲ್ಲಿ ಅವರು ಅಲ್ಪಸಂಖ್ಯಾತರು. ಅಮೆರಿಕದ ಕಪ್ಪು ಜನರದ್ದೂ ಅದೇ ಪರಿಸ್ಥಿತಿ. ಅಲ್ಪಸಂಖ್ಯಾತರಿಂದ ರಾಷ್ಟ್ರದ ಐಕ್ಯತೆಗೆ ಧಕ್ಕೆಯಿಲ್ಲ, ಆದರೆ ಬಹುಸಂಖ್ಯಾತರು ಅವರನ್ನು ಅವಜ್ಞೆಯಿಂದ ಕಂಡಿದ್ದಾರೆ. ಟೈಲರ್, ಕಿಮ್ಲಿಕ್ ಮುಂತಾದವರು ಪ್ರತಿಪಾದಿಸಿರುವ 'ಗುರುತಿಸುವಿಕೆ', 'ಸ್ವಂತಿಕೆ' ಹಾಗೂ 'ಘನತೆ' ವೈಯಕ್ತಿಕ ಹಾಗೂ ಸಾಮುದಾಯಿಕ ಮಟ್ಟದಲ್ಲಿ ಒಂದೇ ರೀತಿಯಲ್ಲಿ ಪ್ರಭಾವ ಬೀರುತ್ತವೆ. ಇವುಗಳನ್ನೇ ಶ್ರೀಲಂಕಾದ ತಮಿಳರು, ಸ್ಪೇನ್ ಮತ್ತು ಫ್ರಾನ್ಸ್‌ಗಳ ಬಾಸ್ಕರು, ಟರ್ಕಿ-ಇರಾಕ್‌ಗಳ ಕುರ್ದ್‌ರು ಹಾಗೂ ಭಾರತದ ಮುಸಲ್ಮಾನರು ಅರಸುತ್ತಿದ್ದಾರೆ. ಬಹುಸಾಂಸ್ಕೃತಿಕ ನಾಡಿನಲ್ಲಿ ಅಲ್ಪಸಂಖ್ಯಾತರ ಸಂಸ್ಕೃತಿಯನ್ನು ಉಳಿಸುವ ಪ್ರಯತ್ನದಲ್ಲಿ ಸಾಂಸ್ಥಿಕ ಬೆಂಬಲ ನೀಡುವ ಅಗತ್ಯವಿದೆ. ಆಗ ಮಾತ್ರ ರಾಷ್ಟ್ರದ ಐಕ್ಯತೆಯನ್ನು ಸಾಧಿಸಬಹುದು. ಮುಂದುವರಿದು ಹಿಂದೂ ರಾಷ್ಟ್ರೀಯತೆಯ ಬಗ್ಗೆ ಚರ್ಚಿಸುತ್ತಾ, 'ಹಿಂದುತ್ವ' ಮತ್ತು 'ಹಿಂದೂ ಅನನ್ಯತೆ' ಎಂಬುವು ವಸಾಹತುಶಾಹಿಯ ಕಾಲದಲ್ಲಿ ಚಾಲ್ತಿಗೆ ಬಂದ ಪರಿಕಲ್ಪನೆಗಳು, ಹೆಚ್ಚಿನ ಜನರು ತಾವು ಹಿಂದುಗಳು ಎಂದು ಭಾವಿಸುವುದಕ್ಕಿಂತ ತಮ್ಮ ಸ್ವಜಾತಿಗಳ ಅಡಿಯಲ್ಲಿ ಗುರುತಿಸಿಕೊಳ್ಳುತ್ತಾರೆ ಎಂಬ ಅಂಶವನ್ನು ಡಾ|| ಬದ್ರಿನಾಥ್ ರಾವ್ ಬೊಟ್ಟುಮಾಡಿ ತೋರಿಸಿದ್ದಾರೆ.

ಮುಂದಿನ ಅಧ್ಯಾಯದಲ್ಲಿ ಸೆಕ್ಯುಲರಿಸಂನ್ನು ನಾನಾ ರೀತಿಯಲ್ಲಿ ಅರ್ಥೈಸಿರುವುದರ ಬಗ್ಗೆ ಬೆಳಕು ಚೆಲ್ಲಲಾಗಿದೆ. ಈ ತತ್ವದ ಅನ್ವಯ ಪ್ರಭುತ್ವ ಎಲ್ಲಾ ಧರ್ಮಗಳನ್ನು ಸಮಭಾವದಿಂದ ಕಾಣಬೇಕು ಎಂಬುದು ಒಂದು ಗ್ರಹಿಕೆ. ಆದರೆ ಕೆಲವರು ಪ್ರಭುತ್ವಕ್ಕೂ ಧರ್ಮಗಳಿಗೂ ಯಾವುದೇ ಸಂಬಂಧವಿರಬಾರದು, ಪ್ರಭುತ್ವ ತಾಟಸ್ಥ್ಯ ನೀತಿ ಅನುಸರಿಸದೆ ಇರುವುದರಿಂದ ನಮ್ಮ ರಾಷ್ಟ್ರದಲ್ಲಿ ನಾನಾ ರೀತಿಯ ಗೊಂದಲಗಳಿವೆ ಎಂಬ ವಾದವನ್ನು ಮಂಡಿಸುತ್ತಾರೆ. ಧರ್ಮದ ವಿಷಯದಲ್ಲಿ ಬಹು

ಸಂಖ್ಯಾತರದ್ದೇ ಕಾರುಬಾರು ಎಂಬುದು ಅವರ ತಕರಾರು. ಈ ಸಂದರ್ಭದಲ್ಲಿ ಇತ್ತೀಚೆಗೆ 'ಔಟ್‌ಲುಕ್' ಪತ್ರಿಕೆಯಲ್ಲಿ ಕುಲ್‌ದೀಪ್ ನಯ್ಯರ್ ಬರೆದ ಲೇಖನಕ್ಕೆ ಪ್ರತಿಕ್ರಿಯಿಸುತ್ತ, ಮನಃಶಾಸ್ತ್ರಜ್ಞ ಹಾಗೂ ಸಮಾಜ ವಿಜ್ಞಾನಿ ಆಶೀಶ್ ನಂದಿಯವರು ಸೆಕ್ಯುಲರಿಸಂ ಯೂರೋಪಿನಿಂದ ಆಮದಾದ ಒಂದು ತತ್ವ, ಅಲ್ಲಿ ಕ್ರಿಶ್ಚಿಯನ್ ಧರ್ಮವನ್ನು ಪ್ರಭುತ್ವದಿಂದ ಬೇರ್ಪಡಿಸಲು ಈ ತತ್ವವನ್ನು ಅನುಷ್ಠಾನಕ್ಕೆ ತರಲಾಯಿತು, ಭಾರತದಲ್ಲಿ ಹಿಂದೂ-ಮುಸಲ್ಮಾನರ ನಡುವೆ ಭೀಕರ ಸಂಘರ್ಷಗಳಾಗಿದ್ದರೂ ತಲೆತಲಾಂತರಗಳಿಂದ ಅವರು ಒಟ್ಟಿಗೆ ವಾಸಿಸುತ್ತಿದ್ದಾರೆ, ಆದ್ದರಿಂದ ಸೆಕ್ಯುಲರಿಸಂ ಅವಶ್ಯಕವೇ, ಎಂಬರ್ಥದಲ್ಲಿ ವಾದಿಸಿದ್ದಾರೆ. ಆದರೆ ಪ್ರಸ್ತುತ ಶ್ರೀ ಆದಿಶಂಕರ ವಿಶ್ವವಿದ್ಯಾನಿಲಯದ (ಕೇರಳ) ಉಪಕುಲಪತಿ ಖ್ಯಾತ ಇತಿಹಾಸ ತಜ್ಞ ಕೆ. ಎನ್. ಪಣಿಕ್ಕರ್ ಭಾರತದ ಸಂದರ್ಭದಲ್ಲಿ ಧರ್ಮನಿರಪೇಕ್ಷತೆಯನ್ನು ಕಾಣುವ ಪರಿಯೇ ಬೇರೆ. ''ಜನರಲ್ಲಿರುವ ಸಹಜ ಧರ್ಮನಿರಪೇಕ್ಷತೆ ಅವರ ದಿನನಿತ್ಯದ ಜೀವನದ ಅನುಭವದಿಂದ ಮೂಡಿಬಂದಿರುವ ವಿವೇಕವೇ ಹೊರತು, ಅದೊಂದು ತಾತ್ವಿಕತೆಯಿಂದ ರೂಪಿತವಾದ ಮನೋಧರ್ಮವಾಗಿ ಬಂದುದಲ್ಲ. ಸಂದರ್ಭಕ್ಕೆ ಅನುಗುಣವಾಗಿ ನಂಬಿಕೆಗಳೂ ಬದಲಾಗುತ್ತವೆ. ಕೋಮುವಾದ ಉಂಟುಮಾಡುವ ಪರಸ್ಪರ ಅಪನಂಬಿಕೆ ಜನಸಾಮಾನ್ಯರ ಸಹಜ ಗುಣವಾದ ಧರ್ಮಸಹಿಷ್ಣುತೆಯನ್ನು ನಾಶ ಮಾಡಿಬಿಡಬಹುದು. ಧರ್ಮನಿರಪೇಕ್ಷತಾ ತತ್ವ ಜನಸಾಮಾನ್ಯರಲ್ಲಿರಬಹುದಾದ ಸೆಕ್ಯೂಲರ್ ಮನೋಭಾವಕ್ಕೆ ಒಂದು ವಿಚಾರವಾದದ ತಳಹದಿಯನ್ನು ನಿರ್ಮಿಸಿ ಪರಧರ್ಮವನ್ನು, ಇತರರ ಧಾರ್ಮಿಕ ನಂಬುಗೆಗಳನ್ನು ಗೌರವಿಸುವಂಥ ವಾತಾವರಣ ಸೃಷ್ಟಿಯಾಗುವತ್ತ ಶ್ರಮಿಸಬೇಕು'' ಎಂದು ಅವರು 'ಹೊಸತು'ವಿಗೆ ನೀಡಿದ ಸಂದರ್ಶನದಲ್ಲಿ ಹೇಳಿದ್ದನ್ನು ಇಲ್ಲಿ ಸ್ಮರಿಸಬಹುದು (ಆಗಸ್ಟ್ ೨೦೦೦ದ ಸಂಚಿಕೆ). ಇದೇ ಅಧ್ಯಾಯದಲ್ಲಿ 'ಸಂವಿಧಾನ ದೃಷ್ಟಿಯಲ್ಲಿ ಮತ ಧರ್ಮನಿರಪೇಕ್ಷತೆ', 'ರಾಮಕೃಷ್ಣ ಮಠದ ಮೊಕದ್ದಮೆ', 'ಭಾರತದ ಧರ್ಮನಿರಪೇಕ್ಷತೆಯ ವೈಲಕ್ಷಣ್ಯ', 'ಹಿಂದೂ ಮತ್ತು ಹಿಂದುತ್ವದ ಮೂಲ', 'ಹಿಂದೂ ಸಹನೆ-ಅಹಿಂಸೆಗಳ ಭ್ರಮೆ', 'ಬ್ರಾಹ್ಮಣ್ಯ ಪ್ರಧಾನ ಹಿಂದೂ ಧರ್ಮ ಮತ್ತು ಗಾಂಧೀಜಿ', 'ಹಿಂದು ಅಸಹನೆಯ ಈಚಿನ ಸಂದರ್ಭಗಳು', 'ಮತ ಧರ್ಮನಿರಪೇಕ್ಷತೆಗೆ ಭಾಜಪದ ಆಕ್ಷೇಪಣೆ' ಎಂಬ ಉಪ ಶಿರೋನಾಮೆಗಳಲ್ಲಿ ಈ ವಿಷಯವನ್ನು ವಿಶ್ಲೇಷಣಾ ಒರೆಗಲ್ಲಿಗೆ ಹಚ್ಚಲಾಗಿದೆ.

ಐದನೇ ಅಧ್ಯಾಯದಲ್ಲಿ ಲೇಖಕರು ಅಲ್ಪಸಂಖ್ಯಾತರ ಬಗ್ಗೆ ಹಿಂದೂ ರಾಷ್ಟ್ರೀಯವಾದಿಗಳು ತಳೆಯುತ್ತ ಬಂದಿರುವ ಉಗ್ರ, ಆತಂಕಕಾರಿ ನಿಲುವನ್ನು ಬಟಾಬಯಲು ಮಾಡಿದ್ದಾರೆ. ಮುಸಲ್ಮಾನರು ಹಾಗೂ ಕಿರಿಸ್ತಾನರನ್ನು ಪರಕೀಯರೆಂದು ಹಿಂದೂ ಪ್ರಭುತ್ವ ತುಚ್ಛೀಕರಿಸುತ್ತ ಬಂದಿದೆ. ಮತಧರ್ಮನಿರಪೇಕ್ಷತೆಯ ವಿರುದ್ಧ ಅಪಪ್ರಚಾರ ಮಾಡುತ್ತ ಅದು ಅಲ್ಪಸಂಖ್ಯಾತರನ್ನು ಓಲೈಸುವುದಕ್ಕೆ ಬಳಸಲಾಗಿರುವ ಸಾಧನವೆಂದು ಹಿಂದೂ ರಾಷ್ಟ್ರೀಯವಾದಿಗಳು ಸಾರುತ್ತಾರೆ. ಈ ಷಡ್ಯಂತರಕ್ಕೆ ಮೇಲ್ವರ್ಗದವರು ಬಲಿಯಾಗಿದ್ದಾರೆ. ಈ ನಿಟ್ಟಿನಲ್ಲಿ ಸೂಕ್ತ ಉದಾಹರಣೆಗಳನ್ನು ನೀಡಿ ಅಪಪ್ರಚಾರ ಮಾಡುವವರ ಹುಸಿ ವಾದದ ಪೊಳ್ಳುತನವನ್ನು ಲೇಖಕರು ಎತ್ತಿ ತೋರಿಸಿದ್ದಾರೆ. ಅಲ್ಲದೆ ಮುಖ್ಯವಾಗಿ ಮುಸಲ್ಮಾನರಿಗೆ ಸಂಬಂಧಿಸಿದ ಕೆಲವು ಅಂಕಿ-ಸಂಖ್ಯೆಗಳು ಅವರ ಸಾಮಾಜಿಕ-ಆರ್ಥಿಕ ಸ್ಥಿತಿಯನ್ನು ಸೂಚಿಸುತ್ತವೆ. ನಮ್ಮ ನೆರೆಯ ದೇಶಗಳಿಂದ ವಲಸೆ ಬಂದು ಇಲ್ಲಿ ಜೀವನ ನಡೆಸುತ್ತಿರುವವರ ಬಗ್ಗೆ ಭಾಜಪ ಮತ್ತು ಅದರ ಮಿತ್ರ ಪಕ್ಷಗಳು ಇಬ್ಬಗೆಯ ನಿಲುವನ್ನು ಹೊಂದಿವೆ. ಬಾಂಗ್ಲಾ ದೇಶದಿಂದ ನುಸುಳಿ ಬರುವ ಮುಸಲ್ಮಾನರ ಬಗ್ಗೆ ಮಾತ್ರ ಟಾಂಟಾಂ ಮಾಡಿ, ನೇಪಾಳದ ಹಿಂದೂ ವಲಸಿಗರ ಬಗ್ಗೆ ಚಕಾರವೆತ್ತುವುದಿಲ್ಲ. ಈ ಅಂಶವನ್ನು ಕುರಿತು ಮನವರಿಕೆ ಮಾಡಿಕೊಡಲಾಗಿದೆ. ಸರ್ಕಾರದ ಹುದ್ದೆಗಳಲ್ಲಿ ಮುಸಲ್ಮಾನರ ಸಂಖ್ಯೆಯ ವಿವರ ನೀಡಲಾಗಿದ್ದು, ಕೋಮುಗಲಭೆಗಳಲ್ಲಿ ಹೆಚ್ಚು ಬಾಧಿತರಾಗುವವರು ಮುಸಲ್ಮಾನರೇ ಎಂದು ಲೇಖಕರು ಸ್ಪಷ್ಟಪಡಿಸಿದ್ದಾರೆ.

ಮುಖ್ಯವಾಗಿ, ಆಳುವ ಸರ್ಕಾರಗಳು, ಹಿಂದೂ ಆಧಿಪತ್ಯದ ಸತ್ಯವನ್ನು ತಿರುಚುವ ತಂತ್ರಗಳ ವಿರುದ್ಧ ಮತ್ತು ಕೋಮು ಘರ್ಷಣೆಗಳನ್ನು ತಡೆಯುವುದರಲ್ಲಿ ಪ್ರಾಮಾಣಿಕ ಪ್ರಯತ್ನ ನಡೆಸಿಲ್ಲ ಎಂದು ಗಂಭೀರವಾಗಿ ಆರೋಪಿಸಿದ್ದಾರೆ.

'ಮತೀಯ ಗುಪ್ತ ಕಾರ್ಯಸೂಚಿ' ಎಂಬ ಅಧ್ಯಾಯದಲ್ಲಿ ಬದ್ರಿನಾಥ್ ಏಕರೂಪ ನಾಗರಿಕ ಸಂಹಿತೆಯ (ಏನಾಸಂ) ಬಗ್ಗೆ ಎಳೆಎಳೆಯಾಗಿ ಬಿಡಿಸಿ ಓದುಗರ ಮುಂದಿಟ್ಟಿದ್ದಾರೆ. ಭಾರತದಲ್ಲಿ ಅಲ್ಪಸಂಖ್ಯಾತರಿಗೆ ಮಾತ್ರ ವೈಯಕ್ತಿಕ ಕಾನೂನು ಇರುವುದು ಡೋಂಗಿ ಧರ್ಮನಿರಪೇಕ್ಷತೆಗೆ ಸಾಕ್ಷಿಯಲ್ಲವೇ ಎಂದು ಹಿಂದುತ್ವವಾದಿಗಳು ಟೀಕಿಸುತ್ತಾರೆ. ಅದರಲ್ಲೂ ಅವರು ಹೆಚ್ಚಾಗಿ ಮುಸಲ್ಮಾನರ ವೈಯಕ್ತಿಕ ಕಾನೂನುಗಳ ಮೇಲೆ ಪ್ರಹಾರ ನಡೆಸುತ್ತಾರೆ. ಆದ್ದರಿಂದ ಏನಾಸಂ ಜಾರಿಯಾದರೆ ಎಲ್ಲರಿಗೂ ಸಮಾನ ನ್ಯಾಯ ಸಿಗುತ್ತದೆ ಎಂಬುದು ಅವರು ಎಬ್ಬಿಸುವ ಹುಯಿಲು. ವಿವಿಧ ಪದ್ಧತಿಗಳನ್ನು ಅನುಸರಿಸುವ ಹಿಂದೂ ಸಮುದಾಯಗಳನ್ನು/ಜಾತಿಗಳನ್ನು ಒಂದೆಡೆ ಸಂಘಟಿಸಿ, ಭಾರತದ ಸಮಾಜವನ್ನು ಹಿಂದುಗಳು ಹಾಗೂ ಹಿಂದುಯೇತರರು ಎಂದು ಧ್ರುವೀಕರಣವನ್ನು ಮಾಡುವುದು ಈ ಏನಾಸಂನ ಉದ್ದೇಶ ಎಂದು ತಮ್ಮ ಅನಿಸಿಕೆಯನ್ನು ವ್ಯಕ್ತಪಡಿಸಿದ್ದಾರೆ. ಹಾಗೆಯೇ ಅಂತರ್ಮತೀಯ ವಿವಾಹಗಳನ್ನು ನಿಯಂತ್ರಿಸುವ ದೃಷ್ಟಿಯಿಂದ ೧೯೫೪ರಲ್ಲಿ ವಿಶೇಷ ವಿವಾಹ ಕಾಯಿದೆ ಜಾರಿಯಾಯಿತು. ಅದು ಬಹುಸಂಖ್ಯಾತರಾದ ಹಿಂದುಗಳ ಪರವಾಗಿರುವುದರ ಬಗ್ಗೆ ವಿವರಣೆ ನೀಡಲಾಗಿದೆ. ಲೇಖಕರು ಹಿಂದುತ್ವವಾದಿಗಳ ಗುಪ್ತ ಕಾರ್ಯಸೂಚಿಯನ್ನು ಬಹಿರಂಗಗೊಳಿಸುವಲ್ಲಿ ಸಾಕಷ್ಟು ಪೂರಕ ಮಾಹಿತಿಗಳನ್ನು ನೀಡಿದ್ದಾರೆ.

ಏಳನೇ ಅಧ್ಯಾಯದಲ್ಲಿ ಭಾರತದ ಇತಿಹಾಸ ಹಾಗೂ ಸಂಸ್ಕೃತಿಗಳ ವ್ಯಾಖ್ಯಾನವಿದೆ. ಹಿಂದೂರಾಷ್ಟ್ರವಾದವು ಇತಿಹಾಸವನ್ನು ಅಳೆಯುವುದು ಮತ ಧರ್ಮಗಳ ಅಳತೆಗೋಲಿನಿಂದ ಎಂಬುದನ್ನು ಲೇಖಕರು ಪ್ರತಿಪಾದಿಸುತ್ತಾರೆ. ಮುಸಲ್ಮಾನ ದಾಳಿಕೋರರು ಹಿಂದೂಧರ್ಮ ಹಾಗೂ ಸಂಸ್ಕೃತಿಯ ಮೇಲೆ ಎಸಗಿದ ದೌರ್ಜನ್ಯಗಳನ್ನು ಅತಿರೇಕದ ರೀತಿಯಲ್ಲಿ ಹಿಂದುತ್ವವಾದಿಗಳು ಬಣ್ಣಿಸುವ ರೀತಿಯನ್ನು ಹೊರಗೆಡಹಿದ್ದಾರೆ. ದೇವಾಲಯಗಳ ಧ್ವಂಸ ಮಾಡುವಿಕೆಯ ಬಗ್ಗೆ ಪ್ರಸ್ತಾಪಿಸುತ್ತ ದಾಳಿಕೋರರು ಮತಧರ್ಮ ದೃಷ್ಟಿಯಿಂದ ಮಾತ್ರ ಈ ಕಾರ್ಯ ಎಸಗುತ್ತಿರಲಿಲ್ಲ ಎಂದು ತಿಳಿಸಿದ್ದಾರೆ. ದೇವಾಲಯಗಳು ಸಂಸ್ಕೃತಿಯ ಪ್ರತೀಕಗಳಾಗಿದ್ದವು ಹಾಗೂ ಅವುಗಳಲ್ಲಿ ಹೇರಳವಾದ ಸಂಪತ್ತನ್ನು ಸಂಗ್ರಹಿಸಿಡಲಾಗುತ್ತಿತ್ತು. ಇವೂ ಸಹ ಆಕ್ರಮಣಕಾರರ ದಾಳಿಗಳಿಗೆ ಮುಖ್ಯ ಕಾರಣಗಳಾಗಿದ್ದವು. ಸೋತ ರಾಜನನ್ನು ಅವಮಾನಿಸಲು ಅವನ ರಾಜ್ಯದ ಪ್ರಮುಖ ಧಾರ್ಮಿಕ ಹಾಗೂ ಸಾಂಸ್ಕೃತಿಕ ಚಿಹ್ನೆಯನ್ನು ನಾಶಪಡಿಸುವುದೇ ರಾಜಪ್ರಭುತ್ವದ ಒಂದು ಲಕ್ಷಣವಾಗಿತ್ತು! ಹಿಂದೂ ರಾಜರ ನಡುವೆ ಯುದ್ಧಗಳಾದಾಗಲೂ ದೇವಾಲಯಗಳನ್ನು ನಾಶಪಡಿಸಿದ ಅನೇಕ ದೃಷ್ಟಾಂತಗಳಿವೆ, ಆದರೆ ಹಿಂದುತ್ವವಾದಿಗಳು ಈ ಸತ್ಯಾಸತ್ಯತೆಗಳನ್ನು ಮರೆಮಾಚಿ ಮುಸಲ್ಮಾನ ದಾಳಿಕೋರರನ್ನು ಮಾತ್ರ ಖಳನಾಯಕರಂತೆ ಚಿತ್ರಿಸುತ್ತಾರೆ. ಈ ವಾದಿಗಳು ಚರಿತ್ರೆಯಲ್ಲಾದ ತಪ್ಪುಗಳನ್ನು ಸರಿಪಡಿಸುವುದರ ಬಗ್ಗೆ ಪ್ರಚಾರ ಮಾಡುತ್ತಾರೆ. ಲೇಖಕರು ಆರ್ಯರ ಆಕ್ರಮಣ ಹಾಗೂ ಅವರ ಮೂಲ ಕುರಿತು ವಿದ್ವತ್ಪೂರ್ಣವಾದ ಜಿಜ್ಞಾಸೆ ನಡೆಸಿದ್ದಾರೆ.

ನಂತರದ ಅಧ್ಯಾಯದಲ್ಲಿ ದಲಿತರು, ಬುಡಕಟ್ಟು ಹಾಗೂ ಕೆಳಜಾತಿಯ ಜನರನ್ನು ಸುಪ್ರೀತಗೊಳಿಸಲು ಹಿಂದೂ ರಾಷ್ಟ್ರವಾದಿಗಳು ಜಾರಿಗೊಳಿಸಿರುವ ಹಲವು ಕಾರ್ಯಕ್ರಮಗಳ ಬಗ್ಗೆ ಕ್ಷಕಿರಣ ಬೀರಲಾಗಿದೆ. ಸ್ವಾಮಿ ವಿವೇಕಾನಂದ, ಡಾ|| ಬಿ. ಆರ್. ಅಂಬೇಡ್ಕರ್‌ರಂಥವರನ್ನು ತಮ್ಮ ಪ್ರಚಾರಕ್ಕೆ ಬಳಸಿಕೊಳ್ಳುವ ಇವರ ಅವಕಾಶವಾದಿತನವನ್ನು ಹಾಗೂ ದುರುಳ ಉದ್ದೇಶಗಳನ್ನು ಈ ಪುಟಗಳಲ್ಲಿ ಎತ್ತಿ ತೋರಿಸಲಾಗಿದೆ.

'ಹಿಂದುಗಳೆಲ್ಲಾ ಒಂದು' ಎಂಬ ಘೋಷಣೆಯಡಿ ನಿಮ್ನ ವರ್ಗಗಳ ಜನರನ್ನು ಒಂದುಗೂಡಿಸಿ ಅಲ್ಪಸಂಖ್ಯಾತರ ಮೇಲೆ ಹರಿಬಿಡುವುದೇ ಈ ದುಷ್ಟರ ಹುನ್ನಾರ. ಗುಜರಾತಿನಲ್ಲಿ ಮುಸಲ್ಮಾನರ ವಿರುದ್ಧ ಜರುಗಿದ ಜನಾಂಗೀಯ ಹತ್ಯಾಕಾಂಡದಲ್ಲಿ ದಲಿತರನ್ನು ಬಳಸಿಕೊಳ್ಳಲಾಯಿತು. ಬಾಬಾಬುಡನ್‌ಗಿರಿಯ ದತ್ತ ಅಭಿಯಾನ

ಹಾಗೂ ಶೋಭಾಯಾತ್ರೆಗಳಂಥ ಕಾರ್ಯಕ್ರಮಗಳಲ್ಲಿ ಈ ವರ್ಗದ ಜನರ ಪ್ರಾತಿನಿಧ್ಯ ಅಧಿಕವಿತ್ತೆಂದು ಮಾಧ್ಯಮಗಳಲ್ಲಿ ವರದಿಯಾಗಿದ್ದನ್ನು ನೆನಪಿಸಿಕೊಳ್ಳಬಹುದು. ಹಿಂದುತ್ವವನ್ನು ಟೀಕಿಸುವವರ ವಿರುದ್ಧ ಹಾಗೂ ಸಂಸ್ಕೃತಿಯ ಬಗ್ಗೆ ಭಾಜಪದ ವ್ಯಾಖ್ಯಾನವನ್ನು ಒಪ್ಪದ ಕಲಾವಿದರು, ಚಿತ್ರಕಾರರು, ಸಂಗೀತಕಾರರ ಮೇಲೆ ಈ ವಿಕೃತ ಮನಸ್ಸಿನ ಗೂಂಡಾ ಮೂಲಭೂತವಾದಿಗಳ ಕೆಂಗಣ್ಣು ಬಿದ್ದಿರುವ ಅನೇಕ ನಿದರ್ಶನಗಳನ್ನು ನೀಡಲಾಗಿದೆ.

'ಧರ್ಮನಿರಪೇಕ್ಷತೆಯ ರಾಜಕೀಯ ಆರ್ಥಿಕತೆ' ಎಂಬ ೯ನೇ ಅಧ್ಯಾಯದಲ್ಲಿ ಖಾಸಗೀಕರಣ, ಉದಾರೀಕರಣ ಹಾಗೂ ಜಾಗತೀಕರಣದಂಥ ಆರ್ಥಿಕ ನೀತಿಗಳಿಗೆ, ಧರ್ಮನಿರಪೇಕ್ಷತೆಗೆ ಮತ್ತು ಕೋಮುವಾದದ ಬೆಳವಣಿಗೆಗೆ ತಳಕು ಹಾಕಿ ಲೇಖಕರು ಮಂಡಿಸಿರುವ ವಾದಗಳು ಮನನೀಯ. ನಮ್ಮ ರಾಷ್ಟ್ರದ ರಾಜಕಾರಣದಲ್ಲಿ ರಾಜಕೀಯ ಪಕ್ಷಗಳು ಕೋಮುವಾದ ಕುರಿತು ಅನುಸರಿಸುತ್ತ ಬಂದಿರುವ ಧೋರಣೆಗಳ ಬಗ್ಗೆ ಸಾಕಷ್ಟು ವಿವೇಚನೆ ನಡೆಸಿದ್ದಾರೆ. ಧರ್ಮನಿರಪೇಕ್ಷತೆಯನ್ನು ಅನುಷ್ಠಾನಕ್ಕೆ ತರುವಲ್ಲಿ ಕಮ್ಯುನಿಸ್ಟ್ ಪಕ್ಷಗಳನ್ನುಳಿದು ಇತರೆ ಪಕ್ಷಗಳು ಆಸಕ್ತಿ ತೋರಿಸಿಲ್ಲ ಎಂದು ನೇರವಾಗಿ ತಿಳಿಸಿದ್ದಾರೆ.

ಆದರೆ ಪುಟ ೧೫೫ರಲ್ಲಿ ಕೃತಿಕಾರರು ಬಿಜೆಪಿ ಮತ್ತು ಕಾಂಗ್ರೆಸ್‌ಗಳನ್ನು ಒಂದೇ ನಾಣ್ಯದ ಎರಡು ಮುಖಗಳು, ಎರಡೂ ಕೋಮುವಾದಿ ಪಕ್ಷಗಳೇ ಸರಿ ಎಂಬ ನಿಲುವನ್ನು ವ್ಯಕ್ತಪಡಿಸಿದ್ದಾರೆ. ನಿಜ, ಆರ್ಥಿಕತೆಯ ವಿಷಯದಲ್ಲಿ, ಈ ಎರಡು ಪಕ್ಷಗಳ ನೀತಿಗಳಲ್ಲಿ ಬಹಳ ವ್ಯತ್ಯಾಸಗಳಿಲ್ಲ. ಆದರೆ ಕಾಂಗ್ರೆಸ್‌ನ್ನು ಕೋಮುವಾದಿ ಪಕ್ಷವೆಂದು ಪರಿಗಣಿಸಿರುವುದರ ಬಗ್ಗೆ ಈ ಲೇಖಕನಿಗೆ ಭಿನ್ನಾಭಿಪ್ರಾಯಗಳಿವೆ. ಕಾಂಗ್ರೆಸ್‌ನಲ್ಲಿ ಕೋಮುವಾದಿಗಳು ಇರಬಹುದು. ಅದರ ಕೆಲವು ನಿಲುವುಗಳನ್ನು ಸೌಮ್ಯ ಹಿಂದೂವಾದ ಪ್ರೇರಿತ ಎಂದು ಟೀಕಿಸಿದ್ದರೂ ಆ ಪಕ್ಷ ಸ್ವಾತಂತ್ರ್ಯ ಆಂದೋಳನದಲ್ಲಿ ವಹಿಸಿದ ಪಾತ್ರ ಹಾಗೂ ಭಾರತೀಯ ಸಮಾಜವನ್ನು ಅರ್ಥೈಸಿದ ಪರಿಯನ್ನು ಗಮನಿಸಿದಾಗ ಅದು ಕೋಮುವಾದಿ ಪಕ್ಷವೆಂದು ವರ್ಗೀಕರಿಸುವುದು ಅಷ್ಟು ಸರಿಯೆನಿಸಲಾರದು.

ಭ್ರಷ್ಟ ಭಾರತ ಇಲ್ಲೀಗಲ್ ಇಂಡಿಯಾ<br>
ಬಾಯಲ್ಲಿ ಬ್ರಹ್ಮ ಸಾಕ್ಷಾತ್ಕಾರ<br>
ಮೈಮನ ಮಿದುಳುಗಳಲ್ಲಿ ಭ್ರಷ್ಟಾಚಾರ<br>
ದೇಶವಿಲ್ಲಿ ಡೆಮಾಕ್ರಸಿ<br>
ಊರು ಹಳ್ಳಿ ದಿಳ್ಳಿಗಳಲ್ಲಿ<br>
ಮತ್ತೆ ನಡೆದಿದೆ ಪಾಳೆಯಗಾರಿಕೆಯ ಕಸಿ.

ಶೈಲಜಾ ಉಡಚಣ
ಚೇತನ, ಜೇವರ್ಗಿ ಕಾಲನಿ, ಮೇಲ್‌ಸೇತುವೆ ಹತ್ತಿರ
ಗುಲ್ಬರ್ಗಾ - ೫೮೫ ೧೦೨

ಈ ಅಧ್ಯಾಯದ ಕೊನೆಯ ಭಾಗದಲ್ಲಿ ಬದ್ರಿನಾಥ್ ಜನತೆಯ ಧರ್ಮನಿರಪೇಕ್ಷತೆಯ ಬಗ್ಗೆ ಒತ್ತು ನೀಡಿದ್ದಾರೆ. ತಲೆತಲಾಂತರಗಳಿಂದ ಹಿಂದುಗಳು ಹಾಗೂ ಮುಸಲ್ಮಾನರು ಪರಸ್ಪರ ಸಹಕಾರ ಮತ್ತು ಮತೀಯ ಸೌಹಾರ್ದತೆಯಿಂದ ಬದುಕಿದ್ದಾರೆ. ಕೆಳಜಾತಿಯವರು ಹಾಗೂ ಅಲ್ಪಸಂಖ್ಯಾತರು ಜಾಗೃತರಾಗಿ ತಮ್ಮ ಶತ್ರುಗಳಾರು ಎಂಬುದನ್ನು ಗುರುತಿಸಿ ಹೋರಾಟಗಳನ್ನು ಮಾಡುತ್ತಿದ್ದಾರೆ. ಸಶಕ್ತರಾಗಿ, ಶಾಂತಿಯಿಂದ ಬಾಳಬೇಕು ಎಂಬ ಈ ಎರಡು ಬಣಗಳ ಬಯಕೆಯು ಚುನಾವಣಾ ರಂಗದಲ್ಲೂ ಕಾಣಿಸಿಕೊಂಡಿದೆ ಎಂದು ಕೃತಿಕಾರರು ಗುರುತಿಸಿದ್ದಾರೆ. ಈ ವರ್ಷದ ಚುನಾವಣೆಯ ಫಲಿತಾಂಶ ಒಂದು ದೃಷ್ಟಿಯಲ್ಲಿ ಈ ಚಿಂತನೆಗೆ ಪುಷ್ಟೀಕರಣ ನೀಡುತ್ತದೆ.

ಪುಸ್ತಕದ ಅಂತ್ಯದಲ್ಲಿ ಜನತೆಯ ನೈಜ ಧರ್ಮನಿರಪೇಕ್ಷತೆಯು ಜಯಶಾಲಿಯಾಗುವುದು ನಿಸ್ಸಂದೇಹ ಎಂಬ ಬಲವಾದ ಆಶಾವಾದವಿದೆ. ಈ ನಿಟ್ಟಿನಲ್ಲಿ ಕಳೆದ ವರ್ಷದ ಡಿಸೆಂಬರ್‌ನಲ್ಲಿ ಬಾಬಾ ಬುಡನ್‌ಗಿರಿ ವಿವಾದದ ಹಿನ್ನೆಲೆಯಲ್ಲಿ ಜರುಗಿದ ಕೋಮು ಸೌಹಾರ್ದತಾ ಜಾಥಾಗಳ ಯಶಸ್ಸು ಸ್ವಾಗತಾರ್ಹ ಬೆಳವಣಿಗೆಗಳಲ್ಲಿ ಒಂದು. ಇಂತಹ ಇತ್ಯಾತ್ಮಕ ಪ್ರಕ್ರಿಯೆಗಳು ಈ ತತ್ವಕ್ಕೆ ಬದ್ಧರಾಗಿರುವವರಿಗೆಲ್ಲಾ ದಾರಿದೀಪವಾಗಬೇಕಾಗಿದೆ.

ಕೆನಡಾದ ಪ್ರಸ್ತಾಪದ ಹೊರತು, ಇತರ ಕೆಲವು ದೇಶಗಳಲ್ಲಿರುವ ಅಲ್ಪಸಂಖ್ಯಾತರ ಸ್ಥಿತಿ-ಗತಿಗಳ ಬಗ್ಗೆ ಲೇಖಕರು ಗಮನಹರಿಸದಿರುವುದು, ಅಲ್ಪಸಂಖ್ಯಾತರ ಕೋಮುವಾದ ಕುರಿತ ಯಾವ ಪ್ರಸ್ತಾಪವೂ ಇಲ್ಲದಿರುವುದು ಡಾ|| ಬದ್ರಿನಾಥ್‌ರ ಕೃತಿಯ ಒಂದು ಕೊರತೆ ಎನ್ನಬಹುದು. ಈ ಅಂಶಗಳನ್ನೂ ಒಳಗೊಂಡಿದ್ದರೆ ಗ್ರಂಥಕ್ಕೆ ಇನ್ನೊಂದು ಆಯಾಮ ದೊರಕುತ್ತಿತ್ತೇನೋ.

ಒಟ್ಟಿನಲ್ಲಿ ಬದ್ರಿನಾಥ್ ಸಂಕೀರ್ಣ, ಸೂಕ್ಷ್ಮ ಹಾಗೂ ಜ್ವಲಂತ ವಿಷಯವನ್ನು ಆಯ್ದುಕೊಂಡು, ಆಮೂಲಾಗ್ರವಾಗಿ ವಿಶ್ಲೇಷಿಸಿದ್ದಾರೆ. ವಿಶ್ಲೇಷಣೆ ಮಾಡುವಾಗ ವರ್ಗ ಸಂಘರ್ಷದ ನೆಲೆಯಿಂದಲೂ ಚರ್ಚಿಸಿದ್ದಾರೆ. ಲೇಖಕರು ಮಾರ್ಕ್ಸಿಸ್ಟ್ ಮಾನದಂಡವನ್ನು ಬಳಸಿದ್ದಾರೆ ಎಂಬ ಹಣೆಪಟ್ಟಿಯನ್ನು ಕೆಲವು ವಿಮರ್ಶಕರು ಕಟ್ಟಬಹುದು. ಲೇಖಕರ ಕೆಲವು ಅಭಿಪ್ರಾಯಗಳ ಬಗ್ಗೆ ಭಿನ್ನಮತವಿರಬಹುದು. ಆದರೆ ಈ ಗ್ರಂಥ ಅನೇಕ ವಿಚಾರಪೂರಿತ, ಅರ್ಥಗರ್ಭಿತ ಒಳನೋಟಗಳನ್ನು ನೀಡುತ್ತದೆ. ಓದುಗರನ್ನು ಚಿಂತನೆಗೆ ಹಚ್ಚುತ್ತದೆ. ಆದ್ದರಿಂದ ಇದು ಕನ್ನಡ ವೈಚಾರಿಕ ಸಾಹಿತ್ಯಕ್ಕೆ ಉತ್ತಮ ಸೇರ್ಪಡೆ. ಇಂಥ ವಿಚಾರ ಪ್ರಚೋದಕ, ಮಾಹಿತಿಪೂರ್ಣ ಪುಸ್ತಕ ಬರೆದ ಲೇಖಕರು, ಸಮರ್ಥವಾಗಿ ಅನುವಾದಿಸಿರುವ ಅನುವಾದಕರು ಮತ್ತು ಪ್ರಕಟಿಸಿದ ನವಕರ್ನಾಟಕ ಪ್ರಕಾಶನ ಸಂಸ್ಥೆಯವರು ಅಭಿನಂದನಾರ್ಹರು.

ಮ. ಶ್ರೀ. ಮುರಳೀಕೃಷ್ಣ
ನಂ. ೧೦೦, ೨ನೇ 'ಎ' ಕ್ರಾಸ್,
ಗವೀಪುರಂ ಬಡಾವಣೆ, ಬೆಂಗಳೂರು - ೫೬೦ ೦೧೯

# ಸ್ತ್ರೀವಾದಿ ನೆಲೆಯೊಂದರ ಅನಾವರಣ

ಎಸ್. ಗೀತಾ

ಇತ್ತೀಚಿನ ದಿನಗಳಲ್ಲಿ ಪ್ರಪಂಚದ ಬೇರೆ ಬೇರೆ ರಾಷ್ಟ್ರಗಳಲ್ಲಿ 'ಸ್ತ್ರೀವಾದ' ಬೇರೆ ಬೇರೆ ನೆಲೆಗಳಲ್ಲಿ ಗುರುತಿಸಿಕೊಳ್ಳುತ್ತಾ, ಅತ್ಯಂತ ಮಹತ್ವದ ಸ್ತ್ರೀ ಚಳುವಳಿಯಾಗಿ ರೂಪುಗೊಳ್ಳುತ್ತಿದೆ. ಭಾರತದಲ್ಲಿ 'ಸ್ತ್ರೀ ಸಂವೇದನೆ' ಬೇರೆ ಬೇರೆ ರೀತಿಯಲ್ಲಿ ಕಂಡುಬಂದಿದ್ದರೂ 'ಸ್ತ್ರೀವಾದ' ಎಂಬ ಹೆಸರಿನಲ್ಲಿ ರೂಪುಗೊಂಡದ್ದು ಇತ್ತೀಚೆಗೆ. ಹಾಗಾಗಿ ಭಾರತದಲ್ಲಿ ಸ್ತ್ರೀವಾದ-ಸ್ವರೂಪ, ಲಕ್ಷಣ, ಗುರಿ, ಉದ್ದೇಶಗಳ ಬಗ್ಗೆ ಸಾಕಷ್ಟು ಪುಸ್ತಕಗಳು ಬಂದಿವೆ, ಬರುತ್ತಿವೆ. ಅವುಗಳಲ್ಲಿ ಬಿ. ಎಸ್. ವೆಂಕಟಲಕ್ಷ್ಮಿ ಅವರ 'ಬದುಕು ಬವಣೆ ಭರವಸೆ – ಮಹಿಳಾ ಜಗತ್ತಿನ ಅನಾವರಣ' ಎಂಬ ಪುಸ್ತಕವೂ ಒಂದು. ಸಿಮೋ ದ ಬುವಾ ಅವರು ಫ್ರೆಂಚ್ ಭಾಷೆಯಲ್ಲಿ ರಚಿಸಿದ, ನಂತರ ಇಂಗ್ಲಿಷ್‌ಗೆ ಅನುವಾದಗೊಂಡ "The Second Sex" ಎಂಬ ಕೃತಿ ವೆಂಕಟಲಕ್ಷ್ಮಿ ಅವರ ಪುಸ್ತಕಕ್ಕೆ ಆಕರ.

ಇತ್ತೀಚಿನ ದಿನಗಳಲ್ಲಿ ಪ್ರಪಂಚದ ಬೇರೆ ಬೇರೆ ರಾಷ್ಟ್ರಗಳಲ್ಲಿ 'ಸ್ತ್ರೀವಾದ' ಬೇರೆ ಬೇರೆ ನೆಲೆಗಳಲ್ಲಿ ಗುರುತಿಸಿಕೊಳ್ಳುತ್ತಾ, ಅತ್ಯಂತ ಮಹತ್ವದ ಸ್ತ್ರೀ ಚಳುವಳಿಯಾಗಿ ರೂಪುಗೊಳ್ಳುತ್ತಿದೆ. ಭಾರತದಲ್ಲಿ 'ಸ್ತ್ರೀ ಸಂವೇದನೆ' ಬೇರೆ ಬೇರೆ ರೀತಿಯಲ್ಲಿ ಕಂಡುಬಂದಿದ್ದರೂ 'ಸ್ತ್ರೀವಾದ' ಎಂಬ ಹೆಸರಿನಲ್ಲಿ ರೂಪುಗೊಂಡದ್ದು ಇತ್ತೀಚೆಗೆ. ಹಾಗಾಗಿ ಭಾರತದಲ್ಲಿ ಸ್ತ್ರೀವಾದ-ಸ್ವರೂಪ, ಲಕ್ಷಣ, ಗುರಿ, ಉದ್ದೇಶಗಳ ಬಗ್ಗೆ ಸಾಕಷ್ಟು ಪುಸ್ತಕಗಳು ಬಂದಿವೆ, ಬರುತ್ತಿವೆ. ಅವುಗಳಲ್ಲಿ ಬಿ. ಎಸ್. ವೆಂಕಟಲಕ್ಷ್ಮಿ ಅವರ 'ಬದುಕು ಬವಣೆ ಭರವಸೆ – ಮಹಿಳಾ ಜಗತ್ತಿನ ಅನಾವರಣ' ಎಂಬ ಪುಸ್ತಕವೂ ಒಂದು. ಸಿಮೋ ದ ಬುವಾ ಅವರು ಫ್ರೆಂಚ್ ಭಾಷೆಯಲ್ಲಿ ರಚಿಸಿದ, ನಂತರ ಇಂಗ್ಲಿಷ್‌ಗೆ ಅನುವಾದಗೊಂಡ "The Second Sex" ಎಂಬ ಕೃತಿ ವೆಂಕಟಲಕ್ಷ್ಮಿ ಅವರ ಪುಸ್ತಕಕ್ಕೆ ಆಕರ.

ಈ ಪುಸ್ತಕದಲ್ಲಿ ಮಹಿಳೆಯರ ಬಗೆಗಿನ ವಿಚಾರಗಳು ಎರಡು ಭಾಗಗಳಲ್ಲಿ ಅನಾವರಣಗೊಂಡಿವೆ. ತನ್ನ ತಾಯಿಯ ಗರ್ಭದಲ್ಲೇ ಅಥವಾ ಹುಟ್ಟಿದ ನಂತರವೂ ಕೆಲಕಾಲದವರೆಗೆ ಮಕ್ಕಳಲ್ಲಿ ಹೆಣ್ಣು-ಗಂಡೆಂಬ ಭಾವನೆ, ವರ್ತನೆಗಳಲ್ಲಿ ಅಂಥ ವ್ಯತ್ಯಾಸಗಳೇನೂ ಇರುವುದಿಲ್ಲ. ಆದರೆ ಕುಟುಂಬ ಹಾಗೂ ಸಮಾಜ ಮಾತ್ರ ಮಕ್ಕಳಲ್ಲಿ ತಾರತಮ್ಯವನ್ನು ಮಾಡಿ, ಗಂಡು ಮಗುವನ್ನು 'ಪುಟ್ಟ ಗಂಡಸಾ'ಗುವಂತೆಯೂ, ಮುಗ್ಧ ಬಾಲೆಯನ್ನು ಒಬ್ಬ 'ಪುಟ್ಟ ಹೆಂಗಸಾ'ಗುವಂತೆಯೂ ರೂಪಿಸುವಲ್ಲಿ ಯಶಸ್ವಿಯಾಗುತ್ತಾರೆ. ಹೀಗೆ ತಮ್ಮ ಮಕ್ಕಳನ್ನು ರೂಪಿಸುವ ತಂದೆ-ತಾಯಿಯರು, ತಮ್ಮ ಶರೀರದ ಅಂಗಾಂಗಗಳ ಮೂಲಕ ತಮ್ಮದೇ ರೀತಿಯಲ್ಲಿ ಹೆಣ್ಣು-ಗಂಡಿನ ಶಾರೀರಿಕ ರಚನೆಯ ಭಿನ್ನತೆಯನ್ನು ಗುರುತಿಸಿಕೊಳ್ಳುವ ಮಕ್ಕಳು, ಈ ಗ್ರಹಿಕೆಯಿಂದಲೇ ಅವರ ವರ್ತನೆಗಳಲ್ಲಾಗುವ ಬದಲಾವಣೆ, ಮನೋಭಾವ, ಲೈಂಗಿಕತೆಯ ಬಗೆಗಿನ ಕುತೂಹಲ, ಪರಿಣಾಮಗಳು, ಕೌಮಾರ್ಯದ ಹಂತ, ವಿವಾಹವಾದ ನಂತರದ ಹಂತ, ಮಕ್ಕಳಾದ ಮೇಲೆ, ಸಂಸಾರ ಸಾಗಿಸುವಾಗ ಎದುರಿಸಬೇಕಾದ ಸಮಸ್ಯೆಗಳು ಮುಂತಾದ ವಿಷಯಗಳ ಜೊತೆಗೇ, ಉಪಪತ್ನಿಯರು, ವೇಶ್ಯೆಯರು, ವಿಧವೆಯರು, ಸಲಿಂಗಿಗಳು, ವಯಸ್ಕರು, ಉದ್ಯೋಗಸ್ಥ ಮಹಿಳೆಯರು, ನಗರವಾಸಿಗಳು, ಗ್ರಾಮೀಣ ಪ್ರದೇಶದವರು, ವೇದಾಂತಿಗಳು, ಸ್ವಮೋಹಿಗಳು, ಪ್ರೇಮಕ್ಕೆ ಸಿಲುಕಿದ ಹೆಂಗಸರು ಮುಂತಾದ ಎಲ್ಲಾ ಬಗೆಯ ಮಹಿಳೆಯರ ಸ್ವಭಾವ, ವರ್ತನೆ, ಪರಿಣಾಮ, ಸಮಸ್ಯೆಗಳತ್ತ ಗಮನ ಸೆಳೆಯುತ್ತಾರೆ. ಈ ಎಲ್ಲಾ ವಿವರಗಳೂ ಭಾರತೀಯ ಮಹಿಳೆಯರನ್ನೊಳಗೊಂಡೂ ಜಗತ್ತಿನ ಇಡೀ ಸ್ತ್ರೀ ಸಮುದಾಯಕ್ಕೆ ಅನ್ವಯವಾಗುತ್ತವೆ.

ಆದರೆ ಇನ್ನೂ ಕೆಲವು ಕಾರಣಗಳಿಂದ ಭಾರತೀಯ ಮಹಿಳೆಯರ ಬದುಕಿನ ವಿಶ್ಲೇಷಣೆಯನ್ನು ಕೈಗೊಳ್ಳುವವರು ಇನ್ನು ಬೇರೆ ಬೇರೆ ಕಾರಣಗಳನ್ನು ಗಮನದಲ್ಲಿರಿಸಿಕೊಂಡು ಅಧ್ಯಯನ ಮಾಡಬೇಕಾಗುತ್ತದೆ. ಈ ಕೃತಿಯಲ್ಲೂ ಸಹ ಲೇಖಕಿ ಅಂಥ ಪ್ರಯತ್ನ ಮಾಡಿರುವುದನ್ನು, 'ಭಾರತದಲ್ಲಿ ಮಹಿಳೆ' ಎಂಬ ಭಾಗದಲ್ಲಿ ಪ್ರತ್ಯೇಕವಾಗಿ ಗಮನಿಸಬಹುದು. ಇಲ್ಲಿ ವೇದಗಳ ಕಾಲದಿಂದ ಆಧುನಿಕ ಕಾಲದವರೆಗೆ ಮಹಿಳೆಯರ ಬದುಕು ಅನಾವರಣಗೊಂಡಿದೆ.

''ಭಾರತದಲ್ಲಿ ಮಹಿಳೆಯರು ದೇಶದ ಸಂದರ್ಭ ಸನ್ನಿವೇಶಗಳ ಹಿನ್ನೆಲೆಯಲ್ಲಿ ಇವರನ್ನು ಪ್ರತ್ಯೇಕವಾಗಿ ಕಂಡಾಗ ಇವರು ಮಿಕ್ಕೆಲ್ಲ ದೇಶಗಳಲ್ಲಿನ ಹೆಂಗಸರಂತಲ್ಲದೆ ವಿಭಿನ್ನ ಸ್ವರೂಪ ಧರಿಸಿ ನಿಲ್ಲುತ್ತಾರೆ. ಮಹಿಳೆಯರ ದೈಹಿಕ ಹಾಗೂ ಮಾನಸಿಕ ಗುಣಗಳು ಭೌಗೋಳಿಕ ಸರಹದ್ದುಗಳನ್ನು ಅನುಸರಿಸಿ ಬದಲಾಗುವ ಸಾಧ್ಯತೆ ಇಲ್ಲದಿದ್ದರೂ, ಜಗತ್ತಿನ ಕೆಲವು ಅತ್ಯಂತ ಮುಂದುವರಿದ ರಾಷ್ಟ್ರಗಳಲ್ಲಿನ ಮಹಿಳೆಯರ ಬದುಕಿಗೆ ಹೋಲಿಸಿ ನೋಡಿದಾಗ ಇನ್ನೂ ಪ್ರಗತಿಶೀಲವಾಗಿಯೇ ಉಳಿದಿರುವ ದೇಶವೊಂದಕ್ಕೆ ಸೇರಿರುವ ಭಾರತೀಯ ಸ್ತ್ರೀಯರಿಗೆ ಲಭ್ಯವಿರುವ ಜೀವನವನ್ನು ಉನ್ನತಮಟ್ಟದ್ದು ಎಂದು ಕರೆಯಲಾಗದು. ನೂರಾರು ವರ್ಷಗಳ ಕಾಲ ವಿದೇಶೀಯರು ತೊಡಿಸಿದ್ದ ಶೃಂಖಲೆಗಳ ಭಾರದಲ್ಲೇ ನುಗ್ಗಾಗಿದ್ದ ಭಾರತ ಸ್ವಾತಂತ್ರ್ಯ ಗಳಿಸಿದ ಹಲವಾರು ವರ್ಷಗಳ ನಂತರವೂ ಸ್ವಾವಲಂಬಿಯಾಗಲು ಹೆಣಗಾಡುತ್ತಿರುವಂತೆಯೇ ಆಚಾರ-ವಿಚಾರ, ಪದ್ಧತಿ-ಪರಂಪರೆಗಳ ಹೆಸರಿನಲ್ಲಿ ನಾನಾ ವಿಧದ ಕಟ್ಟಳೆ, ಮಿತಿಗಳನ್ನು ಎದುರಿಸಬೇಕಾದ ಇಲ್ಲಿನ ಸ್ತ್ರೀಯರೂ ತಮ್ಮತನವನ್ನು ಕಂಡುಕೊಳ್ಳಲು ಇನ್ನೂ ಸೆಣಸಾಡುತ್ತಲೇ ಇದ್ದಾರೆ'' (ಪುಟ ೧೨೪) ಎಂಬ ಮಾತುಗಳ ಮೂಲಕ ವೇದಗಳ ಕಾಲದಿಂದ ಆಧುನಿಕ ಕಾಲದವರೆಗೆ ಭಾರತೀಯ ಮಹಿಳೆಯರ ಬದುಕಿನ ಸ್ಥಿತಿ-ಗತಿಗಳನ್ನು ವಿಶ್ಲೇಷಿಸಿದ್ದಾರೆ.

ರಾಮಾಯಣ, ಮಹಾಭಾರತ ಕಾಲಗಳಲ್ಲಿ ಮಹಿಳೆಯರ ನಡಿಗೆಗೆ ಕಟ್ಟುನಿಟ್ಟುಗಳ ತೊಡರು ಇದ್ದುದನ್ನು ಲೇಖಕಿ ಗುರುತಿಸುತ್ತಾರೆ. ಈ ಮಾತಿಗೆ ಸೀತೆ, ಊರ್ಮಿಳಾ, ಅಹಲ್ಯೆ, ಶಕುಂತಲೆ, ದ್ರೌಪದಿ, ಕುಂತಿ, ಮಾಧವಿ ಮೊದಲಾದವರ ಪಾತ್ರಗಳು ನಮ್ಮ ಗ್ರಹಿಕೆಗೆ ಬರುತ್ತವೆ. ಇವರೆಲ್ಲಾ ಇಡೀ ವ್ಯವಸ್ಥೆಗೆ, ಪ್ರಭುತ್ವಕ್ಕೆ ಬಲಿಯಾದವರೇ. ಮೂಲದಲ್ಲಿ ವ್ಯವಸ್ಥೆಯ ಕೈಗೊಂಬೆಗಳಾಗಿದ್ದ ಇವರು ಬೇರೆ ಬೇರೆ ಕಾಲಘಟ್ಟಗಳಲ್ಲಿ, ಭಿನ್ನ ಮನೋಧರ್ಮದ, ಭಿನ್ನಧರ್ಮದ ಕವಿಗಳ ಕೃತಿಗಳಲ್ಲಿ – ಆಯಾ ಕಾಲದ ಮೌಲ್ಯ, ಆಶಯಗಳಿಗನುಗುಣವಾಗಿ ರೂಪುಗೊಂಡಿರುವುದನ್ನು ಕಾಣಬಹುದು. ಅದರಲ್ಲೂ ಆಧುನಿಕ ಕಾಲದಲ್ಲಿ ಪುರಾಣದ ಈ ಪಾತ್ರಗಳು 'ಬಂಡಾಯ'ದ ಮನೋಭಾವದವರಂತೆ ಚಿತ್ರಿಸಲ್ಪಟ್ಟಿರುವುದನ್ನು ಅನೇಕ ಕೃತಿಗಳಲ್ಲಿ ಗುರುತಿಸಬಹುದು. ಆದರೆ ಇವರೆಲ್ಲರಿಗಿಂತ ಭಿನ್ನವಾಗಿ ಮೂಲಕೃತಿಯಲ್ಲೇ ಒಂದು ಬಗೆಯ 'ಪ್ರತಿಭಟನೆ' ಮಾಡಿದವಳಾಗಿ ಕಂಡುಬರುವವಳು ಗಾಂಧಾರಿ. ಮೇಲ್ನೋಟಕ್ಕೆ ಇವಳ ಬಂಡಾಯ ಗೊತ್ತಾಗದು. ಅದಕ್ಕೇ ಜಾತ್ಯಂಧನನ್ನು ಮದುವೆಯಾದ (ಅಥವಾ ಜಾತ್ಯಂಧನಿಗೆ ಮದುವೆ ಮಾಡಿಕೊಟ್ಟ ಅಪ್ಪ-ಅಮ್ಮಂದಿರ) ಕಾರಣಕ್ಕೆ ತಾನೂ ಕಣ್ಣಿಗೆ ಬಟ್ಟೆ ಕಟ್ಟಿಕೊಂಡು 'ಕೃತಕ ಕುರುಡಿ'ಯಾದ ಈಕೆಯ ವರ್ತನೆ ಈ

ಕಾಲದಲ್ಲೂ ಹೆಣ್ಣು ಮಕ್ಕಳಿಗೆ ಪಾತಿವ್ರತ್ಯದ ಬೋಧನೆ ಮಾಡುವವರಿಗೆ ಪೂರಕ ಸಾಮಾಗ್ರಿಯಾಗಿದೆ!

ಆದರೆ, ರಾಜ್ಯಾಕಾಂಕ್ಷೆಯಿಂದ ಮಕ್ಕಳನ್ನು ಪಡೆಯಹೊರಟ ಗಾಂಧಾರಿ ತನ್ನ ಬಯಕೆಗೆ ಪೆಟ್ಟುಬಿದ್ದಾಗ ಬಸಿರನ್ನೇ ಹೊಸಕಿ ಭ್ರೂಣಗಳು ಹೊರಬೀಳುವಂತೆ ಮಾಡುವುದಲ್ಲದೇ ಅವೆಲ್ಲವನ್ನು ಕಂಡು ಅಸಹನೆಯಿಂದ 'ಬಿಸಾಡಿರಿ' ಎಂದು ಚೀರುವುದು ಮುಂತಾದ ಘಟನೆಗಳಾದ ಗಾಂಧಾರಿ ಕಣ್ಣಿಗೆ ಬಟ್ಟೆ ಕಟ್ಟಿಕೊಂಡದ್ದು ಕೇವಲ ಪಾತಿವ್ರತ್ಯವನ್ನು ಸಾಬೀತುಪಡಿಸುವುದಕ್ಕಲ್ಲ ಎಂಬುದು ಗೊತ್ತಾಗುತ್ತದೆ. ಪ್ರತಿಭಟನೆ ವ್ಯಕ್ತಿಗಳಲ್ಲಿ ಬೇರೆ ಬೇರೆ ರೂಪಗಳಲ್ಲಿ ಪ್ರಕಟವಾಗುತ್ತದೆ. ಪಾಶ್ಚಾತ್ಯ ಮಹಿಳೆಯರಲ್ಲಿ (ಮೀಡಿಯಾ, ಕ್ಲೈಟಂನೆಸ್ತ್ರ) ಪ್ರತಿಭಟನೆ ಉಗ್ರವಾಗಿ ಪ್ರಕಟಗೊಂಡರೆ, ಭಾರತೀಯ ಮಹಿಳೆಯರು ತಮಗೊದಗಿದ ಎಲ್ಲವನ್ನು (ವರ, ಶಾಪ, ಬದುಕು...) ಸಹಿಸಿಕೊಂಡು 'ಭೂಮಿ ತೂಕದ'ವರಾಗಿ ಮೂಡಿಬಂದಿದ್ದರೆ, ತನ್ನನ್ನೇ ತಾನು ಶಿಕ್ಷಿಸಿಕೊಂಡು ಬದುಕುವ, ಬಾಲ್ಯದಲ್ಲೇ ೧೦೦ ಮಕ್ಕಳ ವರವನ್ನು ಪಡೆದೂ, ಅಂಥ ಅವಕಾಶ ಕೂಡಿಬಂದ ಸಂದರ್ಭದಲ್ಲಿ ಅಮಾನುಷವಾಗಿ (ಕ್ಷುಲ್ಲಕ ಕಾರಣಕ್ಕೆ) ಹೊಸಕಿಹಾಕುವ ಗಾಂಧಾರಿ ಭಿನ್ನವಾಗಿ ನಿಲ್ಲುವುದರಿಂದ ವಿಶೇಷವಾಗಿ ಗಮನ ಸೆಳೆಯುವ ಕಾರಣದಿಂದ ಇಲ್ಲಿ ವಿಶೇಷವಾಗಿ ಉಲ್ಲೇಖಿಸಿದ್ದೇನೆ. ಭಾರತೀಯ ಮಹಿಳಾ ಬದುಕು-ಬವಣೆಯನ್ನು ಕುರಿತು ವಿಶ್ಲೇಷಿಸುವಾಗ ಆದಿ ಮಹಾಕಾವ್ಯಗಳ ಸ್ತ್ರೀಪಾತ್ರ ಗಳನ್ನು ಪರಿಗಣನೆಗೆ ತೆಗೆದುಕೊಳ್ಳುವುದರಿಂದ, 'ಸ್ತ್ರೀ ಸಂವೇದನೆ'ಯ ನೆಲೆಯಲ್ಲಿ 'ಗಾಂಧಾರಿ' ವಿಶೇಷವಾಗಿ ಗುರುತಿಸಬಹುದಾದ ಪಾತ್ರವಾದ್ದರಿಂದ, ಈ ಕೃತಿಯ ಸಂದರ್ಭದಲ್ಲಿ ಲೇಖಕಿ 'ಗಾಂಧಾರಿ'ಯ ಪಾತ್ರವನ್ನು ಪ್ರಸ್ತಾಪಿಸಬಹುದಿತ್ತು ಎಂಬ ಕಾರಣಕ್ಕಾಗಿ ಈ ವಿವರ ನೀಡಬೇಕಾಯ್ತು.




ಮುಂದೆ ಜೈನ ಬೌದ್ಧ ಯುಗಗಳಲ್ಲಿ ಸಾಹಿತ್ಯ ರಚನೆಯಂಥ ಕಾರ್ಯಕ್ಕೆ ತೊಡಗಲು ಮಹಿಳೆಯರಿಗೆ ಅವಕಾಶವಿತ್ತಾದರೂ, ಮನು ಮೊದಲಾದ ಸ್ಮೃತಿಕಾರರು ಸ್ತ್ರೀಯರ ಬಗ್ಗೆ ಪುರುಷರಿಗೆ ವಿದ್ಯಾರ್ಥಿಗಳಿಗೆ ಎಚ್ಚರಿಕೆ ನೀಡುತ್ತಾ, ಹೊರಡಿಸಿರುವ ಹೇಳಿಕೆಗಳನ್ನು ಉಲ್ಲೇಖಿಸಿದ್ದಾರೆ. ಅವುಗಳಲ್ಲಿ ಕೆಲವನ್ನು ಗಮನಿಸಬಹುದು: ''ಎಂಟು ವರ್ಷಕ್ಕೆ ಗೌರಿ ಮಗಳನ್ನು ವಿವಾಹ ಮಾಡಿಕೊಡಬೇಕು. ಎಂಟು ವರ್ಷಕ್ಕೆ ಮದುವೆ ಮಾಡುವು ದರಿಂದ ತಂದೆಗೆ ಸ್ವರ್ಗ ಲೋಕದಲ್ಲಿ ಹೆಚ್ಚಿನ ಸ್ಥಾನ ದೊರೆಯುತ್ತದೆ. ಗುಣವಂತ ವರನು ಸಿಗದೇ ಹೋದರೆ ಗುಣಹೀನನಿಗೆ ಕೊಟ್ಟರೂ ಸರಿಯೆ'' (ಯಮ) (೧೨೭).

''ಪತಿ ಬದುಕಿದ್ದಾಗ ಮಾತ್ರವೇ ಪತ್ನಿ ಅವನಿಗೆ ಸಂಪೂರ್ಣ ವಿಧೇಯಳಾಗಿ ರುವುದೇ ಅಲ್ಲದೆ ಅವನು ಎಷ್ಟೇ ದುಷ್ಟನಾಗಿರಲಿ ದುರಾಚಾರಿಯಾಗಿರಲಿ ಆವನು ಸತ್ತ ಮೇಲೂ ಅವನ ಸ್ಮರಣೆಯೇ ಪತ್ನಿಗೆ ಇಹಪರದಲ್ಲಿ ಸದ್ಗತಿಗೆ ದಾರಿ. ಸತ್ತ ಪತಿಯೊಂದಿಗೆ ಸಾಯುವುದರಿಂದ ಮಾತ್ರವೇ ಪತ್ನಿ ತನ್ನ ಪತಿಯ ಆತ್ಮದೊಂದಿಗೆ ಪಯಣಿಸಬಹುದು. ವಿಧವೆಗೆ ಸಹಗಮನವೇ ದಾರಿ'' (ಅಂಗೀರಸ).

ಇಂಥ ಕರಾಳ ಶಾಸನಗಳಿಂದ, ಕ್ರಿ. ಪೂ. ನಾಲ್ಕನೇ ಶತಮಾನದಲ್ಲೇ ಜಾರಿ ಗೊಂಡಿರಬಹುದಾದ ''ಸತಿ'' ಪದ್ಧತಿಗೆ ತಲೆಬಾಗಿ ತಮ್ಮ ಅಳಲನ್ನು ಹತ್ತಿಕ್ಕಿ ಇಚ್ಛೆಗೆ ವಿರುದ್ಧವಾಗಿಯೂ ಗಂಡ(ಶವ)ನೊಂದಿಗೆ ಭಸ್ಮಗೊಂಡ ಮಹಿಳೆಯರು ಅದೆಷ್ಟು ಜನರೋ! ಎಂದು ಉದ್ಗಾರ ತೆಗೆಯುತ್ತಾರೆ. ಇಲ್ಲಿ ಗಮನಿಸಬಹುದಾದ ಇನ್ನೊಂದು ಸಂಗತಿಯೆಂದರೆ, 'ಪತಿಯೊಂದಿಗೆ ಚಿತೆಗೆ' ಎಂಬ ಭಾಗದಲ್ಲಿ ಉಲ್ಲೇಖಗೊಂಡಿರುವ 'ಸತಿ ಪದ್ಧತಿ'ಯ ಕ್ರೌರ್ಯದ ವಿವರಗಳು. ಆಗ ಧರ್ಮಾಂಧರ ಕಟ್ಟುನಿಟ್ಟಾದ ಆಜ್ಞೆಯ ಮೇರೆಗೆ ಜರುಗುತ್ತಿದ್ದ ಈ ಅನಿಷ್ಟ ಪದ್ಧತಿ, ''ಸತಿ ಪದ್ಧತಿ''ಯ ನಿಷೇಧದ ಕಾನೂನು ಜಾರಿಗೆ ಬಂದು ಶತಮಾನಗಳೇ ಕಳೆದಿದ್ದರೂ, ಈ ಆಧುನಿಕ ಯುಗದಲ್ಲೂ ಮತ್ತೆ ಮತ್ತೆ ಪುನರಾವರ್ತನೆಯಾಗುತ್ತಿರುವುದು ವಿಷಾದದ ಸಂಗತಿ.

ಈ ಹಿನ್ನೆಲೆಯಲ್ಲಿ ೮೦ರ ದಶಕದಲ್ಲಿ ನಡೆದ 'ರೂಪ್ ಕನ್ವರ್' ಎಂಬ ತರುಣ ವಿಧವೆ ಸಾವಿರಾರು ಜನಗಳ ಸಮ್ಮುಖದಲ್ಲೇ ಚಿತೆಗೇರಿದ ಸನ್ನಿವೇಶವನ್ನು ಉಲ್ಲೇಖಿಸಿ, 'ಸತಿಮಾತೆ'ಯನ್ನು ಬೆಂಬಲಿಸುವ ಸತಿಧರ್ಮ ರಕ್ಷಾ ಸಮಿತಿ, ಅಖಿಲ ಭಾರತ ಛಾತ್ರಿ ರಕ್ಷಾ ಸಮಿತಿ ಮೊದಲಾದವುಗಳನ್ನು ತೊಡೆದುಹಾಕುವುದು ಬಹುಮುಖ್ಯ ಎನ್ನುತ್ತಾರೆ.

ವಿಷಾದದ ಸಂಗತಿ ಎಂದರೆ, 'ರೂಪ್ ಕನ್ವರ್' ಹಗರಣಕ್ಕೆ ದೇಶಾದ್ಯಂತ ಪ್ರತಿಭಟನೆಗಳು ನಡೆದಿದ್ದರೂ, ಬಹುಶಃ ೨೦೦೧ ಅಥವಾ ೦೨ನೇ ವರ್ಷದಲ್ಲಿ ಮತ್ತೊಂದು ಇಂಥ ಘಟನೆ ಮರುಕಳಿಸಿತು. ಆಗಲೂ ಪತ್ರಿಕೆಗಳಲ್ಲಿ ಈ ಬಗ್ಗೆ ವರದಿಗಳು ಬಂದವು. ಆದರ ಬೆನ್ನಲ್ಲೇ ರೂಪ್ ಕನ್ವರ್‌ಳ ಸಂಬಂಧಿಗಳನ್ನು ಸಂದರ್ಶಿಸಿದಾಗ, ಅವರು ರೂಪ್ ಕನ್ವರ್ 'ಸತಿ' ಹೋದ ಬಗ್ಗೆ ಕಿಂಚಿತ್ತೂ ಪಶ್ಚಾತ್ತಾಪ ಪಡದೆ, 'ಸತಿ ಪದ್ಧತಿ'ಯನ್ನು ಸಮರ್ಥಿಸಿಕೊಂಡು ಹೇಳಿಕೆ ನೀಡಿದ ಬಗ್ಗೆ ವರದಿಗಳು ಬಂದವು! ಹೀಗೆ ಪತ್ರಿಕೆಗಳ ಕಣ್ಣಿಗೆ ಒಂದೋ ಎರಡೋ ಘಟನೆಗಳು ಬೀಳಬಹುದು. ಆದರೆ ಹೊರ ಪ್ರಪಂಚಕ್ಕೆ ಗೊತ್ತಾಗದ ಹಾಗೆ ಅದೆಷ್ಟು ಮಹಿಳೆಯರ ಬದುಕು ಹೀಗೆ ಅಮಾನುಷವಾಗಿ ಕೊನೆಯಾಗುತ್ತದೋ ಲೆಕ್ಕಕ್ಕೆ ಸಿಗದ ವಿಷಯವಿದು. ಈ ಹಿನ್ನೆಲೆಯಲ್ಲಿ ''ರಾಜಾಸ್ಥಾನದಲ್ಲಿ ಪ್ರತಿ ಜಿಲ್ಲೆಯಲ್ಲೂ ಧಾರ್ಮಿಕ ಮುಖಂಡರು ಸತಿ ದೇವಾಲಯಗಳ ನಿರ್ಮಾಣಕ್ಕಾಗಿ ಲಕ್ಷಗಟ್ಟಲೆ ಹಣವನ್ನು ಸಂಗ್ರಹಿಸಿದಾಗ, ಸ್ತ್ರೀಯರ ಬಗ್ಗೆ ಇವರಿಗಿರುವ ದುರುದ್ದೇಶವೂ ಸ್ಪಷ್ಟವಾಗಿದೆ. ಪೂರಿ ಶಂಕರಾಚಾರ್ಯರಾಗಿದ್ದ ಸ್ವಾಮಿ ನಿರಂಜನ ದೇವತೀರ್ಥರೂ ಸತಿ ಪದ್ಧತಿಯನ್ನು ಬೆಂಬಲಿಸಿ ಅದನ್ನು ವೈಭವೀಕರಿಸುವ ಪ್ರಕೋಪಕ್ಕೆ ಹೋಗಿದ್ದುಂಟು'' ಎಂಬ ಮಾತು (ಪುಟ ೧೩೯)ಗಳು ಗಮನಾರ್ಹ.

ಮುಂದೆ ಭಾರತದಲ್ಲಿ ಸತಿಪದ್ಧತಿಯ ಹಿನ್ನೆಲೆ, ವಿದೇಶೀಯ ಪ್ರವಾಸಿಗರ ಅನಿಸಿಕೆ, ಸ್ವರೂಪ, ಅಮಾನವೀಯ ವರ್ತನೆ ಮುಂತಾದವುಗಳನ್ನು ಕೆಲವು ಘಟನೆಗಳ ಮೂಲಕ ವಿವರಿಸುತ್ತಾರೆ. ಇಲ್ಲಿ ಲೇಖಕಿ ದಾಖಲಿಸಿರುವ ಕೆಲವು ನಿದರ್ಶನಗಳು ಅತ್ಯಂತ ಘೋರವಾಗಿದ್ದು, ಎದೆ ನಡುಗಿಸುವಂತಿವೆ. ''ಈ ಬಗ್ಗೆ ಮಹಿಳೆಯರಿಗೇ ಜಿಗುಪ್ಸೆ ಹುಟ್ಟಬೇಕು. ತಮ್ಮೆಲ್ಲ ಶಕ್ತಿಯನ್ನು ಒಟ್ಟುಗೂಡಿಸಿ ಪ್ರತಿಭಟಿಸಬೇಕು. ಇಂಥ ಘಟನೆಗಳು ಮತ್ತೆ ಮರುಕಳಿಸದಂತೆ ಎಚ್ಚರದ ಕಣ್ಣುಗಳಿಂದ ಮಹಿಳೆಯರು ಸುತ್ತಮುತ್ತಲನ್ನು ಗಮನಿಸಬೇಕು'' ಎಂಬ ಕಿವಿಮಾತನ್ನು ಹೇಳುತ್ತಾರೆ.

ಆದರೆ ಈ ಎಚ್ಚರ ಪ್ರಜ್ಞಾವಂತರಾದ ಎಲ್ಲಾ ಜನರಲ್ಲೂ ಮೂಡಬೇಕು. ಮಕ್ಕಳಿಗೆ ವೈಚಾರಿಕ ಶಿಕ್ಷಣವನ್ನು ನೀಡಬೇಕು. ಮುಖ್ಯವಾಗಿ ಹೆಣ್ಣೋ, ಗಂಡೋ – ಮಾನವರನ್ನು ಮಾನವರಂತೆ ನಡೆಸಿಕೊಳ್ಳುವ ಮನೋಭಾವ ಸಮಾಜದ ಎಲ್ಲರಲ್ಲಿ ಬಂದರೆ ಮಾತ್ರ ಇಂಥ ಸಾಮಾಜಿಕ ರೋಗಗಳು ನಿರ್ನಾಮವಾಗಲು ಸಾಧ್ಯ.

'ಅಂಧಶ್ರದ್ಧೆಗೆ ದೇಹ ನೀಡಿಕೆ' ಎಂಬ ಭಾಗದಲ್ಲಿ ಭಾರತದಲ್ಲಿ ಅದರಲ್ಲೂ ಕರ್ನಾಟಕದಲ್ಲಿನ 'ಸೂಳೆಗಾರಿಕೆ'ಯ ಬಗ್ಗೆ ಸವಿವರವಾಗಿ ಚರ್ಚೆ ಮಾಡಿದ್ದಾರೆ. ವಿಶ್ವದಲ್ಲಿ ಸಾಮಾನ್ಯವಾಗಿರುವ ಸೂಳೆಗಾರಿಕೆ ಭಾರತದಲ್ಲಿ ಮಾತ್ರ ದೇವರ ಹೆಸರಿನಲ್ಲಿ ಅಥವಾ ದೈವ ತೃಪ್ತಿಯ ನೆಪದಲ್ಲಿ ನಡೆಯಲು ಕಾರಣಗಳನ್ನು, ''ಕೆಲವೊಮ್ಮೆ ಮುಪ್ಪಿನ ಕಾಲದಲ್ಲಿ ತಮಗೆ ಮಗಳೇ ಆಶ್ರಯದಾತಳಾಗುತ್ತಾಳೆಂದು ಗಂಡು ಮಕ್ಕಳಿಲ್ಲದ ತಂದೆತಾಯಿಗಳು ತಮಗಿರುವ ಮಗಳನ್ನು ದೇವದಾಸಿ ಸ್ಥಾನಕ್ಕೆ ದೂಡುವುದುಂಟು. ಕರ್ನಾಟಕದಲ್ಲಿ ದೇವದಾಸಿಯರು ಪ್ರಭಾವಯುತರಾಗಿ ಬಾಳುತ್ತಿರುವ ಪಂಗಡ. ತಮ್ಮ ಸೋದರನಷ್ಟೇ ಕುಟುಂಬದಲ್ಲಿ ಪ್ರಾಮುಖ್ಯತೆಯನ್ನು ಹೊಂದಿದ್ದು ಪಿತ್ರಾರ್ಜಿತ ಆಸ್ತಿಯಲ್ಲಿ ಹಕ್ಕನ್ನು ಸ್ಥಾಪಿಸಿಕೊಳ್ಳುವುದಲ್ಲದೆ ತಮ್ಮ ತಂದೆಯ ಅಂತ್ಯಕ್ರಿಯೆ ಮತ್ತು ಶ್ರಾದ್ಧವನ್ನು ಮಾಡುವ ಹಕ್ಕು ತಮಗುಂಟೆಂದು ಹೇಳಿಕೊಳ್ಳುವ ಈ ಗುಂಪು ತನ್ನ ಗಾತ್ರವನ್ನು ಮಾತ್ರ ಹೆಚ್ಚಿಸಿಕೊಳ್ಳುತ್ತ ಹೋಗಿರುವುದಲ್ಲದೆ, ದೇವದಾಸಿ ಸಂಪ್ರದಾಯ ವಿರದ ಕುಟುಂಬಗಳ ಹೆಣ್ಣು ಮಕ್ಕಳನ್ನೂ ತನ್ನ ವರ್ತುಲದೊಳಗೆ ಎಳೆದುಕೊಂಡಿದೆ'' (ಪುಟ ೧೪೭-೧೪೮) ಎಂದು ವಿವರಿಸುತ್ತಾರೆ. 'ದೇವದಾಸಿ' ಪದ್ಧತಿಗೆ ಇದಿಷ್ಟೇ ಸಂಗತಿ ಕಾರಣವಲ್ಲ. ತಮ್ಮ ಮಕ್ಕಳಿಗೆ ಕಾಯಿಲೆಯಾದಾಗ, ಗುಣಪಡಿಸಲು ದೇವರ ಮೊರೆಹೋಗುವ ತಂದೆ ತಾಯಿಗಳು ಕಾಯಿಲೆಯಿಂದ ಮುಕ್ತಳಾದ ಮಗಳನ್ನು ದೇವಿಗೆ 'ಬಸವಿ' ಬಿಡುವುದಾಗಿ ಹರಕೆ ಹೊರುವ 'ಅಂಧ ಭಕ್ತಿ'ಯೂ ಕಾರಣ ವಾಗಿದೆ. ಒಂದು ರೀತಿಯಲ್ಲಿ ಭಕ್ತರನ್ನು ಆಕರ್ಷಿಸುವ ಇಂಥ ಸ್ತ್ರೀಯರಿಂದ ದೇವಸ್ಥಾನದ ಆದಾಯವೂ ಹೆಚ್ಚುವ ಕಾರಣ ಈ ಅನಿಷ್ಟ ಪದ್ಧತಿ ನಿರ್ಮೂಲನೆಯಾಗುವ ಬದಲು ಚಿಗುರೊಡೆಯುತ್ತಿರುವುದು ವಿಷಾದದ ಸಂಗತಿ. ಇಲ್ಲಿ ಹೆಣ್ಣು ಮಕ್ಕಳನ್ನು ಪ್ರೇರೇಪಿಸು ವವರ ಮನಸ್ಸು ಪರಿವರ್ತನೆಯಾಗಬೇಕು. ಧಾರ್ಮಿಕ ಸಂಕೋಲೆಗಳನ್ನು ಬಿಡಿಸಿ ಕೊಂಡು ಛಲದ ಬದುಕು ಸಾಗಿಸುವಂತೆ ಸಲಹೆ ನೀಡುತ್ತಾರೆ ಲೇಖಕಿ.

ಅದೃಷ್ಟವಶಾತ್ ದೇವದಾಸಿಯರು, ವೇಶ್ಯೆಯರಲ್ಲಿ ಕೆಲವರ ಮನಸ್ಸನ್ನು

ಪರಿವರ್ತಿಸಿ, ಹೊಸಬಾಳು ನೀಡುವ ಪ್ರಯತ್ನಗಳು ಈ ಕಾಲದಲ್ಲಿ ನಡೆಯುತ್ತಿವೆ ಯಾದರೂ ಇನ್ನೊಂದು ಕಡೆ ಪೊಲೀಸ್ ಬಂದೋಬಸ್ತಿನಲ್ಲೇ ಮೂಢಭಕ್ತಿಯನ್ನು ವೈಭವೀಕರಿಸುವಂಥ ಆ ಮೂಲಕ ಜನಸಾಮಾನ್ಯರನ್ನು ತನ್ನ ತೆಕ್ಕೆಗೆ ಸೆಳೆದು ಕೊಳ್ಳುವಂಥ ಪ್ರದರ್ಶನಗಳೂ ನಡೆಯುತ್ತಿರುವುದು ಶೋಚನೀಯ. ಪ್ರಗತಿಪರರು ಈ ಕಡೆ ಹೆಚ್ಚು ಗಮನಹರಿಸಬೇಕಿದೆ.

ಭಕ್ತಿಯ ಹೆಸರಲ್ಲಿ ಹೆಣ್ಣು ಮಕ್ಕಳ ಬದುಕು ತುಳಿಯಲ್ಪಟ್ಟರೆ, ಇನ್ನೊಂದು ಕಡೆ ನಿರುದ್ಯೋಗ, ವರದಕ್ಷಿಣೆ ಸಮಸ್ಯೆ, ವಿಫಲ ಪ್ರೇಮ, ಹೊಟ್ಟೆಪಾಡು, ಸಂಸಾರವನ್ನು ನಿಭಾಯಿಸುವ ಜವಾಬ್ದಾರಿ ಹೆಣ್ಣು ಮಕ್ಕಳ ಮೇಲೆ ಬಿದ್ದಾಗ, ಮದುವೆಗೆ ಮೊದಲೇ ಗರ್ಭವತಿಯಾಗುವವರು, ತಮ್ಮನ್ನು ರಕ್ಷಿಸುವವರಿಂದಲೇ ವಂಚನೆಗೊಳಗಾಗುವವರು – ಹೀಗೆ ಹಲವಾರು ಕಾರಣಗಳು, ಸಂದರ್ಭಗಳು ದೊಡ್ಡ ದೊಡ್ಡ ನಗರಗಳಲ್ಲಿ 'ವೇಶ್ಯಾವೃತ್ತಿ' ಬೆಳೆಯಲು ಪೂರಕವಾಗಿವೆ. ಈ ಸಮಸ್ಯೆ ಕೇವಲ ಮಹಿಳೆಯರ ದೇಹ-ಮನಸ್ಸಿನ ಆರೋಗ್ಯವನ್ನು ಕೆಡಿಸುವುದಿಲ್ಲ. ಬದಲಾಗಿ ಇಡೀ ಸಮಾಜದ ಸ್ವಾಸ್ಥ್ಯಕ್ಕೇ ಕೊಡಲಿ ಪೆಟ್ಟಾಗಿದೆ. ಈ ಬಗ್ಗೆ ಸರ್ಕಾರ ಹಾಗೂ ಅನೇಕ ಸಂಘ ಸಂಸ್ಥೆಗಳು ಕಾರ್ಯ ನಿರ್ವಹಿಸುತ್ತಿದ್ದು, ವೇಶ್ಯಾಸಮಸ್ಯೆಯ ಕಾರಣಗಳನ್ನು ಹುಡುಕಿ, ಕೆಲವರಿಗೆ ಪುನರ್ವಸತಿ ಕಲ್ಪಿಸಿರುವುದೂ ಕಂಡುಬಂದಿದೆ. ಪರಿಸ್ಥಿತಿಯ ಒತ್ತಡಕ್ಕೊಳಗಾದ ಮಹಿಳೆಯರು ಬಂಧ ಮುಕ್ತಗೊಂಡು ಸಮಾಜದ ಮುಖ್ಯವಾಹಿನಿಗೆ ಸೇರ ಬಯಸಿದರೆ, ಅಂಥವರು ಆತ್ಮವಿಶ್ವಾಸದಿಂದ ಬದುಕಲು ಪೂರಕ ವಾತಾವರಣವನ್ನು ಮೂಡಿಸುವುದು ಸಮಾಜದ ಕೆಲಸ.

ಈ ಪುಸ್ತಕದ ಮುಂದಿನ ಭಾಗ ಅವಿವಾಹಿತ ತಾಯಂದಿರನ್ನು ಕುರಿತುದಾಗಿದೆ. ಪುರುಷಪ್ರಧಾನ ಸಮಾಜವೇ ಇವರ ಸಮಸ್ಯೆಗೆ ಮೂಲಕಾರಣ ಎನ್ನುವ ಲೇಖಕಿ, ''ಮಹಿಳೆಯರ ಪರಿಸ್ಥಿತಿಯನ್ನು ಸುಧಾರಿಸುವ ಎಲ್ಲ ಪ್ರಯತ್ನಗಳೂ ಸಂಪ್ರದಾಯಗಳ ಭಾರಕ್ಕೆ ಸಿಕ್ಕಿ ನುಚ್ಚುನೂರಾಗುತ್ತಲೇ ಇವೆ. ಸಾರ್ವಜನಿಕವಾಗಿ ಮಹಿಳೆಯರನ್ನು ಹೆಗ್ಗಳಿಸುವ ಜಾಣತನವನ್ನು ಬಳಸುತ್ತಲೇ ಅವರನ್ನು ಆಲಂಕಾರಿಕ ವಸ್ತುಗಳ ಮಟ್ಟಕ್ಕೆ ಇಳಿಸಲಾಗುತ್ತಿದೆ. ಅವರನ್ನು ಸಂಪೂರ್ಣವಾಗಿ ಬಳಸಿಕೊಳ್ಳುತ್ತಲೇ ಕುಟಿಲೋಪಾಯಗಳ ಮೂಲಕ ಅವರನ್ನು ಕೆಳಕ್ಕೆ ದೂಡಲಾಗುತ್ತಿದೆ'' (ಪುಟ. ೧೬೧) ಎಂಬುದಾಗಿ ತಿಳಿಸುತ್ತಾರೆ. ಅನೈತಿಕ ಸಂಬಂಧದ ಅನಾಥ ಮಕ್ಕಳ ರಕ್ಷಣೆಗೆ ದೇಶಾದ್ಯಂತ ಅನಾಥಾ ಲಯಗಳು ಕೆಲಸ ನಿರ್ವಹಿಸುತ್ತಿರುವುದು, ದತ್ತು ಮಕ್ಕಳ ಸ್ವೀಕಾರ ಮುಂತಾದ ಪರಿಹಾರಗಳಿದ್ದರೂ, ಪಾಪದ ಶಿಶುಗಳು ಜನಿಸದಂತೆ ಕ್ರಮ ಕೈಗೊಳ್ಳುವುದು ಅಗತ್ಯ.

ಮುಂದೆ ವಿಧವೆಯರ ಸಮಸ್ಯೆಗಳತ್ತ ಗಮನ ಸೆಳೆವ ಲೇಖಕಿ ಒಂದು ಕಡೆ ಗಂಡ ಸತ್ತಾಗ ಬದುಕಿರುವ ಹೆಂಡತಿಯನ್ನು ಅವನ ಚಿತೆಗೇರಿಸಿ ವಿಚಿತ್ರ ನೆಮ್ಮದಿ ಕಾಣುವ ಸಮುದಾಯ, ಇನ್ನೊಂದು ಕಡೆ ಗಂಡ ಸತ್ತ ಮೇಲೆ ಆತನ ಹೆಂಡತಿಯ ಪ್ರಾಣವೊಂದನ್ನು ಮಾತ್ರ ಉಳಿಸಿ, ಅವಳ ಅಂದಗೆಡಿಸಿ ವಿಕಾರಗೊಳಿಸುವ ವಿಚಿತ್ರ ಕ್ರಮಗಳನ್ನು ವಿವರಿಸಿದ್ದಾರೆ. ಗಂಡ ಸತ್ತಾಗ ಸಂಪ್ರದಾಯದ ಹೆಸರಲ್ಲಿ ಕುರುಡು ವಿಧಿ ಗಳನ್ನು ಪೂರೈಸಬೇಕಾದಾಗ ಅಂಥ ಮಹಿಳೆ ಆ ಕ್ಷಣದಲ್ಲೇ ಬಂಡಾಯ ಎಬ್ಬಿಸಿ, ಪುರೋಹಿತಶಾಹಿಯ ಸೂಚನೆಗಳನ್ನು ಸಂಪೂರ್ಣವಾಗಿ ನಿರಾಕರಿಸುವುದೊಂದೇ ಇದಕ್ಕೆ ಮದ್ದು ಎಂದು ಸಲಹೆ ನೀಡಿದ್ದಾರೆ.

ಇಂಥ ಪ್ರಯತ್ನಗಳನ್ನು ವಿದ್ಯಾವಂತ, ವೈಚಾರಿಕ ಮನೋಭಾವದ ಮಹಿಳೆಯರು ಈಗಾಗಲೇ ಮಾಡಿದ್ದಾರೆ, ಮಾಡುತ್ತಿದ್ದಾರೆ. ಇವರ ಜೊತೆಗೆ ಉಳಿದ ಮಹಿಳೆ ಯರಲ್ಲೂ, ಸಂಬಂಧಿಗಳಲ್ಲೂ ಒಂದು 'ಜೀವ'ವನ್ನು 'ಜೀವಂತ ಶವ'ವನ್ನಾಗಿ ಮಾಡ ಬಾರದೆಂಬ 'ಪ್ರಜ್ಞೆ' ಮೂಡಬೇಕಿದೆ. ಗಂಡ ಸತ್ತ ಮೇಲೆ ಇಡೀ ಸಂಸಾರದ ಭಾರ ಹೊರುವ ಮಹಿಳೆಯರು ಧೈರ್ಯವಾಗಿ, ಆತ್ಮವಿಶ್ವಾಸದಿಂದ ಜೀವನ ಸಾಗಿಸಲು ಅನುಕೂಲವಾಗುವಂಥ ವಾತಾವರಣ ನಿರ್ಮಾಣವಾಗಬೇಕು.

ಈ ಎಲ್ಲಾ ಸಮಸ್ಯೆಗಳಿದ್ದಾಗ್ಯೂ ಈ ಶತಮಾನದಲ್ಲಿ ಮಹಿಳೆಯರಿಗೆ ಶಿಕ್ಷಣ, ಉದ್ಯೋಗಾವಕಾಶಗಳು ದೊರೆಯುತ್ತಿದ್ದು, ಆರ್ಥಿಕವಾಗಿ ಸ್ವಾವಲಂಬಿಯಾಗಲು ಮಹಿಳೆಯರಿಗೆ ಅನುಕೂಲಕರವಾದ ವಾತಾವರಣ ಮೂಡುತ್ತಿದ್ದರೂ, ಪುರುಷರಷ್ಟೇ ಸಮಬಲವಾಗಿ ಗಗನಸಖಿಯರಿಂದ ಹಿಡಿದು ಗಾರೆಕೆಲಸದವರೆಗಿನ ವಿವಿಧ ಹಂತಗಳ ಕಾರ್ಯವನ್ನು ಮಹಿಳೆಯರು ನಿರ್ವಹಿಸುತ್ತಿದ್ದರೂ, ಅನೇಕ ಸಮಸ್ಯೆಗಳು ಎದುರಾಗುವ ಬಗೆಯನ್ನು ವಿವರಿಸುತ್ತಾ, ಕುಟುಂಬ, ಸಮಾಜ, ಕಛೇರಿಗಳಲ್ಲಿ ಮಹಿಳೆಯರಿಗೆ ಪೂರಕವಾದ ವಾತಾವರಣ ನಿರ್ಮಾಣವಾಗಬೇಕೆಂದೂ ಹೇಳುತ್ತಲೇ, 'ವಿಮೋಚನೆ' ಪದದ ದುರ್ಬಳಕೆಯನ್ನು ಖಂಡಿಸುತ್ತಾರೆ. 'ಸ್ತ್ರೀವಾದ' ಎಂದರೆ ಪುರುಷ ವಿರೋಧಿ ಎಂದು ತಿಳಿಯಕೂಡದು, ಗಂಡ-ಹೆಂಡತಿಯರ ಸ್ವಪ್ರತಿಷ್ಠೆಯಿಂದ ಎಷ್ಟೋ ಕುಟುಂಬದ ಮಕ್ಕಳು ಬೀದಿಪಾಲಾಗುವ ಸಂದರ್ಭಗಳೂ ಉಂಟಾಗುತ್ತಿರುವ ಹಿನ್ನೆಲೆಯಲ್ಲಿ 'ಸಾಮರಸ್ಯದ ಬದುಕು' ಎಲ್ಲರಿಗೂ ತುಂಬಾ ಮುಖ್ಯ ಎಂದೂ ವಿವರಿಸುತ್ತಾರೆ.


ಎನ್. ಗೀತಾ

ಡಿಎಚ್. ೪/ಎ, ನ್ಯೂ ಕಾಲನಿ, ಭದ್ರಾವತಿ - ೧

**ಸೊಳ್ಳೆ, ಜಿರಳೆ, ಜೇಡ ಮತ್ತು ಹಲ್ಲಿಗಳಿಲ್ಲದ ಮನೆಯುಂಟೇ ? ಸೊಳ್ಳೆ, ಜೇಡ ಅಥವಾ ಹಲ್ಲಿಗಳಿಲ್ಲದ ಮನೆ ಅಥವಾ ಪ್ರದೇಶಗಳಿರಬಲ್ಲದು. ಆದರೆ ಜಿರಳೆ ಇಲ್ಲದ ಮನೆ ಎಂದರೆ ಅದು ಬುದ್ಧನ ಸಾವಿಲ್ಲದ ಮನೆಯ ಸಾಸಿವೆ ಎಂದಷ್ಟೇ ಸತ್ಯ.**

**ಡಾ|| ಎನ್. ಎಸ್. ಲೀಲಾ**

# ಜಿರಳೆ ಮಹಾ ತಿರಳೆ

ನನಗೆ ತಿಳಿದವರೊಬ್ಬರ ಮಗ ಕಾಲೇಜಿನಲ್ಲಿ ಜೀವವಿಜ್ಞಾನ ಬೇಡವೆಂದು ಆಗ್ರಹಿಸಿದ. ಅಂತಹ ಹಟ ಏಕೆಂದು ವಿಚಾರಿಸಿದಾಗ ಆತನ ಸ್ನೇಹಿತ ಜೀವವಿಜ್ಞಾನ ತೆಗೆದುಕೊಂಡರೆ ಜಿರಳೆಯನ್ನು ಪ್ರಯೋಗಕ್ಕಾಗಿ ಕತ್ತರಿಸಬೇಕೆಂದು ಹೇಳಿದ್ದನೆಂಬ ಕಾರಣ ಕೊಟ್ಟ. ಆ ಹುಡುಗನಿಗೆ ಜಿರಳೆ ಎಂದರೆ ಎಲ್ಲಿಲ್ಲದ ಅಸಹ್ಯ ಹಾಗೂ ಜಿಗುಪ್ಸೆ. ಪ್ರಾಣಿಶಾಸ್ತ್ರವನ್ನೇ ಕಲಿಸುತ್ತಿರುವ ನನಗೆ ಅವನ ಅನ್ನಿಸಿಕೆಯಿಂದ ಹೆಚ್ಚೇನೂ ಬೇಜಾರಾಗಲಿಲ್ಲ. ಏಕೆಂದರೆ ಇಂತಹ ಅನೇಕ ವಿದ್ಯಾರ್ಥಿಗಳನ್ನು ನಾನು ಕಂಡಿದ್ದೇನೆ. ಆ ಒಂದು ಕಾರಣಕ್ಕಾಗಿಯೇ ಜೀವವಿಜ್ಞಾನ ಬೇಡವಾದರೆ ಅದು ತಪ್ಪು ಗ್ರಹಿಕೆ. ಅಲ್ಲದೆ ಜಿರಳೆಯ ಬೆಲೆ ತುಂಬಾ ದುಬಾರಿಯಾದ್ದರಿಂದ ಅನೇಕ ಕಾಲೇಜುಗಳಲ್ಲಿ ಅದನ್ನು ಪ್ರಯೋಗಾಲಯದಲ್ಲಿ ಬಳಸದೇ ಬರೀ ವಿವರಣೆ ನೀಡುತ್ತಾರೆಂದು ಸಮಜಾಯಿಷಿ ನೀಡಿದೆ.

ಆ ಹುಡುಗನ ತಂದೆ, ''ಏನು ? ಜಿರಳೆಗೂ ಬೆಲೆ ತೆರಬೇಕೆ ?'' ಎಂದು ಪ್ರಶ್ನಿಸಿದರು. ಅದಕ್ಕೆ ನಾನೆಂದೆ : ''೨೦ ರಿಂದ ೨೪ ರೂಪಾಯಿಗಳು ಒಂದು ಡಜನ್ ಜಿರಳೆಗೆ.'' ಅವರು ಆಶ್ಚರ್ಯಚಕಿತರಾಗಿ, ಹಾಗಾದರೆ ಜಿರಳೆ ವ್ಯಾಪಾರ ಆಶಾದಾಯಕ. ನಮ್ಮ ಮನೆಯಲ್ಲಿರುವ ಜಿರಳೆಗಳನ್ನು ಅರ್ಧ ಬೆಲೆಗಾದರೂ ಮಾರಲು ನಾವು ಸಿದ್ಧ ಎಂದರು. ೧೯೬೦ರ ದಶಕದಲ್ಲಿ ಒಂದು ಡಜನ್ ಜಿರಳೆಗೆ ೧ರಿಂದ ೨ ರೂಪಾಯಿಗಳಿದ್ದದ್ದು, ೧೯೯೦ರ ದಶಕದಲ್ಲಿ ರೂ. ೬ರಿಂದ ೮ ಇತ್ತು. ಆದರೆ ಇಂದು ಅದು ರೂ. ೨೪ಕ್ಕೆ ಏರಿದೆ ಎಂದರೆ ಜಿರಳೆಯ ವ್ಯಾಪಾರ ಬಂಡವಾಳರಹಿತ ಲಾಭದ ದಂಧೆ ಎಂದೆ. ಬೇಸಿಗೆಯಲ್ಲಿ ಅವು ಸುಲಭವಾಗಿ ದೊರಕುವುವು; ಆದರೆ ನವೆಂಬರ್-ಡಿಸೆಂಬರ್ ಚಳಿಗಾಲದಲ್ಲಿ ಜಿರಳೆ ಬೇಕೆಂದರೆ ಅದು ಮತ್ತಷ್ಟು ದುಬಾರಿ ! ಹಾಗಾದರೆ ಜಿರಳೆ ಅಷ್ಟೊಂದು ಬೆಲೆಬಾಳುವ ಜೀವಿಯೆ ?

ಸೊಳ್ಳೆ, ಜಿರಳೆ, ಜೇಡ ಮತ್ತು ಹಲ್ಲಿಗಳಿಲ್ಲದ ಮನೆಯುಂಟೇ ? ಸೊಳ್ಳೆ, ಜೇಡ ಅಥವಾ ಹಲ್ಲಿಗಳಿಲ್ಲದ ಮನೆ ಅಥವಾ ಪ್ರದೇಶಗಳಿರಬಲ್ಲದು. ಆದರೆ ಜಿರಳೆ ಇಲ್ಲದ ಮನೆ ಎಂದರೆ ಅದು ಬುದ್ಧನ ಸಾವಿಲ್ಲದ ಮನೆಯ ಸಾಸಿವೆ ಎಂದಷ್ಟೇ ಸತ್ಯ. ಏಕೆಂದರೆ ಅವು ನೀವು ಬಳಸುವ ಕೀಟನಾಶಕಗಳಿಂದ ದೂರವಿರಲು ನಿಮ್ಮ ಕಣ್ಣಿಗೆ ಕಾಣದಂತಿರ ಬಹುದು. ಆದರೆ ಒಳಚರಂಡಿ/ಕೊಳಚೆ ನೀರು ಹೋಗುವ ನಿಮ್ಮ ಮನೆಯ ಪೈಪ್‌ಗಳಲ್ಲಿ ಧಾರಾಳವಾಗಿ ಅಡಗಿ ಕೊಂಡಿರುತ್ತವೆ. ಹಾಗಾಗಿ ಈ ಜಗತ್ತಿನಲ್ಲಿ ಯಾರಾದರೂ ತಮ್ಮ ಮನೆಯಲ್ಲಿ ಜಿರಳೆಯಿಲ್ಲವೆಂದು ಬೆಟ್ ಕಟ್ಟಿದರೆ ಸೋಲುವುದಂತೂ ಖಂಡಿತ. ಜಿರಳೆಗೆ ಬಡವ, ಬಲ್ಲಿದ, ಸಣ್ಣ ಮನೆ, ದೊಡ್ಡ ಅರಮನೆ ಎಂಬ ಭೇದವಿಲ್ಲ. ಅದು ಜನಾನುರಾಗಿ. ಚೊಕ್ಕಟವಿಲ್ಲದ ಮನೆಗಳೆಂದರೆ ಮತ್ತಷ್ಟು ಹಿತ. ಅಂದರೆ ಅದು ಸರ್ವವ್ಯಾಪಿ.

ಮಧ್ಯಯುಗದಲ್ಲಿ ಆಳುತ್ತಿದ್ದ ಪೆಡಂಭೂತಗಳಿಗೂ ಹಿಂದೆಯೇ ಜಿರಳೆಗಳು ಅವತರಿಸಿದವು. ಅನೇಕ ಕಾರಣ ಗಳಿಗಾಗಿ, ವಿಶೇಷವಾಗಿ ಹವಾಗುಣದ ವೈಪರೀತ್ಯದಿಂದ, ದೈತ್ಯಾಕಾರದ ಪೆಡಂಭೂತಗಳು ಹೇಳಹೆಸರಿಲ್ಲದೇ ಭೂಗತವಾದವು. ಆದರೆ ಕೋಟ್ಯಾಂತರ ವರ್ಷಗಳಲ್ಲಿ ಬದಲಾದ ಹವಾಗುಣಗಳು ಜಿರಳೆಗಳ ಮೇಲೆ ಯಾವ ಪ್ರಭಾವವನ್ನೂ ಬೀರದೆ ಇಂದಿಗೂ ಅವು ತಮ್ಮತನವನ್ನು ಉಳಿಸಿಕೊಂಡಿವೆ. ಮಾನವ ಯಾವುದೇ ಅನ್ಯಗ್ರಹಕ್ಕೆ ಕಾಲಿಟ್ಟು ತನ್ನ ಧ್ವಜವನ್ನು ಅಲ್ಲಿ ನೆಟ್ಟು ತಾನೇ ಮೊದಲಿಗ ಎಂದೇನಾದರೂ ಹಕ್ಕು ಸಾಧಿಸಹೊರಟಲ್ಲಿ, ಅವನೆದುರಿಗೆ ಜಿರಳೆ ಪ್ರತ್ಯಕ್ಷವಾಗಿ ತಾನು ಅವನಿಗಿಂತ ಹಿಂದೆಯೇ ಬಂದಿದ್ದೆ ಎಂದು ಹೇಳಬಹುದು. ಅಂದರೆ ಜಿರಳೆಗಳು ಎಲ್ಲಾ ಕಾಲ ಮತ್ತು ದೇಶಗಳಲ್ಲೂ ಹರಡಿವೆ ಎನ್ನುವುದಕ್ಕೆ ಇದೊಂದು ನಿದರ್ಶನ. ಅಂತೆಯೇ ಇದರ ವೈಜ್ಞಾನಿಕ ನಾಮ 'ಪೆರಿಪ್ಲಾನೇಟಾ' (ಪೆರಿ = ಸುತ್ತಲೂ, ಪ್ಲಾನೇಟಾ = ಗ್ರಹಗಳು) ಎಂದರೆ ಗ್ರಹಗಳಲ್ಲೆಲ್ಲಾ ಎಂಬ ಅರ್ಥ ಕೊಡುತ್ತದೆ. ಇದರ ಆಂಗ್ಲ ನಾಮ cockroach ಸ್ಪಾನಿಷ್ ಭಾಷೆಯಿಂದ ಬಂದಿದೆ. ಸ್ಪೇನ್‌ನಲ್ಲಿ ಸಿಗುವ ಕುಕರೋಚಾ ಎಂಬ ಹಣ್ಣು ಒಂದು ಕೆಟ್ಟ ವಾಸನೆಯದು. ಈ ಜೀವಿಯೂ ಒಂದು ಕೆಟ್ಟ ವಾಸನೆ ಸೂಸುವುದರಿಂದ ಕುಕರೋಚಾ ಆಂಗ್ಲೀಕರಣಗೊಂಡಿದೆ.



*ಗಂಡು*

*೩೦-೩೫ ಎಂ. ಎಂ.*

*ಪೆರಿಪ್ಲಾನೇಟಾ ಆಸ್ಟ್ರೇಲೇಷಿಯಾ*

೩೫೦ರಿಂದ ೨೮೦ ಕೋಟ್ಯಾಂತರ ವರ್ಷಗಳು ಎಂದರೆ ಕಾರ್ಬೋನಿಫೆರಸ್ ಕಾಲದಲ್ಲಿ ಅವತರಿಸಿದ ಜಿರಳೆಗಳು ಇಂದು ೩೦೦೦ ದಿಂದ ೪೦೦೦ ಪ್ರಭೇದ ಗಳಲ್ಲಿ ಕಾಣಬಹುದು. ಇವು ಪರಾವಲಂಬಿಗಳಲ್ಲ, ವಿಷಕಾರಕವೂ ಅಲ್ಲ. ಆದರೂ ಕಂಡಕೂಡಲೇ ಪೊರಕೆಯಿಂದ ಹೊಡೆಸಿಕೊಳ್ಳುವ, ಕ್ರಿಮಿನಾಶಕಗಳಿಗೆ ತುತ್ತಾಗುವ ಅಸಹ್ಯ ಜೀವಿಯಾಗಿದೆ. ನೀವೇನಾದರೂ ಸೂಕ್ಷ್ಮವಾಗಿ ಗಮನಿಸಿದ್ದಲ್ಲಿ ನಿಮ್ಮ ಅಡಿಗೆ, ಬಚ್ಚಲು ಮನೆಗಳಲ್ಲಿ ಕಾಣಬರುವ ಜಿರಳೆಗಳಿಗೂ ಹಾಗೂ ನಿಮ್ಮ ಮಲಗುವ ಕೋಣೆಯ ಬೀರು ಅಥವಾ ಪುಸ್ತಕದ ಬೀರುಗಳಲ್ಲಿ ಕಾಣಬರುವ ಜಿರಳೆಗಳಿಗೂ ಗಾತ್ರ, ಬಣ್ಣ, ರಚನೆಗಳಲ್ಲಿ ಅನೇಕ ವ್ಯತ್ಯಾಸಗಳನ್ನು ಕಂಡಿರುತ್ತೀರಿ. ಅದಕ್ಕೆಲ್ಲಾ ತಾಳ್ಮೆ, ಸಮಯ ಎಲ್ಲಿದೆ ಎನ್ನುತ್ತೀರಾ ? ಈ ಒಂದು ಕ್ಷುಲ್ಲಕ ಜೀವಿ, ಜೀವ ವಿಜ್ಞಾನದ ಎಷ್ಟೊಂದು ವಿಚಾರಗಳನ್ನು ತೆರೆದಿಡ ಬಲ್ಲದು, ಹಾಗೂ ಸುಲಭ ಅಧ್ಯಯನಕ್ಕೆ ಎಂತಹ ವಸ್ತುವಾಗಬಲ್ಲದೆಂದು ನೋಡಿ.

ಭಾರತದಲ್ಲಿ ಸಾಮಾನ್ಯವಾಗಿ ಕಾಣಬರುವ ಮನೆ ಜಿರಳೆಗಳಲ್ಲಿ ೪ ಮುಖ್ಯ ಪ್ರಭೇದಗಳನ್ನು ಗುರುತಿಸ

ಬಹುದು. ಅವುಗಳನ್ನು ಅಮೆರಿಕಾ, ಜರ್ಮನಿ, ಆಸ್ಟ್ರಲೇಷಿಯಾ, ಭಾರತದ ಜಿರಳೆಗಳೆಂದು ಗುರುತಿಸಬಹುದು. ಇವುಗಳಿಗೆ ಹೊಂದಿಕೊಂಡ ದೇಶದ ಹೆಸರುಗಳು ಅವುಗಳ ಮೂಲಸ್ಥಾನವನ್ನು ವಿವರಿಸುವುದಿಲ್ಲ. ಇವು ಹಡಗುಗಳ ಮೂಲಕ ಒಂದು ದೇಶದಿಂದ ಮತ್ತೊಂದಕ್ಕೆ ಪಯಣಿಸಿ ಎಲ್ಲೆಡೆ ಹರಡಿರುವುವಾದರೂ ಅವು ಎಲ್ಲಿಂದ ಬಂದವು ಎಂದು ನಿಖರವಾಗಿ ಹೇಳುವುದು ಕಷ್ಟಸಾಧ್ಯ. ಜಿರಳೆಗಳು ಸುಮಾರು ೨ ವರ್ಷ ಜೀವಿಸಬಲ್ಲವು. ಇವು ಈ ಅವಧಿಯಲ್ಲಿ ಗರಿಷ್ಠ ಪ್ರಮಾಣದಲ್ಲಿ ೫೦ ಬಾರಿ ಸಂತಾನೋತ್ಪತ್ತಿ ಮಾಡಬಲ್ಲವು. ಸಂದುಗೊಂದುಗಳಲ್ಲಿ ಬೀಜಗಳಂತೆ ಕಾಣುವ ಜಿರಳೆ ಮೊಟ್ಟೆಗಳ ಪ್ರತಿ ಕ್ಯಾಪ್ಸೂಲ್‌ನಲ್ಲಿ ೧೬ ಮೊಟ್ಟೆಗಳಿರುತ್ತವೆ. ಅಂದರೆ ಒಂದು ಹೆಣ್ಣು ಜಿರಳೆ ಸುಮಾರು ೮೦೦ ಮರಿಗಳನ್ನು ಹಡೆಯುತ್ತದೆ! ಈ ಕ್ಯಾಪ್ಸೂಲ್‌ಗಳು ಒಂದು ಸಣ್ಣ ಪರ್ಸ್‌ನಂತೆ ಕಾಣುವುದಲ್ಲದೆ ಅವುಗಳಲ್ಲೂ ವ್ಯತ್ಯಾಸಗಳನ್ನು ನೋಡಬಹುದು. ಮತ್ತೊಂದು ವಿಶೇಷವೆಂದರೆ ಬ್ಲಟೆಲ್ಲಾ ಜರ್ಮೇನಿಕಾ ಎಂಬುದು ಕ್ಯಾಪ್ಸೂಲ್‌ನ್ನು ತನ್ನ ಹೊಟ್ಟೆಯ ಹಿಂಭಾಗದಲ್ಲೇ ಇಟ್ಟುಕೊಂಡು ಅವು ಮರಿಗಳಾಗುವ ತನಕ ಹೊತ್ತುಕೊಂಡೇ ಓಡಾಡುವುದು. ಮತ್ತೆ ಕೆಲವು ಸುರಕ್ಷಿತ ಸಂಧಿಗಳಲ್ಲಿ ಅಂಟುದ್ರವ ಸ್ರವಿಸಿ ಭದ್ರವಾಗಿ ಇಡುವುವು. ಮತ್ತೆ ಕೆಲವು ಆ ಕ್ಯಾಪ್ಸೂಲ್‌ಗಳು ಕಣ್ಣಿಗೆ ಸುಲಭವಾಗಿ ಗೋಚರಿಸದಂತೆ, ಸುತ್ತಲಿನ ಬಣ್ಣವನ್ನೇ ಅದರ ಮೇಲೆ ಹೊದಿಕೆ ಮಾಡುವ ರಕ್ಷಣಾ ತಂತ್ರ ಬಳಸುವುವು.

ತನ್ನ ಉದ್ದವಾದ ಮೀಸೆಯನ್ನು ಹಿಂದು, ಮುಂದು ಚಲಿಸುತ್ತಾ ಮುಂದಿನ ಹೆಜ್ಜೆ ಸುರಕ್ಷಿತವೇ ಎಂದು ಗ್ರಹಿಸಿಯೇ ನಿರ್ಧಾರ ತೆಗೆದುಕೊಳ್ಳುವುವು. ಅವುಗಳ ಚಲನೆಯಲ್ಲಿಯೂ ಒಂದು ನಿರ್ದಿಷ್ಟ ಜ್ಯಾಮಿತಿಯ ತಂತ್ರ ಇರುವುದನ್ನು ಗುರುತಿಸಬಹುದು. ನಿಮ್ಮ ಮಕ್ಕಳಿಗೆ ಆಸಕ್ತಿ ಮೂಡಿಸುವಂತಹ ಪ್ರಯೋಗವೊಂದನ್ನು ಮನೆಯಲ್ಲಿ ಮಾಡಿ ತೋರಿಸಿ: ಎರಡು ಬಣ್ಣಗಳನ್ನು ಆಯ್ದುಕೊಳ್ಳಿ. ಒಂದು ಭಾಗದ ೩ ಕಾಲಿಗೆ ಕೆಂಪು, ನೀಲಿ, ಕೆಂಪು; ಮತ್ತೊಂದು ಭಾಗದ ೩ ಕಾಲಿಗೆ ನೀಲಿ, ಕೆಂಪು, ನೀಲಿ ಬಣ್ಣಗಳನ್ನು ಬಳಿಯಿರಿ. ಈಗ ಅದನ್ನು ಒಂದು ಬಿಳಿ ಕಾಗದದ ಹಾಳೆಯ ಮೇಲೆ ಓಡಾಡುವಂತೆ ಮಾಡಿ. ಆಗ ಒಂದು ನಿರ್ದಿಷ್ಟ ತ್ರಿಕೋಣಾಕಾರದ ಚಲನಾ ತಂತ್ರ ಗುರುತಿಸಬಲ್ಲಿರಿ.



ಬ್ಲಟೆಲ್ಲಾ ಜರ್ಮೇನಿಕಾ (೧೦-೧೫ ಎಂ.ಎಂ.)

ಬ್ಲಟೆಲ್ಲಾ ಜರ್ಮೇನಿಕಾ ಅತಿ ಚಿಕ್ಕ ಗಾತ್ರ ಎಂದರೆ ಸುಮಾರು ೧೦-೧೫ ಮಿ. ಮೀ. ಉದ್ದವಿರಬಹುದು. ಪೆರಿಪ್ಲಾನೇಟಾ ಅಮೆರಿಕಾದ ಅತಿ ದೊಡ್ಡ ಗಾತ್ರದ್ದು; ಎಂದರೆ ೨೮-೪೪ ಮಿ. ಮೀ. ಜಗತ್ತಿನಲ್ಲೇ ದೊಡ್ಡದಾದ ಜಿರಳೆಯೇ ಟ್ರಿನಿಡಾಡ್ ದೈತ್ಯ. ಇದನ್ನು ದೈತ್ಯ ಗುಹೆ ಜಿರಳೆ ಅಥವಾ ದೈತ್ಯ ದಕ್ಷಿಣ ಆಫ್ರಿಕಾ ಜಿರಳೆ ಎನ್ನುತ್ತಾರೆ. ಇದು ಆಫ್ರಿಕಾ ಮೂಲವಾಸಿ. ಮಿಶ್ರಾಹಾರಿಯಾದ ಇದನ್ನು ಸಾಕುಪ್ರಾಣಿಯಾಗಿಯೂ ಸಾಕುತ್ತಾರೆ. ಇದರ ಬಗೆಗೆ ಅನೇಕ ಸಂಶೋಧನೆಗಳನ್ನು ನಡೆಸಲಾಗಿದೆ. ಇವು ೮೦-೧೩೦ mm ಉದ್ದವಿರಬಹುದು.

ಆಸ್ಟ್ರೇಲಿಯಾದಲ್ಲಿ ಮತ್ತೊಂದು ರೀತಿಯ ದೈತ್ಯ ಜಿರಳೆಗಳು ಕಾಣಬರುತ್ತವೆ. ಇವುಗಳ ಹೊಳೆಯುವ ಬಣ್ಣ, ಮುಳ್ಳುಗಳಿಂದ ಕೂಡಿದ ಕಾಲುಗಳು, ಮತ್ತಿತರ




ಪ್ರಭೇದಗಳಂತೆ ಕೆಟ್ಟ ವಾಸನೆ ಸೂಸದಿರುವುದರಿಂದ ಇವನ್ನು ಮುದ್ದಿಗಾಗಿ ಸಣ್ಣ ಪೆಟ್ಟಿಗೆಗಳಲ್ಲಿಟ್ಟು ಸಾಕುತ್ತಾರೆ. ಇವು ಭೂಮಿಯಲ್ಲಿ ಕೊರೆದು ಜೀವಿಸುವ ಜಿರಳೆಗಳು. ಒಂದು ಸಣ್ಣ ಪೆಟ್ಟಿಗೆಯಲ್ಲಿ ೪ ರಿಂದ ೫ ಅಂಗುಲಗಳ ಮರಳನ್ನು ಹಾಸಿ ಅದರಲ್ಲಿಯೇ ಕೊರೆದು ವಾಸಿಸುವಂತೆ ಮಾಡುತ್ತಾರೆ. ಮುದ್ದು ಪ್ರಾಣಿಗಳನ್ನು ಮಾರುವ ದಂಧೆಯಲ್ಲಿ ಇಂತಹ ಜಿರಳೆಗಳ ಮಾರಾಟ ಲಾಭದಾಯಕ ಎಂದು ಸಿಡ್ನಿ ವ್ಯಾಪಾರಿಗಳು ಹೇಳುತ್ತಾರೆ. ಇವುಗಳಿಗೆ ಹೆಚ್ಚಿನ ಬೇಡಿಕೆಯೂ ಇದೆಯಂತೆ.

ಅಮೆರಿಕಾದ ಪೂರ್ವ ಓಹಾಯೋದಲ್ಲಿರುವ ಕಲ್ಲಿದ್ದಲ ಗಣಿಯೊಂದರಲ್ಲಿ ನವೆಂಬರ್ ೨೦೦೧ರಲ್ಲಿ ಕಾರಿ ಈಸ್ಟರ್ ಡೇ ಎಂಬ ಭೂ ವಿಜ್ಞಾನಿ ಅತಿ ದೊಡ್ಡ ಜಿರಳೆ ಪಳೆಯುಳಿಕೆಯೊಂದನ್ನು ಗುರುತಿಸಿದ್ದಾನೆ. ಇವು ೩೫ ಕೋಟಿ ವರ್ಷಗಳ ಹಿಂದಿನದೆಂದು ಪತ್ತೆ ಹಚ್ಚಲಾಗಿದೆ. ಇವುಗಳ ಕಾಲು, ಮೀಸೆ ಹಾಗೂ ಬಾಯಿಯ ಅಂಗಗಳೆಲ್ಲವೂ ಯಥಾವತ್ತಾಗಿ ರಕ್ಷಿತವಾಗಿದ್ದು ಜಿರಳೆಗಳ ವಿಕಾಸವನ್ನು ಅರಿಯಲು ಸಹಕಾರಿ ಎಂದು ಅಭಿಪ್ರಾಯಪಡಲಾಗಿದೆ. ಇವು ಸುಮಾರು ೯೦ ಮಿ. ಮೀ. ಉದ್ದವಾಗಿದ್ದವು.

ಇರುವೆ ಗೂಡುಗಳಲ್ಲಿ ಮನೆಮಾಡಿಕೊಂಡು ಇರುವೆಗಳನ್ನು ಭಕ್ಷಿಸುವ ಜಿರಳೆಗಳಿವೆ. ಕಾಡು ಜಿರಳೆಗಳು ಮರಗಳನ್ನು ತಿನ್ನುವುವು. ಇವುಗಳ ಜೀರ್ಣಾಂಗಗಳಲ್ಲಿ ಸೆಲ್ಯೂಲೋಸನ್ನು ಜೀರ್ಣಿಸಿಕೊಳ್ಳಲು ಸಹಜೀವಿಗಳಾದ ಬ್ಯಾಕ್ಟೀರಿಯಾ ಮತ್ತು ಪ್ರೋಟೋಜೂವಾಗಳಿವೆ.

ನಿಶಾಚರಿ ಮಿಶ್ರಾಹಾರಿಯಾದ ಪೆರಿಪ್ಲಾನೇಟಾ ಅಮೆರಿಕಾನಾ ಮತ್ತು ಬ್ಲಟೆಲ್ಲಾ ಜರ್ಮೇನಿಕಾಗಳ ಬಗೆಗೆ ಅನೇಕ ಸಂಶೋಧನೆಗಳು ನಡೆದಿವೆ. ಗಂಡನ್ನು ಆಕರ್ಷಿಸಲು ಹೆಣ್ಣು ಜಿರಳೆಗಳು ವಿಶೇಷವಾದ ಫೀರಮೋನ್‌ಗಳನ್ನು ಸ್ರವಿಸುತ್ತವೆ. ಇಂತಹ ರಾಸಾಯನಿಕವನ್ನು ಗಂಡು ಜಿರಳೆಗಳಿಗೆ ಸವರಿದರೆ, ಮತ್ತೊಂದು ಗಂಡು ಇವಕ್ಕೆ ಆಕರ್ಷಣೆಗೊಳ್ಳುವುದೂ ಇದೆ. ಇವುಗಳ ಜೈವಿಕ ಗಡಿಯಾರದ ಬಗೆಗೂ ಅನೇಕ ಸಂಶೋಧನೆಗಳಾಗಿವೆ.

ಜಿರಳೆಯ ನಿರ್ಮೂಲನಕ್ಕೆ ಪ್ರಯೋಗಿಸುವ ಕೀಟನಾಶಕಗಳು ಹಲವಾರು. ಡಿ.ಡಿ.ಟಿ.ಗೆ ಇಂದಿನ ಜಿರಳೆಗಳು ನಿರೋಧ ಬೆಳೆಸಿಕೊಂಡಿವೆ. ಹಾಗಾಗಿ ಇಂದು ಬೇಗಾನ್ ಸ್ಪ್ರೇ, ಲಕ್ಷ್ಮಣ ರೇಖೆ ಮುಂತಾದ ಕೀಟನಾಶಕಗಳನ್ನು ಬಳಸಲಾಗುತ್ತಿದೆ. ಆದರೂ ಇವುಗಳ ಸಂಪೂರ್ಣ ನಿವಾರಣೆ ಸಾಧ್ಯವಾಗಿಲ್ಲ. ನಿರೋಧಕ ಶಕ್ತಿ ಬೆಳೆಸಿ

**೩೫೦ರಿಂದ ೨೮೦ ಕೋಟ್ಯಾಂತರ ವರ್ಷಗಳು ಎಂದರೆ ಕಾರ್ಬೋನಿಫೆರಸ್ ಕಾಲದಲ್ಲಿ ಅವತರಿಸಿದ ಜಿರಳೆಗಳು ಇಂದು ೩೦೦೦ ದಿಂದ ೪೦೦೦ ಪ್ರಭೇದಗಳಲ್ಲಿ ಕಾಣಬಹುದು. ಇವು ಪರಾವಲಂಬಿಗಳಲ್ಲ, ವಿಷಕಾರಕವೂ ಅಲ್ಲ. ಆದರೂ ಕಂಡಕೂಡಲೇ ಪೊರಕೆಯಿಂದ ಹೊಡೆಸಿಕೊಳ್ಳುವ, ಕ್ರಿಮಿನಾಶಕಗಳಿಗೆ ತುತ್ತಾಗುವ ಅಸಹ್ಯ ಜೀವಿಯಾಗಿದೆ.**



ಆಸ್ಟ್ರೇಲಿಯಾ ದೈತ್ಯ ಜಿರಳೆ ಭೂಮಿಯಲ್ಲಿ ಕೊರೆದು ಮಾಡಿಕೊಂಡಿರುವ ಗೂಡು. ಮರಿಗಳಿಗೆ ಉಣಿಸಲು ಎಲೆಗಳನ್ನು ಗೂಡಿಗೆ ಎಳೆದು ತಂದಿವೆ. ಶತ್ರುಗಳು (ಚಿತ್ರದಲ್ಲಿ ಒಂದು ಝರಿ ಕಾಣಬಹುದು) ಗೂಡಿಗೆ ನುಸುಳಿದರೆ ಅವನ್ನು ಹೊಡೆದೋಡಿಸುತ್ತವೆ.

ಕೊಳ್ಳುವ ಜಿರಳೆಗಳಲ್ಲಿ ಅವುಗಳ ಹೊರಕವಚ ಹಾಗೂ ಜೀರ್ಣಾಂಗದ ಒಳಪೊರೆಗಳು ಕೆಲವೊಂದು ರಾಸಾಯನಿಕಗಳಿಗೆ ರೋಧಕ ಶಕ್ತಿ ಬೆಳೆಸಿಕೊಂಡಿವೆ. ಇವನ್ನೇ ರಚನಾತ್ಮಕ ನಿರೋಧಕತೆ ಎನ್ನಬಹುದು.

ಮೊಟ್ಟೆಗಳನ್ನೇ ಅಲ್ಲದೆ ಕೆಲವೊಂದು ಪ್ರಭೇದಗಳು ಮರಿಗಳನ್ನು ನೇರವಾಗಿ ಹುಟ್ಟಿಸುತ್ತವೆ. ಟ್ರಿಕೋಬ್ಲಾಟ ಸೆರೀಸಿಯ ಎಂಬ ಜಿರಳೆ ಅಂಡ-ಜರಾಯುಜ. ಆದರೆ ಲ್ಯುಕೋಫಿಯ ಮಾದೇರ್ ಸ್ತನಿಗಳಂತೆ ಮರಿಗಳಿಗೆ ಜನ್ಮ ನೀಡುವುದಿದೆ.

ಸರ್ವವ್ಯಾಪಿಯಾದರೂ ಕೆಲವೊಂದು ಪ್ರಭೇದ ವಿನಾಶದಂಚನ್ನು ತಲುಪಿವೆ. ಐ.ಯು.ಸಿ.ಎನ್. ತಯಾರಿಸಿರುವ ಕೆಂಪು ದತ್ತಕ ಪುಸ್ತಕದಲ್ಲಿ ಮಧ್ಯ ಅಮೆರಿಕಾದ ಪೋರ್ಟೊರಿಕೋದಲ್ಲಿ ಕಾಣಬರುವಂತಹ ಟ್ಯುನಾ ಗವಿ ಜಿರಳೆಗಳನ್ನು ಪಟ್ಟಿ ಮಾಡಲಾಗಿದೆ. ಇವುಗಳ ಅಸ್ತಿತ್ವದ ಅರಿವು ಮೂಡುವುದಕ್ಕೆ ಮುಂಚೆಯೇ ಕಣ್ಮರೆಯಾಗುವ ಸಾಧ್ಯತೆ ಇರುವುದು ಶೋಚನೀಯ. ಇವುಗಳನ್ನು ಅನಿಶ್ಚಿತ ಜೀವಿಗಳ ಪಟ್ಟಿಯಲ್ಲಿ ಸೇರಿಸಲಾಗಿದೆ.

ಮೇಲಿನ ಸಂದರ್ಭಕ್ಕೆ ಅಪವಾದವಾಗುವಂತಹ ಘಟನೆ ಥೈಲಾಂಡಿನದು. ಹತ್ತು ಸೆಂ.ಮೀ. ಉದ್ದದ ಬುಸುಗುಟ್ಟುವ ದೈತ್ಯ ಜಿರಳೆಗಳು ಇಲ್ಲಿ ಸಾಕುಪ್ರಾಣಿಯಾಗಿ ಬೆಳೆಸುವುದು ಸಾಮಾನ್ಯ. ಆದರೆ ಈಚೆಗೆ ಇದನ್ನು ಮುದ್ದಿಗಾಗಿ ಸಾಕುವುದನ್ನು ನಿಷೇಧಿಸಲಾಗಿದೆ. ಇವುಗಳ ಸಂತಾನಾಭಿವೃದ್ಧಿಯಲ್ಲಿ ಏರಿಕೆ ಹಾಗೂ ರೋಗ ಹರಡುವ ಮಾಧ್ಯಮಗಳಾಗುವ ಸಾಧ್ಯತೆ ಕಂಡುಬಂದಿದ್ದರಿಂದ ಆರೋಗ್ಯ ಇಲಾಖೆ ಈ ಕ್ರಮ ಕೈಗೊಂಡಿದೆ. ಅಲ್ಲದೆ ಈ ಜಿರಳೆಗಳ ಒಡೆಯರನ್ನು ತೃಪ್ತಿಪಡಿಸುವುದಕ್ಕಾಗಿ ಬೌದ್ಧರು ಸಾಂಪ್ರದಾಯಿಕ ವಿಧಿ ವಿಧಾನಗಳಿಂದ ೧೦೦೦೦ ಜಿರಳೆಗಳನ್ನು ಹೋಮ ಮಾಡಲು ನಿರ್ಧರಿಸಿದ್ದಾರೆ ಎಂದು ಒಂದು ಪತ್ರಿಕಾ ಪ್ರಕಟಣೆ ತಿಳಿಸಿತ್ತು.

ಅಮೆರಿಕಾದ ಥೊರಾಸಿಕ್ ಸೊಸೈಟಿಯು ಸಿಯಾಟಲ್ ನಗರದಲ್ಲಿ ಏರ್ಪಡಿಸಿದ್ದ ಅಂತಾರಾಷ್ಟ್ರೀಯ ಸಮ್ಮೇಳನದಲ್ಲಿ ಜಿರಳೆ ಮತ್ತು ಅವುಗಳಿಗಾಗಿ ಬಳಸುವ ಕೀಟನಾಶಕಗಳು ಅನೇಕ ಅಲರ್ಜಿ ಮತ್ತು ಆಸ್ತಮಾ ರೋಗಗಳಿಗೆ ನಾಂದಿ ಎಂದು ಚರ್ಚಿಸಲಾಯಿತು. ಮಗುವಿನ ಮೊದಲ ವರ್ಷದಲ್ಲೇ ಅದು ಈ ಕೀಟನಾಶಕ ಅಥವಾ ಜಿರಳೆಗಳಿಗೆ ಮೈ ಒಡ್ಡಿದ್ದರೆ ಅಂತಹ ಮಗು ಮುಂದೆ ಆಸ್ತಮಾ ರೋಗಕ್ಕೆ ಬಲಿಯಾಗುವ ಸಾಧ್ಯತೆ ಹೆಚ್ಚಿರುವುದೆಂದೂ ಲಾಸ್ ಎಂಜಲೀಸ್‌ನ ಕ್ಯಾಲಿಫೋರ್ನಿಯಾ ವಿಶ್ವವಿದ್ಯಾಲಯದ ಡಾ|| ಫ್ರಾಂಕ್ ಗಿಲ್ಲಿಲ್ಯಾಂಡ್ ಅಭಿಪ್ರಾಯ ಪಡುತ್ತಾರೆ.

ಒಂದೆಡೆ ಜಿರಳೆಗೆ ರೋಗಪೀಡಕ ಪಟ್ಟ ಕಟ್ಟಿದರೆ ಮಧ್ಯ ಅಮೆರಿಕಾದ ಬುಡಕಟ್ಟು ಜನಾಂಗದವರು ತಮ್ಮ ನಾಟಿ ಔಷಧಗಳಲ್ಲಿ ಕೀಟಗಳನ್ನು ಬಳಸುತ್ತಾರೆಂದು ಬ್ರೆಸಿಲ್‌ನ ಫೈರಾ ಡಿ ಸಾಂತಾನಾ ಸ್ಟೇಟ್ ಯೂನಿವರ್ಸಿಟಿ ವರದಿ ಮಾಡಿದೆ. ಅಲ್ಲಿಯ ೪೨ ಕೀಟಗಳ ಪಟ್ಟಿಯಲ್ಲಿ ಜಿರಳೆಗಳೂ ಸೇರಿವೆ. ಪೆರಿಪ್ಲಾನೇಟಾ ಅಮೆರಿಕಾನಾ, ಪೀಬಾ ಜಿರಳೆ, ಕಪ್ಪು ಜಿರಳೆ, ಜಿರಳೆಯ ಮರಿಗಳ ಕಷಾಯ, ಗುಳಿಗೆಗಳು, ಆಸ್ತಮಾ, ಅತಿಸಾರ, ಕ್ಯಾನ್ಸರ್, ಮೂರ್ಛೆ, ಕಿವಿನೋವು, ಕರುಳಿನ ಬೇನೆಗೆ ಸಿದ್ಧೌಷಧ ಎಂದು ವಿವರಿಸಲಾಗಿದೆ. ಜೀವಂತ ಕರಿ ಜಿರಳೆಯೊಂದನ್ನು ಬೆಂಕಿಪೆಟ್ಟಿಗೆಯಲ್ಲಿ ಹಾಕಿ ಆಸ್ತಮಾದಿಂದ ನರಳುತ್ತಿರುವ ಮಕ್ಕಳ ಮೂಗಿನ ಬಳಿ ಸ್ವಲ್ಪವೇ ತೆರೆದು ಮೂಸಿಸಿದಲ್ಲಿ ಹಾಗೂ ದಿನಕ್ಕೆ ಮೂರು ಬಾರಿ ಈ ರೀತಿ ಮಾಡುವುದರಿಂದ ಆಸ್ತಮಾ ಉಪಶಮನ ಸಾಧ್ಯ ಎಂದು ನಂಬಲಾಗಿದೆ.

ಹೀಗೆ ಯಃಕಶ್ಚಿತ್ ಜಿರಳೆಗಳು ಮಾನವನ ಸಾಮಾಜಿಕ, ವೈಜ್ಞಾನಿಕ, ಆರ್ಥಿಕ ಹಿನ್ನೆಲೆಯಲ್ಲಿ ಏನೆಲ್ಲಾ ತರಳೆ ಮಾಡುತ್ತಿರುವುದನ್ನು ನೋಡಿದರೆ ಜೀವ ವೈವಿಧ್ಯದ ನಿಗೂಢತೆಯ ಅರಿವಾಗಬಹುದು.

**ಡಾ|| ಎನ್. ಎಸ್. ಲೀಲಾ**
೧೦೫, ವೆಸ್ಟ್ ಪಾರ್ಕ್ ಅಪಾರ್ಟ್‌ಮೆಂಟ್ ೫, ೧೪-ಎ ಕ್ರಾಸ್, ಮಲ್ಲೇಶ್ವರಂ, ಬೆಂಗಳೂರು - ೩

### ಜಿರಳೆ ನಿಯಂತ್ರಿಸಲು ಜೇಡದ ಕೃಷಿ

ಚೆನ್ನೈನ ಸೆಂಟರ್ ಫಾರ್ ಇಂಡಿಯನ್ ನಾಲೆಡ್ಜ್ ಸಿಸ್ಟಮ್ (ಭಾರತೀಯ ಜ್ಞಾನ ಕೇಂದ್ರ)ನಲ್ಲಿ ಸಂಶೋಧನೆ ಮಾಡುತ್ತಿರುವ ಡಾ|| ಕೆ. ವಿಜಯಲಕ್ಷ್ಮಿ ಮನೆಯ ಜಿರಳೆಗಳನ್ನು ನಿಯಂತ್ರಿಸಲು ವಿಶೇಷವಾದ ಜೇಡಗಳನ್ನು ಕೃಷಿ ಮಾಡಬಹುದೆಂದು ಪ್ರಾಯೋಗಿಕವಾಗಿ ಅಳವಡಿಸಿ ತೋರಿಸಿದ್ದಾರೆ. ಹಾನಿಕಾರಕ ಕೀಟನಾಶಕಗಳನ್ನು ಬಳಸದೆ ದೈತ್ಯ ಏಡಿ ಜೇಡಗಳನ್ನು ಬೆಳೆಸಿ, ಚೆನ್ನೈನಲ್ಲಿನ ಕೆಲವು ಮನೆಗಳಲ್ಲಿ ಅವುಗಳನ್ನು ಬಿಟ್ಟು ಜಿರಳೆ ನಿಯಂತ್ರಣ ಮಾಡಿಸಿದ್ದಾರೆ. ಅನೇಕ ಮಹಿಳೆಯರು ಈ ಭಾರಿ ಗಾತ್ರದ, ಕಾಲುಗಳನ್ನು ಏಡಿಗಳಂತೆಯೇ ಅಡ್ಡಲಾಗಿ ಹಾಕಿ ನಡೆಯುವ, ಜೇಡಗಳೊಂದಿಗೆ ಸ್ನೇಹಭಾವ ಬೆಳೆಸಿಕೊಂಡು ಜಿರಳೆಯ ಬೇಟೆಗೆ ಅವುಗಳನ್ನು ಸಾಕಿಕೊಂಡಿದ್ದಾರೆ. ಈ ಜೇಡಗಳ ಮತ್ತೊಂದು ವಿಶೇಷವೆಂದರೆ ಅವು ಬಲೆಗಳನ್ನು ಕಟ್ಟುವುದಿಲ್ಲ. ಜಿರಳೆಗಳನ್ನು ಅಟ್ಟಿಸಿಕೊಂಡು ಹೋಗಿ ಬೇಟೆಯಾಡುತ್ತವೆ ಎಂದು ಡಾ|| ವಿಜಯಲಕ್ಷ್ಮಿ ತಿಳಿಸುತ್ತಾರೆ. ಅಲ್ಲದೆ ಜೇಡಗಳ ಕೃಷಿ ವಿಧಾನ, ಅದಕ್ಕಾಗಿ ಜಿರಳೆಗಳನ್ನೂ ಕೃಷಿ ಮಾಡುವ ವಿಧಾನಗಳನ್ನೂ ವಿವರಿಸಿದ್ದಾರೆ. ಈ ವಿಷಯ ಕುರಿತ ಒಂದು ಪುಸ್ತಕವನ್ನೂ ಪ್ರಕಟಿಸಿದ್ದಾರೆ.




**ಪುಸ್ತಕ ಬಿಡುಗಡೆ**

ಡಾ|| ಪದ್ಮಿನಿ ಪ್ರಸಾದ್ ಅವರ 'ಲೈಂಗಿಕ ಸಾಮರಸ್ಯ' ಮತ್ತು ಡಾ|| ಎಚ್. ಗಿರಿಜಮ್ಮ ಅವರ 'ಮಿತ ಸಂತಾನಕ್ಕೆ ಸರಳ ಮಾರ್ಗಗಳು' ಪುಸ್ತಕಗಳನ್ನು ಶಾಸಕ ಶ್ರೀ ನೆ. ಲ. ನರೇಂದ್ರಬಾಬು ಅವರು ವೈದ್ಯಸಾಹಿತ್ಯ ಪರಿಷತ್ತಿನ ಬೆಂಗಳೂರು ಶಾಖೆ ನಡೆಸಿದ ಸಮಾರಂಭದಲ್ಲಿ ಬಿಡುಗಡೆ ಮಾಡಿದರು.





**ಚಿಟ್ಟೆಸ್ವರ** (ಲಲಿತ ಪ್ರಬಂಧಗಳು)
ಭಾರತೀ ಕಾಸರಗೋಡು
**ಪುಟ : ೧೨೨** **ಬೆಲೆ : ರೂ ೭೦**
**ಅಂಜನಾ ಪ್ರಕಾಶನ,** ಎಫ್ ೭೩೬, ೧೪ನೇ ಕ್ರಾಸ್, ಬಿ.ಇ.ಎಲ್. ಲೇಔಟ್, ಭಾರತೀನಗರ, ಮಾಗಡಿ ರಸ್ತೆ, ಬೆಂಗಳೂರು

ಓದುತ್ತಾ ಹೋದಂತೆ ನಮಗರಿವಿಲ್ಲದಂತೆ ಆತ್ಮೀಯ ಭಾವನೆಗಳನ್ನು ಮೂಡಿಸುತ್ತ ಮೋಡಿ ಮಾಡುತ್ತ ತಮ್ಮದೇ ಭಾವನಾ ವಲಯಕ್ಕೆ ನಮ್ಮನ್ನೂ ಸೆಳೆಯುವ ಶಕ್ತಿಯುತವಾದ ಲಲಿತ ಪ್ರಬಂಧಗಳು. ನಮ್ಮ ಮಧ್ಯೆಯೇ ಇದ್ದರೂ ನಾವು ಗಮನಿಸದೆ ಇದ್ದಂಥ ನೂರಾರು ಅಂಶಗಳು ಮನಸ್ಸನ್ನು ಪ್ರಫುಲ್ಲಗೊಳಿಸುವ ತಿಳಿಹಾಸ್ಯದ ಕಾರಂಜಿಗಳು. ಘಟನೆಗಳ ನಿರೂಪಣೆಯಿಂದ ಹೊರಹೊಮ್ಮಿದ ಗಂಭೀರ ಚಿಂತನೆಗಳು ಇವೆಲ್ಲ ಸೇರಿ ಒಂದು ಪ್ರಬುದ್ಧ ಬರವಣಿಗೆಯನ್ನು ನಾವಿಲ್ಲಿ ಓದಬಹುದು. ಎಲ್ಲರಿಗೂ ಸುಲಭವಾಗಿ ದಕ್ಕದ ಭಾಷಾಶೈಲಿಯಂತೂ ಭಾರತೀಯವರ ಬೆನ್ನು ಹತ್ತಿ ಬಂದಂತಿದ್ದು ಒಂದೊಂದು ಲೇಖನ ಓದಿದಾಗಲೂ ಒಂದೊಂದು ಹೂವನ್ನು ಆಘ್ರಾಣಿಸಿದಷ್ಟು ಸಂತೋಷ-ಸಂಭ್ರಮ! ನೋಡುವ ಕಣ್ಣು ಮತ್ತು ತಿಳಿಯುವ ಆಸಕ್ತರಿಗೆ ಇಲ್ಲಿ ಆಸ್ವಾದಿಸಲು ಅಸಂಖ್ಯಾತ ವಿಷಯಗಳಿವೆ; ಸ್ವಾರಸ್ಯಕರವಾಗಿವೆ.



**ರಂಗಸುನೇರಿ** (ಆಯ್ದ ಲೇಖನಗಳು)
ಮಲ್ಲಿಕಾರ್ಜುನ ಕಡಕೋಳ
**ಪುಟ : ೧೫೪** **ಬೆಲೆ : ರೂ ೧೦೦**
**ಮಂಜುಶ್ರೀ ಪ್ರಕಾಶನ,** ಶ್ರೀ ಸರ್ವಮಂಗಳ, ೩೧೮೭, ೧೦ನೇ ಮುಖ್ಯರಸ್ತೆ, ಎಂ. ಸಿ. ಕಾಲೋನಿ, ಬಿ. ಬ್ಲಾಕ್, ದಾವಣಗೆರೆ - ೪

ಬಣ್ಣದ ಬದುಕಿನಲ್ಲಿ ಸಂತೋಷ ಕಾಣುತ್ತ ರಂಗಭೂಮಿಗಾಗಿ ಜೀವ ಸವೆಸಿ ಕಲಾಸೇವೆಗೈದು ಹೆಸರು ಮಾಡಿದ ಅನೇಕ ರಂಗ ಪ್ರತಿಭೆಗಳ ಪರಿಚಯ ಇಲ್ಲಿದೆ. ಝಗಮಗಿಸುವ ಕಣ್ಣು ಕೋರೈಸುವ ಬೆಳಕಿನಲ್ಲಿ ರಂಗಮಂದಿರಗಳಲ್ಲಿ ನಾಟಕಗಳಲ್ಲಿ ಅಭಿನಯಿಸುತ್ತ, ಪಾತ್ರಗಳಿಗೆ ಜೀವ ತುಂಬುತ್ತ, ಪ್ರೇಕ್ಷಕರಲ್ಲಿ ಅಳು, ನಗು, ಸಂತೋಷ, ಸಂಭ್ರಮಗಳ ಅಲೆಗಳನ್ನೇ ನಟರು ಎಬ್ಬಿಸುತ್ತಾರೆ ನಿಜ. ಆದರೆ ನಿಜ ಜೀವನದಲ್ಲಿ ಅವರೆಷ್ಟು ಸುಖಿಗಳೆಂಬುದನ್ನು ಈ ಲೇಖನಗಳು ತಿಳಿಸುತ್ತವೆ. ಸಿನಿಮಾ ಪೂರ್ವದ ರಂಗಭೂಮಿಯ ಪರಿಚಯವಿಲ್ಲದ ಇಂದಿನ ಯುವಜನತೆಗೆ ಮತ್ತು ರಂಗ ಕಲಾಸಕ್ತರಿಗೆ ಸಂದುಹೋದ ವೈಭವದ ಒಂದು ಪರಿಚಯ ಸಿಗುತ್ತದೆ. ಚಿತ್ರರಂಗಕ್ಕೆ ದಕ್ಕಿದ ಜನಪ್ರಿಯತೆ ಮತ್ತು ರಂಗವೇದಿಕೆ ದೃಶ್ಯಗಳಿಗಿರುವ ಪರಿಮಿತಿಗಳಿಂದಾಗಿ ಹಿಂದುಳಿಯುತ್ತಿರುವ ರಂಗ ಪ್ರಯೋಗಗಳ ಇಂದಿನ ದಿನಗಳಿಗೆ ಅವಶ್ಯವಾದ ಪುಸ್ತಕ.



**ಕನಕಾಂಬರಿ** (ಕವನ ಸಂಕಲನ)
ಮೂಡ್ನಾಕೂಡು ಚಿನ್ನಸ್ವಾಮಿ
**ಪುಟ : ೭೨** **ಬೆಲೆ : ರೂ ೪೦**
**ಅಭಿರುಚಿ ಪ್ರಕಾಶನ,** ನಂ. ೪, ನಗರ ರಸ್ತೆ ಸಾರಿಗೆ ಸಂಸ್ಥೆ ಕಟ್ಟಡ, ಕೆ. ಆರ್. ವೃತ್ತ, ಮೈಸೂರು - ೧

ಹದಿಹರೆಯದ ವಯಸ್ಸು ಬಣ್ಣಬಣ್ಣದ ಕನಸುಗಳನ್ನು ಹೊಂದಿರುವಂಥದು. ಜಗತ್ತೇ ಕಾಮನಬಿಲ್ಲಿನ ಏಳು ವರ್ಣಗಳಾಗಿ ಗೋಚರಿಸುವ ಮತ್ತು ಅಂಕೆಯಿಲ್ಲದ ಮನಸ್ಸೊಂದು ಕಲ್ಪನಾಲೋಕದಲ್ಲಿ ವಿಹರಿಸುತ್ತ ಪ್ರೇಮ ಗೀತೆಗಳನ್ನು ಗೀಚುತ್ತ-ಹರಿಯುತ್ತ-ಗುನುಗುತ್ತ ಇರುವಂಥ ಕಾಲ. ಈ ಹಿಂದೆ ಸಾಕಷ್ಟು ದಲಿತಪರ ಬಂಡಾಯ ಕಾವ್ಯಗಳನ್ನು ಬರೆದು ಹೆಜ್ಜೆ ಮೂಡಿಸಿದ ಚಿನ್ನಸ್ವಾಮಿ ಹೊಸ ಪ್ರಯೋಗವೆಂಬಂತೆ ಪ್ರೇಮ ಕವನಗಳ ರಚನೆಗೆ ಕೈಹಾಕಿದ್ದಾರೆ. ಸಂಕಲನದ ಹೆಚ್ಚಿನ ಎಲ್ಲ ಪದ್ಯಗಳೂ ಪ್ರೀತಿ-ಪ್ರೇಮಗಳ ಸುತ್ತ ಹೆಣೆಯಲಾಗಿದ್ದು ಒಟ್ಟು ೨೬ ಕವನಗಳಿವೆ. ಹೇರಳವಾಗಿ ಉಪಮೇಯ-ಉಪಮಾನವನ್ನು ಬಳಸಿಕೊಳ್ಳುತ್ತ ನಿಸರ್ಗವನ್ನು ವರ್ಣಿಸಿದ ಕೆಲ ಕವಿತೆಗಳೂ ಇಲ್ಲಿವೆ. ಕಾವ್ಯ ಸೃಷ್ಟಿಸುವ ಅನುಭವವೂ ವಿಸ್ಮಯವಾಗಿದೆ.



**ಉಭಯವಾಣಿ** (ಅನುವಾದಿತ ಕವನಗಳು)
ಸಿ. ನಾಗಣ್ಣ
**ಪುಟ : ೮೦** **ಬೆಲೆ : ರೂ ೪೦**
**ಅಭಿರುಚಿ ಪ್ರಕಾಶನ,** ನಂ. ೪, ೨ನೇ ಮಹಡಿ, ನಗರ ಸಾರಿಗೆ ಸಂಸ್ಥೆ ಕಟ್ಟಡ, ಕೆ. ಆರ್. ವೃತ್ತ, ಮೈಸೂರು - ೧

ಪ್ರಮುಖವಾಗಿ ಇಂಗ್ಲಿಷ್ ಭಾಷೆಯಿಂದ ಮತ್ತು ಭಾರತೀಯ ಭಾಷೆಗಳಿಂದ ಅನುವಾದಿಸಲಾದ ಕವನಗಳು. ''ಆ ದನಿ'' ಎಂಬ ಮೊದಲ ಭಾಗದಲ್ಲಿ ಪಾಶ್ಚಾತ್ಯ ಹಾಗೂ ''ಈ ದನಿ'' ವಿಭಾಗದಲ್ಲಿ ದೇಶೀಯವಾದ ಗುರುತುಗಳು ಸ್ಪಷ್ಟವಾಗಿ ಕಂಡುಬರುತ್ತಿವೆ. ಕವನಗಳ ಸ್ವರೂಪ ನಿರ್ಗತಿಕ ಜನಾಂಗ ಮತ್ತು ಕ್ರೌರ್ಯಕ್ಕೆ ಬಲಿಯಾದ ಜನತೆಯ ಪರವಾಗಿದೆ. ಜಗತ್ತಿನ ಯಾವ ಮೂಲೆಯಲ್ಲೇ ಕುಳಿತು ಸಾಹಿತಿ ಕವಿಗಳು ಸಾಹಿತ್ಯರಚನೆಗೈದರೂ ಎಲ್ಲೆಡೆ ಅದರ ಧ್ವನಿ ಕಳಕಳಿ ಒಂದೇ ಆಗಿರುತ್ತದೆಂಬ ಅಂಶವನ್ನು ಅನುವಾದಿತ ಸಾಹಿತ್ಯದಲ್ಲಿ ಧಾರಾಳವಾಗಿ ಕಾಣಬಹುದು. ಮಿಡಿಯುವ ಮನಸ್ಸು ಅಲ್ಲಿ ಮಾನವತೆ ರೂಪಧಾರಣೆ ಮಾಡಿರುತ್ತದೆ. ಎಲ್ಲ ಕಡೆಯೂ ಜನಪರ ನೀತಿ ಧೋರಣೆಗಳು ಒಂದೇ ಆಗಿರುತ್ತವೆ ಎಂಬುದು ಜಗತ್ತಿನ ಸಾಹಿತ್ಯ ತೋರಿಸುತ್ತಿದೆ. ಕನ್ನಡದ ಜಾಯಮಾನಕ್ಕೆ ಒಗ್ಗುವಂತಹ ಅನುವಾದ.



**ನೆರಳು ಚೆಲ್ಲಿದ ಮಾಮರ** (ವ್ಯಕ್ತಿ ಚಿತ್ರಣ)
ಸಂ. ಶಿವರಾಂ ಪೈಲೂರು
**ಪುಟ : ೧೨೪**
ಪೈಲೂರು ಮನೆ, ವ್ಯಾಸರಾವ್ ರಸ್ತೆ, ಮಂಗಳೂರು - ೫೭೫ ೦೦೩

ಆಪ್ತವಲಯದಲ್ಲಿ ''ಮಂಗಳೂರು ಅಜ್ಜ'' ಎಂದೇ ಪ್ರಸಿದ್ಧರಾದ, ತಮ್ಮ ಜೀವಿತಾವಧಿಯಲ್ಲಿ ದಕ್ಷಿಣ ಕನ್ನಡಿಗರಿಗೆ ಅನೇಕ ಸದಭಿರುಚಿಯ ಪಾಠ ಕಲಿಸಿದ ಪೈಲೂರು ಲಕ್ಷ್ಮೀನಾರಾಯಣ ರಾವ್ ಅವರ ವ್ಯಕ್ತಿತ್ವದ ಪರಿಚಯ ನೀಡುವ ಕೃತಿ. ಜೇನು ವ್ಯವಸಾಯ, ದ.ಕ. ಕೃಷಿಕರ ಸಹಕಾರಿ ಮಾರಾಟ ಸಂಘದ ಸ್ಥಾಪನೆ, ಅಕ್ವೇರಿಯಂ ಮೀನು ಸಾಕಣೆ, ಅಂಚೆ ಚೀಟಿ ಸಂಗ್ರಹ ಇಂತಹ ಹಲವಾರು ಹವ್ಯಾಸಗಳನ್ನು ರೂಢಿಸಿಕೊಂಡಿದ್ದ ಇವರನ್ನು ಅರಿಯದ ಅಡಿಕೆ ಬೆಳೆಗಾರರೇ ಇಲ್ಲವೆಂದರೂ ಅತಿಶಯದ ಮಾತಲ್ಲ. ಕಷ್ಟದಲ್ಲಿದ್ದವರಿಗೆ ಬಡವರಿಗೆ ಸದಾ ನೆರವಿನ ಹಸ್ತ ಚಾಚುತ್ತಿದ್ದ ಓರ್ವ ಸಹೃದಯಿ ಅವರಾಗಿದ್ದರು. ಪೈಲೂರರನ್ನು ಬಲ್ಲ ಅನೇಕ ಗೆಳೆಯರು, ಹಿತೈಷಿಗಳು ಹಾಗೂ ಅವರಿಂದ ಉಪಕೃತರಾದ ಕೆಲವರಿಂದ ವ್ಯಕ್ತವಾದ ಇಲ್ಲಿನ ಅಭಿಪ್ರಾಯಗಳನ್ನು ಗಮನಿಸಿದರೆ ಅವರ ಹಿರಿಯ ವ್ಯಕ್ತಿತ್ವದ ಪರಿಚಯವಾದೀತು. ಇತ್ತೀಚೆಗೆ ನಿಧನರಾದ ಅವರ ನೆನಪಿಗೆ ಈ ಪುಸ್ತಕ.



**ಭೂಮಿಗಾಥೆ**
ಡಾ|| ವಸುಂಧರಾ ಭೂಪತಿ
**ಪುಟ : ೧೭೨** **ಬೆಲೆ : ರೂ ೬೦**
**ಕಾಮಧೇನು,** ೫/೧, ನಾಗಪ್ಪ ರಸ್ತೆ, ಶೇಷಾದ್ರಿಪುರ, ಬೆಂಗಳೂರು - ೫೬೦ ೦೨೦

''ಕ್ರೂರ ನಕ್ರಾಕುಲದೊಳಿಡಿದಿರ್ದ ಪೆರ್ಮಡು ಗಂಭೀರ ಜಲಯುತ''ವಾಗಿರುವಂತೆ ಮೇಲ್ನೋಟಕ್ಕೆ ಸಭ್ಯ ನಾಗರಿಕ ಎಂದೆನ್ನಿಸಿಕೊಂಡ ಸಮಾಜದಲ್ಲಿ ಆಳ ಕೆದಕಿದಂತೆ ಊಹಿಸಲೂ ಸಾಧ್ಯವಾಗದಷ್ಟು ದುಷ್ಟತನವಿರುತ್ತದೆ. ಮನೆತನ, ಅಂತಸ್ತು, ಪ್ರತಿಷ್ಠೆ, ಸ್ಥಾನಮಾನ ಉಳಿಸಿಕೊಳ್ಳುವ ನೆಪದಲ್ಲಿ ಜನರು ತಮ್ಮನ್ನು ತಾವೇ ವಂಚಿಸುತ್ತ ಎಂಥ ಸಮಸ್ಯೆ ಗಳಿದ್ದರೂ ಎಲ್ಲ ಸರಿಯಾಗಿರುವಂತೆ ನಟಿಸುತ್ತಾರೆ. ಈ ಭೂಮಿಯಷ್ಟೇ ತಾಳ್ಮೆಯಿರುವ ಹೆಣ್ಣುಮಕ್ಕಳು ಕೂಡಾ ಏನೇ ಆದರೂ ತಮ್ಮ ದುಃಖ ನೋವು ನುಂಗಿಕೊಳ್ಳುತ್ತ ಸ್ಥಾಪಿತ ಮೌಲ್ಯಗಳ ಸುಳಿಯಲ್ಲಿ ಒದ್ದಾಡುವುದನ್ನು ಇಲ್ಲಿನ ಕೆಲವು ಸತ್ಯಕ್ಕೆ ಸಮೀಪವಾದ ಘಟನೆಗಳು ತಿಳಿಸುತ್ತವೆ. ನಿಜ ಘಟನೆಗಳಿಗೆ ಒಂದಷ್ಟು ಮೆರುಗು ನೀಡಿದ ಇಂಥ ಕಥನಗಳು ನಿಮ್ಮ ತಾಯಿ, ತಂಗಿ, ಪತ್ನಿ ಅಥವಾ ಬಂಧುಗಳದ್ದಾಗಿರಬಹುದು. ತಮ್ಮ ಸಂಸಾರದ ಸುಖದುಃಖಗಳನ್ನು ಇತರರು ಹೇಳಿಕೊಂಡಾಗ ಒಬ್ಬ ವೈದ್ಯೆಯಾಗಿ ವಸುಂಧರಾ ಭೂಪತಿ ಇವುಗಳನ್ನು ಬರೆದಿದ್ದಾರೆ.

\- ಇಂದಿರಾಕುಮಾರಿ

**ನ**ಮ್ಮ ಸಮಾಜದಲ್ಲಿ ಕಂಡುಬಂದಿರುವ ಅನ್ಯಾಯಗಳ ಬಗ್ಗೆ ಈಗ ನಮ್ಮಲ್ಲಿ ಪ್ರಕಟವಾಗುತ್ತಿರುವ ವೈಚಾರಿಕ ಬರಹಗಳಲ್ಲಿ ಶೋಷಿತರ ಪರವಾದ ಕಳಕಳಿ ಇರುತ್ತದೆ, ಶೋಷಕರ ದುಷ್ಟತನದ ಬಗ್ಗೆ ಆಕ್ರೋಶ ಇರುತ್ತದೆ. ಆದರೆ ಇಂತಹ ಬರಹಗಳಿಂದ ನಮಗೆ ಈ ಅನ್ಯಾಯಗಳನ್ನು ಹೋಗಲಾಡಿಸಲು ಯಾವ ರೀತಿಯ ವ್ಯವಸ್ಥಿತ ಕಾರ್ಯಕ್ರಮಗಳನ್ನು ಕೈಗೊಳ್ಳಬೇಕೆಂಬುದರ ಬಗ್ಗೆ ಹೆಚ್ಚಿನ ಅರಿವು ಉಂಟಾಗುವುದಿಲ್ಲ. ಇದರಿಂದಾಗಿ ಇಂತಹ ಬರಹಗಳಿಂದ ನಮ್ಮಲ್ಲಿ ಹತಾಶೆ ಮತ್ತು ಸಿನಿಕತೆಗಳು ಮಾತ್ರ ಬೆಳೆಯುತ್ತವೆ.

ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಅಭಿವೃದ್ಧಿ ಅಧ್ಯಯನ ವಿಭಾಗದಲ್ಲಿ ಪ್ರವಾಚಕರಾಗಿರುವ ಡಾ॥ ಟಿ. ಆರ್. ಚಂದ್ರಶೇಖರ ಅವರ 'ಕರ್ನಾಟಕ : ಅಭಿವೃದ್ಧಿಯ ಸಾಮಾಜಿಕ ನೆಲೆಗಳು' ಎಂಬ ಈ ಲೇಖನ ಸಂಗ್ರಹದಲ್ಲಿ, ನಮ್ಮ ರಾಜ್ಯದಲ್ಲಿ ಇದುವರೆಗೆ ನಡೆದಿರುವ ಅಭಿವೃದ್ಧಿ ಕಾರ್ಯಕ್ರಮಗಳಿಂದಾಗಿ ಆಗಿರುವ ಸಾಫಲ್ಯ ಮತ್ತು ವೈಫಲ್ಯಗಳನ್ನು ಶಾಸ್ತ್ರೀಯವಾದ ವಿಶ್ಲೇಷಣೆಗಳ ಮೂಲಕ ಕರಾರುವಾಕ್ಕಾಗಿ ಗುರುತಿಸಲಾಗಿದೆ. ಈ ವಿಶ್ಲೇಷಣೆಗಳು ನಮ್ಮಲ್ಲಿ ಆಗಿರುವ ಅನ್ಯಾಯಗಳನ್ನು ಸರಿಪಡಿಸಲು ತೆಗೆದುಕೊಳ್ಳಬೇಕಾದ ಕ್ರಮಗಳ ಬಗ್ಗೆ ಹೊಳಹುಗಳನ್ನು ಸೂಚಿಸುತ್ತವೆ. ಅಂದರೆ ಇಲ್ಲಿನ ಬರಹಗಳು ಪ್ರಜಾತಂತ್ರ ವ್ಯವಸ್ಥೆಯಲ್ಲಿ ಇರುವ ಅವಕಾಶಗಳ ಮೂಲಕ ಅನ್ಯಾಯಗಳನ್ನು ಸರಿಪಡಿಸಬಹುದೆಂಬ ವಿಶ್ವಾಸವನ್ನು ಓದುಗರಲ್ಲಿ ಮೂಡಿಸುತ್ತವೆ.

ಇಲ್ಲಿ ಚಂದ್ರಶೇಖರ ಅವರು ನಮ್ಮ ರಾಜ್ಯದ ಅಭಿವೃದ್ಧಿಯ ಮೌಲ್ಯಮಾಪನಕ್ಕೆ ಉಪಯೋಗಿಸಿರುವುದು ಪ್ರಸಿದ್ಧ ಅರ್ಥಶಾಸ್ತ್ರಜ್ಞರಾದ ಅಮರ್ತ್ಯ ಸೇನ್ ಅವರು ಪ್ರತಿಪಾದಿಸಿರುವ ಮಾನವ ಅಭಿವೃದ್ಧಿ ಪ್ರಣಾಳಿಕೆ. ''ಮಾನವನ ಬದುಕು ಉತ್ತಮವಾಗಿದೆಯೋ ಇಲ್ಲವೋ ಎಂಬುದನ್ನು ಗುರುತಿಸಲು ವರಮಾನದ ಜೊತೆಗೆ ಜನರ ಆರೋಗ್ಯ, ಅವರ ಆಯಸ್ಸು, ಶಿಶು ಮರಣ ಪ್ರಮಾಣ, ಸಾಕ್ಷರತೆ ಪ್ರಮಾಣ, ಶಿಕ್ಷಣದ ಮಟ್ಟ, ಮುಂತಾದ ಸೂಚ್ಯಂಕಗಳನ್ನು ಗಣನೆ ಮಾಡಬೇಕು'' ಎನ್ನುತ್ತಾರೆ ಅಮರ್ತ್ಯ ಸೇನ್... ಮಾನವ ಅಭಿವೃದ್ಧಿ ಪ್ರಣಾಳಿಕೆಯು ಲಿಂಗಸಂವೇದಿ ಪರಿಭಾವನೆಯಾಗಿದೆ. ಸಾಕ್ಷರತೆ - ಶಿಕ್ಷಣ, ಆಯಸ್ಸು, ಮರಣ ಪ್ರಮಾಣ ಮುಂತಾದವುಗಳ ಸ್ವರೂಪವನ್ನು ಲಿಂಗ ಸಂಬಂಧಿ ನೆಲೆಯಲ್ಲಿ ಮಾನವ ಅಭಿವೃದ್ಧಿ ಮೀಮಾಂಸೆಯು ಮಾಪನ ಮಾಡುತ್ತದೆ ಎಂದು ಚಂದ್ರಶೇಖರ ಹೇಳುತ್ತಾರೆ.

ಮೇಲೆ ಹೇಳಿರುವ ಅಮರ್ತ್ಯ ಸೇನ್ ಅವರ ವಿಚಾರಗಳ ಹಿನ್ನೆಲೆಯಲ್ಲಿ ನಮ್ಮ ರಾಜ್ಯದ ಅಭಿವೃದ್ಧಿಯ ಸ್ಥಿತಿಗತಿಗಳನ್ನು ಪರಿಣಾಮಕಾರಿಯಾಗಿ ವಿಶ್ಲೇಷಿಸಿರುವ ಲೇಖನಗಳು ಇವು. 'ಅಭಿವೃದ್ಧಿಯ ಸಾಮಾಜಿಕ ನೆಲೆಗಳು' ಎಂಬ ಲೇಖನದಲ್ಲಿ ಜಾತಿಭೇದದಿಂದಾಗಿ ಪರಿಶಿಷ್ಟ ಜಾತಿ ಮತ್ತು ಪಂಗಡಗಳು, ಗಂಡು ಹೆಣ್ಣುಗಳ ನಡುವಿನ ತಾರತಮ್ಯದಿಂದಾಗಿ ಮಹಿಳೆಯರು, ಪ್ರಾದೇಶಿಕ ತಾರತಮ್ಯದಿಂದಾಗಿ ಉತ್ತರ ಕರ್ನಾಟಕದ ಐದು ಜಿಲ್ಲೆಗಳು ಹೇಗೆ ಅಭಿವೃದ್ಧಿಯ ಲಾಭಗಳನ್ನು ಪಡೆಯದೆ ಹಿಂದುಳಿಯುವಂತಾಗಿ ಒಟ್ಟು ರಾಜ್ಯದ ಹಿಂದುಳಿಯುವಿಕೆಗೆ ಕಾರಣವಾಗಿದೆ, ಎಂಬುದನ್ನು ವಿವಿಧ ಕ್ಷೇತ್ರಗಳಿಗೆ ಸಂಬಂಧಿಸಿದ ಅಂಕಿ ಅಂಶಗಳ ಸಹಾಯದಿಂದ ವಿಶ್ಲೇಷಿಸಿ ತೋರಿಸಲಾಗಿದೆ. 'ಹಿಂದುಳಿದಿರುವ ಜಿಲ್ಲೆಗಳಲ್ಲಿ ಶಿಕ್ಷಣ ಕಾಯಕಲ್ಪ' ಎಂಬ ಲೇಖನದಲ್ಲಿ ಈ ಜಿಲ್ಲೆಗಳ ಹಿಂದುಳಿದಿರುವಿಕೆಯ ಹಿಂದೆ ಇರುವ ಸಾಮಾಜಿಕ ಆರ್ಥಿಕ ಕಾರಣಗಳನ್ನು ಅನಾವರಣಗೊಳಿಸಲಾಗಿದೆ.

ಲೇಖಕ : *ಡಾ॥ ಟಿ. ಆರ್. ಚಂದ್ರಶೇಖರ*
ಪ್ರಕಾಶಕರು : ಸಿ. ವಿ. ಜಿ. ಪಬ್ಲಿಕೇಷನ್ಸ್
ಪುಟಗಳು : *XII+೧೬೮*
ಮೊದಲ ಮುದ್ರಣ : *೨೦೦೩* ಬೆಲೆ : **ರೂ. ೧೫೦**

'ಕರ್ನಾಟಕದಲ್ಲಿ ಸಾಮಾಜಿಕ ವೈಫಲ್ಯ' ಎಂಬ ಲೇಖನದಲ್ಲಿ ''ಕರ್ನಾಟಕವು ವರಮಾನ ಅಭಿವೃದ್ಧಿ ದೃಷ್ಟಿಯಿಂದ ದಕ್ಷಿಣ ಭಾರತದ ಉಳಿದ ರಾಜ್ಯಗಳಿಗಿಂತ ಉತ್ತಮವಾಗಿದ್ದರೂ ಸಾಮಾಜಿಕ ಅಭಿವೃದ್ಧಿ ದೃಷ್ಟಿಯಿಂದ ಅದು ಉಳಿದ ರಾಜ್ಯಗಳಿಗಿಂತ ಹಿಂದೆ ಬಿದ್ದಿದೆ'' ಎಂಬುದನ್ನು ತೋರಿಸಿಕೊಡುವ ಮೂಲಕ ವರಮಾನ ಮತ್ತು ಉತ್ಪಾದನೆಗಳ ಹೆಚ್ಚಳಕ್ಕಿಂತ ಸಾಕ್ಷರತೆ, ಶಿಕ್ಷಣ, ಆಯುರ್ಮಾನ, ಲಿಂಗ ಸಮಾನತೆ ಮುಂತಾದ 'ಮಾನವ ಅಭಿವೃದ್ಧಿ' ಸೂಚಿಗಳು ಯಾಕೆ ಮುಖ್ಯವಾಗುತ್ತವೆ ಎಂಬುದನ್ನು ಪರಿಣಾಮಕಾರಿಯಾಗಿ ತೋರಿಸಿಕೊಡಲಾಗಿದೆ. ನಾವು ನಮ್ಮನ್ನು ಉತ್ತರದ 'BIMARU' ರಾಜ್ಯಗಳೊಂದಿಗೆ ಹೋಲಿಸಿಕೊಂಡು ಬೀಗುತ್ತಿರುವಾಗ ನಮ್ಮ ನೆರೆಯ ಹೆಚ್ಚು ಜನನಿಬಿಡ ರಾಜ್ಯಗಳಿಗಿಂತ ನಮ್ಮ ಸಾಧನೆ ಕೆಳಹಂತದಲ್ಲಿರುವುದು ಒಂದು ದೊಡ್ಡ ವೈಫಲ್ಯವೇ ಸರಿ.

ಈ ಪುಸ್ತಕದಲ್ಲಿರುವ ಹದಿನೇಳು ಲೇಖನಗಳನ್ನು ಮೂರು ಭಾಗಗಳಾಗಿ ವಿಂಗಡಿಸಲಾಗಿದೆ. ಮೊದಲ ಭಾಗದಲ್ಲಿರುವ ಏಳು ಲೇಖನಗಳಲ್ಲಿ ಹೆಚ್ಚಾಗಿ, ಈಗಾಗಲೇ ಮೇಲೆ ವಿವರಿಸಲಾಗಿರುವಂತೆ, ನಮ್ಮ ರಾಜ್ಯದ ಅಭಿವೃದ್ಧಿ ಕಾರ್ಯಗಳ ಸಾಫಲ್ಯ ಮತ್ತು ವೈಫಲ್ಯಗಳ ವಿಶ್ಲೇಷಣೆ ಇದೆ.

ಎರಡನೆ ಭಾಗದಲ್ಲಿರುವ ನಾಲ್ಕು ಲೇಖನಗಳಲ್ಲಿ ನಮ್ಮ ರಾಜ್ಯದಲ್ಲಿ ಕಳೆದ ಹತ್ತು ವರ್ಷಗಳಲ್ಲಿ ಪಂಚಾಯತ್ ರಾಜ್ ವ್ಯವಸ್ಥೆಯನ್ನು ದುರ್ಬಲಗೊಳಿಸುವ ಶಾಸನಗಳು ಜಾರಿಗೆ ಬಂದಿದ್ದು ಈ ವ್ಯವಸ್ಥೆಯ ಮೇಲೆ ಸರ್ಕಾರಿ ಅಧಿಕಾರಶಾಹಿ 'ಜಿಲ್ಲಾ ಉಸ್ತುವಾರಿ ಮಂತ್ರಿ'ಯಂತಹ ವ್ಯವಸ್ಥೆಗಳು ಬಂದು ಅಧಿಕಾರ ವಿಕೇಂದ್ರೀಕರಣದ ಉದ್ದೇಶ ಸೋಲುತ್ತಿರುವುದನ್ನು ತೋರಿಸಿಕೊಡಲಾಗಿದೆ. ಮೂರನೆ ಭಾಗದಲ್ಲಿರುವ ಆರು ಲೇಖನಗಳಲ್ಲಿ ನಮ್ಮ ಅಭಿವೃದ್ಧಿ ಕಾರ್ಯಗಳ ವೈಫಲ್ಯಕ್ಕೆ ನಮ್ಮಲ್ಲಿ ಮಹಿಳೆಯರ ಬಗ್ಗೆ ಬಲವಾಗಿ ಬೇರೂರಿರುವ ತಾರತಮ್ಯ ಭಾವನೆಗಳೇ ಹೇಗೆ ಕಾರಣವಾಗಿವೆ ಎಂಬುದನ್ನು ವಿವಿಧ ದೃಷ್ಟಿಕೋನಗಳಿಂದ ವಿವರವಾಗಿ ವಿಶ್ಲೇಷಿಸಲಾಗಿದೆ.

'ಜನಸಂಖ್ಯೆ : ಮಾಲ್ಥಸ್‌ನ ಭೂತ' ಎಂಬ ಲೇಖನ ಜನಸಂಖ್ಯಾ ಸ್ಫೋಟದ ಬಗ್ಗೆ ನಮ್ಮ ಸುಶಿಕ್ಷಿತ ಮಧ್ಯಮ ವರ್ಗದ ಜನರಲ್ಲಿರುವ ಕೆಲವು ತಪ್ಪು ಧೋರಣೆಗಳನ್ನು ಹೋಗಲಾಡಿಸಲು ಸಹಾಯಕವಾಗಿದೆ. ಅದರಲ್ಲಿ, ಕೇರಳ ರಾಜ್ಯದಲ್ಲಿ ಜನಸಂಖ್ಯಾ ನಿಯಂತ್ರಣವನ್ನು ಆರೋಗ್ಯ ಮತ್ತು ಶಿಕ್ಷಣಕ್ಕೆ ಪ್ರಾಮುಖ್ಯತೆ ಕೊಡುವುದರ ಮೂಲಕ ಸಾಧಿಸಿರುವುದನ್ನು ಮತ್ತು ಅದನ್ನೇ ಚೀನಾದಲ್ಲಿ ಬಲವಂತ ಮತ್ತು ಬಲಾತ್ಕಾರದ ಹೇರಿಕೆಗಳ ಮೂಲಕ ಸಾಧಿಸಲು ಪ್ರಯತ್ನಿಸಿ ಸೋತಿರುವುದನ್ನು ತೋರಿಸಿಕೊಡಲಾಗಿದೆ.

'ಸಹಪಾಲಕತ್ವದ ರಾಜಕಾರಣ' ಎಂಬ ಲೇಖನದಲ್ಲಿ ''ಮಕ್ಕಳ 'ಲಾಲನೆ-ಪಾಲನೆ-ಪೋಷಣೆ'ಯನ್ನು, ಸಂಗೋಪನೆಯನ್ನು ಹೆಣ್ಣು - ಗಂಡು, ತಂದೆ - ತಾಯಿ ಜಂಟಿಯಾಗಿ ನಿರ್ವಹಿಸಬಹುದು. ಹೀಗೆ ಜಂಟಿಯಾಗಿ, ಕೂಡಿಕೊಂಡು ತಾಯಿತನದ ಜವಾಬ್ದಾರಿಯನ್ನು ನಿರ್ವಹಿಸಿದಾಗ ಮಗುವಿಗೆ ಪೂರ್ಣವಾದ ಪರಿಪೂರ್ಣವಾದ – ಪೋಷಣೆ ದೊರೆಯುತ್ತದೆ... ಮಹಿಳೆಯರ ಕಾರ್ಯಕ್ಷೇತ್ರ ಕೇವಲ ಮನೆಯಲ್ಲಿ, ಪುರುಷನಂತೆ ಅವಳೂ ಸಾಮಾಜಿಕಳು. ಸಂಸಾರದ ನಿರ್ವಹಣೆಯ ಹೊಣೆಗಾರಿಕೆ ಮಹಿಳೆಯರಿಗೆ ಎಷ್ಟಿರುತ್ತದೋ ಪುರುಷರಿಗೂ ಅಷ್ಟೇ ಇರಬೇಕು'' ಎಂದು ವಾದಿಸಲಾಗಿದೆ. ಇಂದು ಮುಂದುವರಿದ ದೇಶಗಳಾದ ಜಪಾನ್ ಮತ್ತು ಇಟಲಿಗಳಲ್ಲಿನ ಗಂಡಸರು ತಮ್ಮ 'ಗಂಡಸುತನದ' ಅಹಮಿಕೆಯಿಂದಾಗಿ ಕುಟುಂಬದಲ್ಲಿ ಮಹಿಳೆಯರಿಗೆ ಸಮಾನ ಸ್ಥಾನವನ್ನು ನೀಡದೆ, ಅವರ ಕೆಲಸಗಳಲ್ಲಿ ಸಹಕರಿಸದಿರುವುದರಿಂದ ಅಲ್ಲಿನ ಮಹಿಳೆಯರು ವಿವಾಹವಾಗುವುದಕ್ಕೆ ಇಷ್ಟಪಡದೆ ಅದನ್ನು ಆದಷ್ಟೂ ಮುಂದೂಡುತ್ತಿದ್ದಾರೆ. ಮದುವೆಯಾದ ನಂತರವೂ ಮಕ್ಕಳನ್ನು ಪಡೆಯಲು ಇಷ್ಟಪಡುತ್ತಿಲ್ಲ. ಇದರಿಂದಾಗಿ ಅಲ್ಲಿನ ಜನಸಂಖ್ಯೆಯಲ್ಲಿ ಎಳೆಯರ ಸಂಖ್ಯೆ ಬಹಳ ಕ್ಷೀಣಿಸುತ್ತಿದ್ದು ಸಾಮಾಜಿಕ ಆರ್ಥಿಕ ಸಮಸ್ಯೆಗಳಿಗೆ ಕಾರಣವಾಗಿದೆ.

ಕಳೆದ ಮೂರು ದಶಕಗಳಿಂದ ನಮ್ಮಲ್ಲಿ ಸಾಮಾಜಿಕ ನ್ಯಾಯ ಎಂದರೆ ಸರ್ಕಾರಿ ಹುದ್ದೆಗಳನ್ನು ಜಾತಿ ಆಧಾರದ ಮೇಲೆ ಹಂಚುವುದು ಎಂಬಂತೆ ಆಗಿಹೋಗಿದೆ. ಇದರಿಂದಾಗಿ ನಮ್ಮಲ್ಲಿ ಸಾಮಾಜಿಕ ಚಲನೆಗೆ ಜಾತಿಸಂಘಟನೆಗಳ ಮೂಲಕ ಹೋರಾಟ ಮಾಡುವುದು ಒಂದು ಸಂಪ್ರದಾಯವೇ ಆಗಿ ಬೆಳೆದಿದೆ. ಇದರಿಂದಾಗಿ ನಮ್ಮಲ್ಲಿ ನಿಜವಾದ ಸಾಮಾಜಿಕ ಬದಲಾವಣೆ ಹೇಗೆ ಹಿನ್ನೆಲೆಗೆ ಸರಿದು ನಮ್ಮ ರಾಜ್ಯ ಒಂದು 'ಮಧ್ಯಮಗತಿ'ಯ ರಾಜ್ಯವಾಗಿ ಉಳಿದುಬಿಟ್ಟಿದೆ ಎಂಬುದನ್ನು 'ಮಧ್ಯಮಗತಿ ಕರ್ನಾಟಕ – ಒಂದು ಅನುಸಂಧಾನ' ಎಂಬ ಲೇಖನದಲ್ಲಿ ಶೋಧಿಸಲಾಗಿದೆ. ಜಾತಿ ಆಧಾರಿತ social engineeringನಲ್ಲಿ ಸ್ಥಾನಗಳ (positional) ಬದಲಾವಣೆ ಮಾತ್ರ ಸಾಧ್ಯ, ಒಟ್ಟು ಸಂರಚನೆಯ (structure) ಬದಲಾವಣೆ ಸಾಧ್ಯವಿಲ್ಲ ಎಂಬುದನ್ನು ಅಲ್ಲಿ ತೋರಿಸಿಕೊಡಲಾಗಿದೆ.

ವಿದ್ವಾಂಸರ ಬರಹಗಳು ಎಷ್ಟು ಉಪಯುಕ್ತವಾಗಿರಬಹುದು ಎಂಬುದನ್ನು ಈ ಪುಸ್ತಕದಲ್ಲಿರುವ ಲೇಖನಗಳ ಓದಿನಿಂದ ಮನಗಾಣಬಹುದಾಗಿದೆ. ವಿದ್ವಾಂಸರು ದಂತಗೋಪುರಗಳಲ್ಲಿರುವವರಲ್ಲ, ಅವರು ನಮ್ಮ ದಿನನಿತ್ಯದ ಸಮಸ್ಯೆಗಳಿಗೆ ಸ್ಪಂದಿಸಬಲ್ಲರು ಎಂಬುದನ್ನು ಇಲ್ಲಿನ ಬರಹಗಳು ಪರಿಣಾಮಕಾರಿಯಾಗಿ ತೋರಿಸಿವೆ. ನಮ್ಮ ವಿಚಾರಸಾಹಿತ್ಯದಲ್ಲಿ ಶಾಸ್ತ್ರಜ್ಞರ ಬರಹಗಳಿಗೆ ಪ್ರಾಮುಖ್ಯತೆ ಸಿಗಬೇಕೆಂದು ಬಯಸುವವರಿಗೆ ಇಲ್ಲಿನ ಬರಹಗಳು ಇಷ್ಟವಾಗುತ್ತವೆ. ಇದು, ಈಗಾಗಲೇ ಪ್ರಕಟವಾಗಿರುವ ಲೇಖನಗಳ ಸಂಗ್ರಹವಾಗಿರುವುದರಿಂದ ಇಲ್ಲಿನ ಹಲವಾರು ಲೇಖನಗಳಲ್ಲಿ ಮಾಹಿತಿಗಳ ಪುನರಾವರ್ತನೆಯಾಗಿರುವುದು, ಓದುಗರ ದೃಷ್ಟಿಯಿಂದ, ಇಲ್ಲಿನ ಮುಖ್ಯ ಕೊರತೆಯಾಗಿದೆ ಎಂದು ಹೇಳಬಹುದು.

**ಗಿರೀಶ್ ವಿ. ವಾಘ್**
೯೨೩, ೭ನೇ ಕ್ರಾಸ್, ಉಪನಗರ, ಕೆಂಗೇರಿ, ಬೆಂಗಳೂರು - ೬೦













ಇಂದು ಎಂಥಾ ಮನಃಸ್ಥಿತಿಯನ್ನೂ ಅಲುಗಿಸಬಲ್ಲ, ಎಂಥಾ ಅನುಭಾವಿಕನನ್ನೂ ಆಶೆಬುರುಕನನ್ನಾಗಿ ಮಾಡಬಲ್ಲ, ಸ್ವಾರ್ಥದ ಲೇಪವಿಲ್ಲದೆ ಸಾಮೂಹಿಕವಾಗಿ ಆಲೋಚಿಸಲೂ ನಿರಾಕರಿಸುವ ಇವತ್ತಿನ ವಿಚ್ಛಿದ್ರಕಾರಿಗಳ ವಿರುದ್ಧ ನಟರಷ್ಟೇ ಅಲ್ಲ ಸೃಜನಶೀಲರೆಲ್ಲರೂ ಬೀದಿಗಿಳಿಯಲೇಬೇಕಾಗಿದೆ. 'ಸಮುದಾಯ', 'ಇಪ್ಟಾ', 'ಜನಮ್'ನಂತಹ ಸಂಘಟನೆಗಳೂ ಈ ಆಶಯಗಳಿಗಾಗಿ ತಮ್ಮ ಇತಿಮಿತಿಯಲ್ಲಿ ಪ್ರಯತ್ನಿಸುತ್ತಿವೆ. ಆದರೆ ಕೋಮುವಾದಿಗಳ ರೆಜಿಮೆಂಟ್ ವಿರುದ್ಧ ಸಾಧಿಸಬೇಕಾಗಿರುವ, ಕೋಮುವಾದಿಗಳ ತುರ್ತು ಅವಸಾನಕ್ಕೆ ಅಗತ್ಯವಾಗಿರುವ ಬಿರುಸಿನ ಚಟುವಟಿಕೆಗಳು ಇನ್ನೂ ಚುರುಕುಗೊಳ್ಳಬೇಕಾಗಿದೆ. ಈ ನಿಟ್ಟಿನಲ್ಲಿ ಆ ಸಂಘಟನೆಗಳು ಮಾಡುತ್ತಿರುವ ಪ್ರಯತ್ನ ಸಾಲದೆಂಬುದು ನಿಜವೆ.

---

**ಭಾ**ರತಕ್ಕೆ ಸಂಪನ್ಮೂಲದ ಸಮೃದ್ಧಿ ಇದ್ದರೂ, ಬಡತನ, ಅನಕ್ಷರತೆ, ಜಾತಿವ್ಯವಸ್ಥೆ, ರಾಜಕೀಯ ಅರಾಜಕತೆ ಮುಂತಾದ ಅನಿಷ್ಟಗಳು ದೇಶದ ತುಂಬಾ ದಾಂಗುಡಿಸಿ ಉರಿಯುತ್ತಿವೆ. ಉರಿವ ಬೆಂಕಿಗೆ ತುಪ್ಪ ಸುರಿದಂತೆ, ಜಾಗತೀಕರಣದ ಕೊಳ್ಳಿ ನಮ್ಮ ಸಂಪನ್ಮೂಲದಿಂದಲೇ ಉರಿಯುತ್ತಾ ನಮ್ಮ ಬದುಕನ್ನು ಸುಟ್ಟು ಕರಕಲಾಗಿಸುತ್ತಿದೆ. ಸಾಮ್ರಾಜ್ಯಶಾಹಿ ದೇಶಗಳ ಗೂಂಡಾಗಿರಿಯಿಂದಾಗಿ ಸಾರ್ವಜನಿಕ ಉದ್ದಿಮೆಗಳು ಮುಚ್ಚುತ್ತಿವೆ. ಲಾಭದಿಂದ ನಡೆವ, ನಡೆಯುತ್ತಿರುವ ಉದ್ದಿಮೆಗಳನ್ನು ನಮ್ಮ ಸರ್ಕಾರವೇ ಖುದ್ದಾಗಿ ಖಾಸಗಿಯವರಿಗೆ ಮಾರುತ್ತಿರುವುದರಿಂದ ಲಕ್ಷ ಲಕ್ಷ ಕಾರ್ಮಿಕರು ನೆಲೆ ಇಲ್ಲದ ಭಿಕಾರಿಗಳಾಗುತ್ತಿದ್ದಾರೆ. ಅನ್ನ, ಅಕ್ಷರದಿಂದ ವಂಚಿತರಾದ ಬಡವರು ಬದುಕುವ ಭರವಸೆ ಕಳೆದುಕೊಳ್ಳುತ್ತಿದ್ದಾರೆ. ಸರ್ಕಾರದಲ್ಲಿರುವ ರಾಜಕೀಯ ವ್ಯಕ್ತಿಗಳಿಗೆ ತಮ್ಮ ದೇಶದ ಸ್ವಾಯತ್ತತೆ ಬಗ್ಗೆ ಇರಬೇಕಾದ ಕಾಳಜಿ ಇಲ್ಲದಿರುವುದರಿಂದ ಒದಗಿದ ದುರವಸ್ಥೆ ಇದು.

ಪ್ರಪಂಚದಲ್ಲೆ ಪ್ರಜಾಪ್ರಭುತ್ವವಾದದ ಅತಿ ದೊಡ್ಡ ದೇಶ ಭಾರತ. ಈ ಪವಿತ್ರ ಭಾರತದ ಒಟ್ಟು ಜನಸಂಖ್ಯೆಯಲ್ಲಿ ಕೇವಲ ಶೇ. ೩ ಜನ ಇಡೀ ದೇಶದ ಜನರ ಧ್ವನಿ ತಾವೇ ಏನೋ ಅನ್ನುವ ಹಾಗೆ, ಹಿಂದುತ್ವದ ಹೆಸರಲ್ಲಿ ಹುನ್ನಾರ ನಡೆಸಿದ್ದಾರೆ. ಕೋಮುಕೋಮಿನ ಮಧ್ಯೆ ವೈರತ್ವದ ವಿಷ ಬೀಜ ಬಿತ್ತಿ ಮಾನವೀಯ ಧರ್ಮಗಳನ್ನು ಛಿದ್ರ ಮಾಡುತ್ತಿದ್ದಾರೆ. ಬಾಬ್ರಿಮಸೀದಿ ನೆಲಸಮವಾದದ್ದು, ಕ್ರೈಸ್ತರನ್ನು ಜೀವಂತ ಸುಟ್ಟಿದ್ದು, ಗುಜರಾತಿನಲ್ಲಿ ರಕ್ತದ ಹೊಳೆ (ಅತ್ಯಾಚಾರ, ದರೋಡೆ, ಗರ್ಭಿಣಿಯರ ಮತ್ತು ಶಿಶು ಹತ್ಯೆಯ ಬಗ್ಗೆ ಪೂರ್ಣ ಲೆಕ್ಕ ಸಿಕ್ಕಿಲ್ಲ) ಹರಿದಿದ್ದು, ಕಾಶ್ಮೀರ ಇನ್ನೂ ಹೊತ್ತುರಿಯುತ್ತಿರುವುದಕ್ಕೆ ಹತ್ತು ಹಲವು ಕಾರಣಗಳಲ್ಲಿ ಸಿಂಹಪಾಲು ಈ ಜನರದೇ ಕೈವಾಡ. ಇದೇ ಜನರ ಕಣ್ಣು ಈಗ ಕರ್ನಾಟಕದ ಬಾಬಾ ಬುಡನ್‌ಗಿರಿಯ ಮೇಲಿದೆ. ಇದು 'ಭಕ್ತಿ ಎಂಬುದ ಮಾಡಬಾರದಯ್ಯ ಗರಗಸವಿದ್ದಂತೆ, ಹೋಗುತ್ತ ಕೊರೆಯುವುದು ಬರುತ್ತ ಕೊಯ್ಯುವುದು' ಎನ್ನುವಂತಿದೆ. ಇನ್ನೊಂದು ಕಡೆ ಬರ, ಹಸಿವು, ಸಾಲ. ಕೈಗೆ ಕೆಲಸವಿಲ್ಲದ ವ್ಯವಸ್ಥೆಯಿಂದಾಗಿ ಸ್ವಾಭಿಮಾನವನ್ನು ಪಣಕ್ಕಿಟ್ಟು ಸಾಯುತ್ತಿರುವ ರೈತನ ಬಗ್ಗೆ ಸ್ವತಃ ನಮ್ಮ ಸರ್ಕಾರವೇ ಬೆಲೆ ಕಟ್ಟುತ್ತಿದೆ, 'ಸತ್ತವರ ಮನೆಗೊಂದು ಲಕ್ಷ'... ಎಂದು. ಈ ಲಕ್ಷಕ್ಕೇ ಜನ ಸಾಯುತ್ತಿದ್ದಾರೆಂದು ವಿಧಾನಸೌಧದಲ್ಲಿ ಕೆಲವರ ವಾದ - ಸಂವಾದ, ಜಗಳ. ಸಮಾಜ ಆರಿಸಿ ಕಳಿಸಿದ್ದಕ್ಕೆ ಸಮಾಜಕ್ಕೆ ಇವರು ಮಾಡುವ ಉಪಕಾರವಿದು. ಮೇಲಾಗಿ ಇದು ಅವರ ಅಸ್ತಿತ್ವದ ಪ್ರಶ್ನೆಯಲ್ಲವೇ ? ಯಃಕಶ್ಚಿತ್ತಾದ ಒಬ್ಬ ಕಾಡುಗಳ್ಳ ವೀರಪ್ಪನ್ ಮೂರು ರಾಜ್ಯಗಳಿಗೆ ಹೆದರಿಸುತ್ತಿದ್ದಾನೆ... ದೇಶದ ಪ್ರಧಾನಿಯಿಂದ ಹಿಡಿದು ಕೊನೆಯ ಅಧಿಕಾರಿಯವರೆಗೆ ಮೂಕಪ್ರಜ್ಞೆ!

ಜನ ಪ್ರತಿನಿಧಿಗಳಾದ ರಾಜಕೀಯ ಮುಂದಾಳುಗಳು, ಜನರ ಸಾಂಸ್ಕೃತಿಕ ಲೋಕವನ್ನೇ ತಾತ್ಸಾರ ಮಾಡುತ್ತ ಗದ್ದುಗೆಯ ಭದ್ರತೆಯ ಹುನ್ನಾರು ನಡೆಸುತ್ತ - ರಾಜಕೀಯವೆಂದರೆ ಗೂಟದ ಕಾರಿನಲ್ಲಿ ತಾನು ಮೆರೆಯಲು ಜನ

# ಬೀದಿರಂಗ ಬದ್ಧನಟ

ರಂಗಾಯಣ ಆರ್. ಶಾಂತಿ

ಮಾಡಿಕೊಟ್ಟ ಅಧಿಕಾರ ಎಂದು ತಿಳಿದಂತಿದೆ. ಇಡೀ ಸಂಸ್ಕೃತಿ ಬಂಡವಾಳ ವ್ಯವಸ್ಥೆಯ ಶಾಖೆಗಳಾಗಿ, ಪ್ರದರ್ಶನಕಲೆ ಎಂಬ ಕಲಾ ಮಾಧ್ಯಮ ಶೋ ಬಿಜಿನೆಸ್ ಆಗಿದೆ. ಅನುಭವಗಳ ಸಂವೇದನೆಯ ಬದಲು ಪ್ರಲೋಭನೆ ಸೃಷ್ಟಿಯಾಗುತ್ತಿದೆ. ಸಮಾಜ ಸಾಂಸ್ಕೃತಿಕ ದಾರಿದ್ರ್ಯದತ್ತ ಸಾಗುತ್ತಿದೆ. ಹಿಂದೆ, ಅಂದರೆ ನೂರಾರು ವರ್ಷಗಳ ಹಿಂದೆ ನಮ್ಮ ಜನಪದರು ಪ್ರತಿಭಟಿಸಿದ್ದಾರೆ. ಹೇಗೆಂದರೆ :

''ಸಾಹೇಬ್ರು ಸರದಾರ್ರು
ಅಂಗ್ರೇಜಿ ಜಾಗಿರಿ
ಕಾಗದ ಬರಿತಾರ ದಿಲ್ಲಿಗೆ,
ಕಾಗದ ಬರಿತಾರ ದಿಲ್ಲಿಯ ರಾಜಗೆ
ಕಾಳ ಖರೀದಿ ಮಾಡಿ ಕಳಿಸಿರಿ
ಕಾಳ ಖರೀದಿ ಮಾಡಿ ಕಳಿಸಿರಿ ಬೇಗನೆ
ಬರಬಿದ್ದದ ನಮ್ಮ ನಾಡಿಗೆ''

ಈ ಇಶಾರಕ್ಕೂ ಜಗ್ಗದೇ ಇದ್ದಾಗ... ತಮ್ಮದೇ ಧ್ವನಿಯಲ್ಲಿ ಆಳುವ ವರ್ಗಕ್ಕೆ ಮತ್ತೊಂದು ಇಶಾರಾ

ನೀಡಿದ್ದಾರೆ. ಹೇಗೆಂದರೆ,

> ಜೋಳ ಬೆಳೆದ ಮನೆಗೆ ಉಣಲಾಕ ಕೂಳಿಲ್ಲ
> ಬೀಸಾಕ ಕವಣೆಯ ಬಲವಿಲ್ಲ
> ಬೀಸಾಕ ಕವಣೆಯ ಬಲವಿಲ್ಲ ಜನಗಳೇ
> ಸುಡಬೇಕು ನಮ್ಮನ್ನು ಆಳುವವರಾ
> ಸುಡಬೇಕು ನಮ್ಮನ್ನು ಆಳುವವರಾ

ಬದುಕುವ ಹಕ್ಕಿಗಾಗಿ ಹೇಳಲೇಬೇಕಾದ ಜನ ತಮ್ಮ ಬದುಕುವ ಹಕ್ಕಿಗಾಗಿ ಇದು ಕೇಳಲೇಬೇಕಾದ ಧ್ವನಿ. ಇಲ್ಲಿ ನಾಚಿಕೆ ಪಡಬೇಕಾದವರ್ಯಾರು ? ನಾವು ನಮ್ಮ ಮುಂದಿನ ಪೀಳಿಗೆಗೆ ಯಾವ ಸಾಮಾಜಿಕ ಬದ್ಧತೆಯ ಮಾದರಿಯನ್ನು ಇದು ನಮ್ಮ ಕಾಲದ ಮೌಲ್ಯ, ಎಂದು ತೋರಿಸಬೇಕೊ ! ದಿಕ್ಕು ತಿಳಿಯದಾಗಿದೆ. ಇಂಥಾ ವಾಸ್ತವದ ವಿಪರೀತಗಳಲ್ಲಿ ಬದುಕುವ ನಟನಿಗೆ ಅವನ ಸಂವೇದನೆಗಳನ್ನು ಬುದ್ಧಿಯ ಒರೆಗಲ್ಲಿಗೆ ಹಚ್ಚುವ ಅನಿವಾರ್ಯತೆ ಬಂದಿದ್ದರೂ ಯಾಕೆ ಸುಮ್ಮನಿದ್ದಾನೆ ? ಧ್ಯಾನಸ್ಥ ಸ್ಥಿತಿಯಲ್ಲಿದ್ದಾನೆಯೇ ? ಸಮೂಹ ಸನ್ನಿಯೇ ? Totally blank ಆಗಿದ್ದಾನೆಯೇ ? ತನ್ನ ಅಸ್ತಿತ್ವದ ಅರಿವಿಲ್ಲದಿದ್ದಾನೆಯೆ ? ಇಲ್ಲಿ ಹುಟ್ಟಿನಿಂದಲೇ ಜಾತಿಯ ಕಳಂಕ ಹೊತ್ತುಕೊಂಡುಬರುತ್ತ ಬದುಕುವ ಕಲಾವಿದ ಕೋಮು ಕೋಮಿನ ಮಧ್ಯೆ ಕುಲಬಾಂಧವನಾಗಿ, ಕೆಲಸ ಮಾಡಬೇಕಾಗಿದೆ, ಮಾನವ ಸಂಬಂಧಗಳ ಕೊಂಡಿ, ಕೀಲುಗಳಾಗಿ ಸಮಾಜವನ್ನು ಹೊತ್ತೊಯ್ಯುವ ಜವಾಬ್ದಾರಿ ಜಾಸ್ತಿಯಾಗಿದೆ.

ಹೋಟೆಲ್ ಒಂದರಲ್ಲಿ ನಾನು ಚಹಾ ಕುಡಿಯುತ್ತಿದ್ದಾಗ ಮಾತಿನ ಮಾತಿಗೆ ಒಬ್ಬ ಅಂದಿದ್ದು: 'ಮಂದಿರ್ ತೊಡೊ, ಮಸಜಿದ ತೊಡೊ, ಮಗರ ದಿಲ್ ನಹಿ ತೊಡೊ.' ಜನಸಾಮಾನ್ಯರಲ್ಲಿ ಎಷ್ಟೊಂದು ಹೊಂದಾಣಿಕೆ ಇದೆ. ಇದಕ್ಕೆ ಹುಳಿ ಹಿಂಡುವವರ್ಯಾರು ?

ದೇವರು ಧರ್ಮದ ಹೆಸರಿನಲ್ಲಿ ಉದ್ರೇಕಗೊಳಿಸುವ ಕೆಲಸವನ್ನು ಫ್ಯಾಸಿಸ್ಟ್ ಶಕ್ತಿಗಳು ಹಿಂದೆಂದಿಗಿಂತಲೂ ಇಂದು ಬಹಳ ಸ್ಟ್ರ್ಯಾಟಜಿಕ್ ಆಗಿ ಮಾಡುತ್ತಿವೆ. ರಥಯಾತ್ರೆ, ಶೋಭಾಯಾತ್ರೆಯಂತಹ ಕಾರ್ಯಕ್ರಮಗಳಲ್ಲಿ ಹೆಚ್ಚಿನ ಯುವಶಕ್ತಿ, ಕಲಾವಿದರ, ಕಾರ್ಯಕರ್ತರ ರೂಪದಲ್ಲಿ, ಕೋಮುವಾದಿಗಳ ಸಂಘಟನೆಯಲ್ಲಿ ಬಳಕೆಯಾಗುವ ವ್ಯಕ್ತಿ, ತಾನೊಂದು ಸಮಾಜಸೇವೆಯ ಪವಿತ್ರ ಕೆಲಸ ಮಾಡುತ್ತಿದ್ದೇನೆಂದೇ ನಂಬಿ, ತನ್ನ ವ್ಯಕ್ತಿತ್ವ ಅಸ್ತಿತ್ವಗಳನ್ನೆಲ್ಲಾ ಕೋಮುವಾದಿಗಳ ಪಾದಾರವಿಂದಗಳಿಗೆ ಸಮರ್ಪಿಸಿ, ವಿನೀತನಾಗಿ ಕೆಲಸ ಮಾಡುತ್ತಿದ್ದಾನೆ, 'ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರಿಯಸೀ' ಎಂದು. ಇವನನ್ನು ಕಲಾವಿದ ಎಂದು ಕರೆಯಲಾದೀತೆ ? ಸ್ವಂತಿಕೆ ಇಲ್ಲದ, ಸಮೂಹ ಸನ್ನಿಯ, ಪ್ರಾಣಿ ಬುದ್ಧಿಯ ಮನುಷ್ಯ ರೂಪಿ ಹುಳದಂತಿರುವ ಇವನನ್ನು ಹೇಗೆ ಕಲಾವಿದ ಎಂದು ಕರೆಯುವುದು ? ಕಲಾವಿದರಿಗೇ ಅವಮಾನ. ಇಂಥವರ ಮುಂದಿನ ಭವಿಷ್ಯದ ಬದುಕು ಯೋಚನೆಗೂ ನಿಲುಕದ್ದು. ಧರ್ಮದ ಅಫೀಮಿನ ಪರಿಣಾಮಕಾರಿ ಕ್ರಿಯೆಯ ಬಗ್ಗೆ ಕೋಮುವಾದಿಗಳಿಗೆ ಗೊತ್ತಿದೆ. ಜನಮಾನಸವನ್ನು ಸೂರೆಗೊಳ್ಳುವ ತಂತ್ರ, ಕುತಂತ್ರಗಳು ಇಲ್ಲಿ strategy ಆಗೇ ಕೆಲಸ ಮಾಡುತ್ತವೆ. ಇಂಥಾ ಕಡೆಗಳಲ್ಲೆಲ್ಲ ಬಳಕೆಯಾಗುವ ಮನುಷ್ಯರೂಪಿ ಕಲಾವಿದ ಒಂದು ರೆಜಿಮೆಂಟಾಗಿ ಕೆಲಸ ಮಾಡುತ್ತಾನೆ... ಕೊಡಲಿಯ ಕಾವು ಕುಲಕ್ಕೆ ಮೂಲ ಎಂಬಂತೆ. ಹಾಗಾದರೆ ಇಷ್ಟೊಂದು ಸಶಕ್ತ ಯುವಪಡೆಯ ಅಸ್ತಿತ್ವ ಏನು ? ಹೂಂ ಹುಂ... ಹುಲುಮಾನವರು...! ಹಾಗಾದರೆ ಅಸ್ತಿತ್ವ ಎಂದರೇನು ?

ಪ್ರೊ।। ಬಿ. ಕೃಷ್ಣಮೂರ್ತಿಯವರು ''ಸಾಹಿತ್ಯ ಮತ್ತು ಸಾಮಾಜಿಕ ನೆಲೆ'' ಎಂಬ ಪುಸ್ತಕದಲ್ಲಿ ಹೇಳುವಂತೆ, ವ್ಯಕ್ತಿಯು ಧಾರ್ಮಿಕ, ನೈತಿಕ, ರಾಜಕೀಯ ಕಟ್ಟುಪಾಡುಗಳನ್ನನುಸರಿಸಿ ಬದುಕುವುದು ಅಸ್ತಿತ್ವವೇ ಅಲ್ಲ. ಅಸ್ತಿತ್ವವೆಂದರೆ, ವ್ಯಕ್ತಿ ಪ್ರತಿಕ್ಷಣದಲ್ಲೂ ತನ್ನ ವೈಚಾರಿಕ ಸ್ವಾತಂತ್ರ್ಯವನ್ನು ಬಳಸಿ, ಪ್ರಜ್ಞಾಪೂರ್ವಕವಾದ ನಿಲುವುಗಳ ಆಯ್ಕೆ ಮಾಡುತ್ತ ಬದುಕುವುದೇ ನಿಜವಾದ ಅಸ್ತಿತ್ವ.

ಮಾನವನು ಮೂಲತಃ ಸಾಮಾಜಿಕ, ಸಾಂಸ್ಕೃತಿಕ ಜೀವಿಯಾಗಿರುವುದರಿಂದ ಅವನು ತನ್ನ ಸಮಾಜದ ಬಗ್ಗೆ ಹಲವಾರು ಪರಿಕಲ್ಪನೆಗಳನ್ನು ರೂಪಿಸಿಕೊಳ್ಳುತ್ತಾನೆ ಮತ್ತು ವಾಸ್ತವವನ್ನು ಆ ಪರಿಕಲ್ಪನೆಗಳ ಮೂಲಕವೇ ಗ್ರಹಿಸುತ್ತಾನೆ. ಆದರೆ ಇಂದಿನ ವಿಷಮ ಪರಿಸ್ಥಿತಿಯಲ್ಲಿ ಮನುಷ್ಯ ದಂಗುಬಡಿದು ನಿಂತಿದ್ದಾನೆ. 'ಅಂಧಯುಗ' ನಾಟಕದ ಒಂದು ನುಡಿ ಹೀಗಿದೆ :

> ಎಲ್ಲಾ ನಕ್ಷತ್ರಗಳು ಮುಳುಗಿದವು
> ಆಯಿತು ತಿಮಿರಾ ಗಹನಾ
> ಮೊದಲೇ ಭಯಂಕರ, ಇನ್ನೂ ಭಯಂಕರ; ಸಮೂಹ ಪ್ರಜ್ಞೆಗೆ
> ಎಷ್ಟೊಂದು ಕತ್ತಲಾವರಿಸಿದೆ !

ಬದುಕಿಗೆ ಭಯಂಕರ ಕತ್ತಲಾವರಿಸುತ್ತಿರುವ ಹಿಂಸಾ ವಾಸ್ತವದ ವಿಪರೀತಗಳಲ್ಲಿ ಬದುಕುತ್ತಿರುವ ವ್ಯಕ್ತಿ, ಕಲಾವಿದ, ಸ್ವಯಂಸೇವಾ ಸಂಘಟಕ, ನಿರ್ದೇಶಕ, ನಟರ ಸಂವೇದನೆಗಳೇನಾದವು ? ಪ್ರಗತಿಪರ ವಿಶ್ವದ ಸಾಂಸ್ಕೃತಿಕ ರೂವಾರಿ ಮಾಕ್ಸಿಮ್ ಗೋರ್ಕಿ ಕೇಳಿದಂತೆ ಇಂದು ಯಾರೂ ಕೇಳಬೇಕಾಗಿದೆ : ಸಾಹಿತಿಗಳೇ, ಕವಿಗಳೇ, ಕಲಾವಿದರೇ, ವಿಜ್ಞಾನಿಗಳೇ, ಸಮಾಜ ಚಿಂತಕರೇ, ಈಗ ಹೇಳಿ, ಕೋಮುವಾದಿಗಳ ಕೈಯಲ್ಲಿ ಉರಿವ ಕೊಳ್ಳಿಗಳಾಗಿ ದೇಶವನ್ನೇ ಸುಡಬಯಸುತ್ತೀರೋ, ಇಲ್ಲಾ ಬದುಕಿಗಾಗುತ್ತಿರುವ ಅನ್ಯಾಯದ ವಿರುದ್ಧ ಸಿಡಿದೆದ್ದು ಬೀದಿಗಿಳಿದು ಸಮಾಜದ ಬೆಳಕಾಗುತ್ತೀರೊ ? ಎಂದು. ನಾವೇನು ಮಾಡಲು ಸಾಧ್ಯ ? ಎಂದು ಸುಮ್ಮನೆ ಕೂತರೆ ಮುಂದಿನ ಪೀಳಿಗೆ ನಮ್ಮನ್ನು ಕ್ಷಮಿಸುವುದಿಲ್ಲ.

ಶತ್ರು ಹೊರಗಿಲ್ಲ, ನಮ್ಮೊಳಗಿದ್ದಾನೆನ್ನುವುದು ಅಂತರಾಳದಿಂದ ಹೊಮ್ಮುವ ಅರಿವಿನ ಹೊಳವು. ನಮ್ಮ ತಪ್ಪನ್ನು ನಮಗೆ ಕನ್ನಡಿ ಹಿಡಿವ ರಂಗಭೂಮಿ ಇಂದು ಬಿಕರಿಯಾಗುತ್ತಿದೆ. ಕಲಾವಿದ ತಾನೊಂದು ಮಾರಾಟದ ವಸ್ತು ಎನ್ನುವಂತಾಗಿದ್ದಾನೆ. ಆ ಸಂವೇದನೆ ಪ್ರತಿಭಟನೆಯ ಧ್ವನಿಯಾಗಿ, ಸಮಾಜ ಕೇಳುವ ಸಾಮೂಹಿಕ ಹಕ್ಕಾಗಿ, ರಾಜಕೀಯದ ಕುರ್ಚಿಯನ್ನು ಅಲ್ಲಾಡಿಸುವ ಬದಲು ಯಾರದೊ ಕೈಗೊಂಬೆಯಾಗುತ್ತಿದ್ದಾನೆ. ತನ್ನ ಬದ್ಧತೆಯನ್ನಡವಿಟ್ಟು ಬದುಕುವ ಪರಿಸ್ಥಿತಿಗೆ ಬರುತ್ತಿರುವುದು ವಿಷಾದನೀಯ.

ನಮ್ಮ ನೆಲದ ಮರೆಯ ನಿಧಾನವನ್ನು ನಾವೇ ಸಾವಧಾನವಾಗಿ ಅವಲೋಕಿಸಿದರೆ ನಮ್ಮ ಕಲೆ, ಸಂಸ್ಕೃತಿ, ಪರಂಪರೆ ಮತ್ತು ಅವು ಸಾಗಿಬಂದ ಹೆಜ್ಜೆಯ ಗುರುತುಗಳೂ ಸಿಗುತ್ತವೆ. ಆ ದಾರಿಯಲ್ಲೆ ರಂಗಭೂಮಿಯ ಕಲಾವಿದನ ಬದ್ಧತೆಯ ಬಗ್ಗೆಯೂ ಗೊತ್ತಾಗುತ್ತದೆ. ಹೊಸ ಹುಡುಕಾಟದೊಂದಿಗೆ ನಮ್ಮ ದಿಕ್ಕುದೆಸೆ ಕಂಡುಕೊಳ್ಳದಿದ್ದಲ್ಲಿ ನಾವೂ ಕೂಡಾ, 'ದಾರಿ ಯಾವುದಯ್ಯಾ ವೈಕುಂಠಕ್ಕೆ ?' ಎಂದು ಕೇಳಬೇಕಾದೀತು.

ಸಮಾಜಮುಖಿ ನಟನ ಬದ್ಧತೆಯ ಬಗ್ಗೆ ಹೇಳುವುದಾದರೆ ಇವನೊಬ್ಬ ಸಾಮಾಜಿಕ ವಿಜ್ಞಾನಿ. ಬದ್ಧ ನಟನಿಗೆ ತನ್ನ ವೈಯಕ್ತಿಕ ತುಮುಲಗಳಿಗಿಂತ ಸಾಮಾಜಿಕ ಸಮಸ್ಯೆಗಳನ್ನು ಬಗೆಹರಿಸುವ ಕ್ರಿಯೆ, ಪ್ರಕ್ರಿಯೆಗಳೇ ಹುಡುಕಾಟದ ಜಗತ್ತು. ಸಾಮಾಜಿಕ ಜವಾಬ್ದಾರಿಯ ಜೊತೆಗೆ, ಸೃಜನಶೀಲ ಕಲಾ ಪ್ರಕಾರಗಳ ಕೊಂಡಿಯಾಗಿ ಕೆಲಸ ಮಾಡುವುದರಿಂದ, ಮಾನಸಿಕವಾಗಿ, ತಾತ್ವಿಕವಾಗಿ ಬೌದ್ಧಿಕ ಸಂವೇದನೆಗಳಿಗೊಳಗಾಗುತ್ತಾನೆ ನಟ. ವೈಚಾರಿಕ ನೆಲೆಯಲ್ಲಿ ಬೇರೆಯವರಿಗಿಂತ ಭಿನ್ನವಾಗಿರುತ್ತಾನೆ, ಸಂವೇದನಾಶೀಲನಾಗುತ್ತಾನೆ. ರಂಗಭೂಮಿ ನಟನಿಗೆ ಕೊಡುವ ದೊಡ್ಡ ಆಸ್ತಿ ಎಂದರೆ ಇದೆ. ಆದರೆ ನಟನೊಳಗಿರಬೇಕಾದ ಅರಿವಿನ ಅಂಶ ಎಂದರೆ ಪ್ರೇಕ್ಷಕರು ದಡ್ಡರಲ್ಲ - ಪ್ರಜ್ಞಾವಂತರೆಂಬುವ ನಂಬಿಕೆ. ಆದ್ದರಿಂದ ನಟನಿಗೆ, ಕಲಾವಿದನಿಗೆ ರಂಗಭೂಮಿಯ ಬಗ್ಗೆ ತಾತ್ವಿಕ ತಿಳುವಳಿಕೆ, ಪ್ರಾಯೋಗಿಕ ಅನುಭವ ಎರಡೂ ಅವಶ್ಯವೇ. ಬೀದಿನಾಟಕದ ಕಲಾವಿದನ ನಟನ ಬದ್ಧತೆಯ ಪ್ರಧಾನಗುಣ, ಸಮಾಜದ ಸಾಂಸ್ಕೃತಿಕ ಅನಿವಾರ್ಯತೆಗೆ ತನ್ನನ್ನೂ ತೊಡಗಿಸಿಕೊಳ್ಳುವುದು ಮತ್ತು ಇಡಿಯಾಗಿ ತನ್ನ ವ್ಯಕ್ತಿತ್ವವನ್ನೂ ಕ್ರಮಬದ್ಧಪಡಿಸಿಕೊಳ್ಳುವುದು. ಅಂದರೆ, ಶೈಲೀಕೃತ ಆಂಗಿಕ ವ್ಯಾಯಾಮ, ಮನೋಭೌತಿಕ ಅಭ್ಯಾಸ, ರಂಗಕ್ರೀಡೆ ಎಲ್ಲವೂ ಅವಶ್ಯವೇ. ಯಾಕೆಂದರೆ ಅಭಿನಯ ಎನ್ನುವುದು ಸಿದ್ಧಮಾದರಿಯಲ್ಲ, ರಂಗಕ್ರಿಯೆ ನಡೆದಾಗ ನಟರು ಪ್ರತಿಕ್ಷಣವೂ ಸ್ವಯಂಸ್ಫೂರ್ತಿಯಿಂದ ತಮ್ಮ ಅಭಿನಯದ ಕ್ಷಿತಿಜವನ್ನು ಮೀರಬೇಕಾಗುತ್ತದೆ. ಶಿಸ್ತಿನ ಜೊತೆಗೆ ಹಲವು ಹತ್ತು ವಿಷಯಗಳನ್ನು ತನ್ನೊಳಗೆ ಅಡಗಿಸಿಕೊಂಡಂಥಾ ಈ ರಂಗಭೂಮಿ ವಿಸ್ತೃತವೂ ಹೌದು, ಸಂಕೀರ್ಣವೂ ಹೌದು. ಅಭಿವ್ಯಕ್ತಿ ಸಾಧನವಾಗಿ ಮಾಧ್ಯಮಗಳಲ್ಲೆ ನಾಟಕ ಮನೋವಿಕಾಸಕ್ಕೆ ಪ್ರಬಲವಾದ ಮಾಧ್ಯಮ. ಇಂಥಾ ದೃಶ್ಯಮಾಧ್ಯಮದ ಪ್ರಪಂಚದಲ್ಲಿ ತನ್ನನ್ನು ತೊಡಗಿಸಿಕೊಳ್ಳುವ ಯಾವುದೇ ವ್ಯಕ್ತಿಗೆ, ರಂಗದ ಅಂತರಂಗ ಬಹಿರಂಗವನ್ನರಿವ ಕ್ರಿಯೆ - ಪ್ರಕ್ರಿಯೆಗಳಿಗಾಗಿ ರಂಗಶಿಕ್ಷಣ ಬೇಕೆ ? ಯಾಕೆಂದರೆ ವ್ಯಕ್ತಿಯ ಪ್ರತಿಭೆಯನ್ನು ಅಂತಃಸತ್ವವನ್ನು ಒಂದು ಕ್ರಮಬದ್ಧ ಶಿಸ್ತಿಗೊಳಪಡಿಸುವ, ಖಚಿತ ನಿಲುವಿನಲ್ಲಿ ಮನಸ್ಸು ಹರಿಸುವ ಕೆಲಸವನ್ನು ಈ ಶಿಕ್ಷಣ ಮಾಡುತ್ತದೆ. ಆದ್ದರಿಂದ ಕಲಾವಿದ, ನಟ ಇಲ್ಲಿ ನಿರಂತರ ಶಿಕ್ಷಣ, ನಿರಂತರ ಕಲಿಕೆ, ನಿರಂತರ ಪ್ರಯೋಗಗಳಿಗೆ ತನ್ನನ್ನೊಡ್ಡಿಕೊಳ್ಳುತ್ತ, ಅನುಭವದ ಆವಿಷ್ಕಾರಗಳನ್ನು ತನ್ನೊಳಗಿಳಿಸಿಕೊಳ್ಳುತ್ತ ರಂಗಭೂಮಿಯನ್ನು ಜೀವಂತವಾಗಿಡುವ ಚೇತನವಾಗಬೇಕಾಗುತ್ತದೆ. ಕಲಾವಿದ ಇವೆಲ್ಲವುಗಳನ್ನು ಯಾಕೆ ಮೈಗೂಡಿಸಿಕೊಳ್ಳಬೇಕೆಂದರೆ, ಸಮಾಜ ಸ್ವಾಸ್ಥ್ಯದ ಹೆಬ್ಬಯಕೆಯ ಈ ಕಲಾವಿದ, ಸಾಮಾಜಿಕ ಬದಲಾವಣೆಗೆ ರೆಜಿಮೆಂಟ್ ಆಗಿ ಕೆಲಸಮಾಡಬೇಕಾಗುತ್ತದೆ.

ರಂಗಭೂಮಿ ಎಂಬುದು ಸಮಾಜದ ಓರೆಕೋರೆಗಳನ್ನು ಪ್ರತಿಬಿಂಬಿಸುವ, ಒರೆಗೆ ಹಚ್ಚಿ ಕೆಡುಕಿನ ಬಗ್ಗೆ ಎಚ್ಚರಿಸುವ ಸಮಾಜದ ಕೈಗನ್ನಡಿ ಎಂಬುದು ಇನ್ನೊಂದು ಮುಖ. ವಿಜ್ಞಾನ ಯಾವಾಗಲೂ ನಿಖರತೆ, ಖಚಿತತೆ, ಕ್ಲುಪ್ತತೆಯನ್ನು ಬಯಸಿದಂತೆ, ರಂಗಭೂಮಿ, ಅದರಲ್ಲೇ ವಿಶೇಷವಾಗಿ ಬೀದಿರಂಗ ಭೂಮಿಯು, ಸಮಾಜದ ಕಣ್ಣಾಗಿ, ಕಾಲಕಾಲಕ್ಕೆ ನಿರ್ದಿಷ್ಟವಾದ ಉದ್ದೇಶ ಹಾಗೂ ಖಚಿತವಾದ ಸಂದೇಶವನ್ನು ಸಕಾರಣದೊಂದಿಗೆ ಸಾದರಪಡಿಸುವ ಸಶಕ್ತ ಮಾಧ್ಯಮವಾಗಿ ಕೆಲಸ ಮಾಡುತ್ತದೆ. ಇಂಥ ಸಶಕ್ತ ಮಾಧ್ಯಮದೊಂದಿಗೆ ಒಡನಾಡ ಬಯಸುವ ನಟ ಸಾಮಾಜಿಕ ಬದಲಾವಣೆಯ ಸಂವೇದನೆಯ ಕುಡಿಯಾಗಿ, ದೇಶಿಸಂಸ್ಕೃತಿಯ ತಾಯಿಬೇರಿಗೆ ಮೌಖಿಕಪರಂಪರೆಯ ಮೌಲಿಕಜೀವಧಾರೆಯಾಗ

ಬೇಕಾಗುತ್ತದೆ. ಅವಮಾನವನ್ನು ಸಹಿಸಿಕೊಂಡು ಸಂಯಮ ಮೂರ್ತಿಯಾಗಿರಬೇಕಾಗುತ್ತದೆ. ಯಾಕೆಂದರೆ ಜನರ ಜೊತೆ ಬೆರೆಯಲು, ಸಂವಾದಕ್ಕೆ ಇಳಿಯಲು ಇದಕ್ಕಿಂತ ಉತ್ತಮ ದಾರಿ ಬೇರೆ ಯಾವುದಿದೆ ? ಹಾಗೆಯೇ ಸಮಾಜದ ಮೇಲಾಗುವ ಅನ್ಯಾಯದ ವಿರುದ್ಧ ಜನರನ್ನು ಸಿಡಿದೆಬ್ಬಿಸುವ, ಅನಾಹುತಗಳಿಗೆ ಸ್ಪಂದಿಸುತ್ತ ಪ್ರತಿಕ್ರಿಯೆ ನೀಡುವ ಚಾಲನಬಿಂದುವಾಗಿ ನಟ ಕೆಲಸ ಮಾಡಬೇಕಾಗುತ್ತದೆ. ನಾಟಕ ಅಭಿನಯದ ಕಲೆ. ಇದೇ ಅದಕ್ಕೆ ಜೀವ ಜೀವಾಳವಾದ್ದರಿಂದ ಪ್ರತಿ ಪ್ರಯೋಗಗಳೂ ಜೀವಂತಿಕೆಯಿಂದ ಇರುತ್ತವೆ, ಇರಬೇಕು. ಇದರ ಜಂಗಮ ಗುಣವೇ ಚಲನಶೀಲತೆ. ಆಳುವವರ ಅನ್ಯಾಯದ ವಿರುದ್ಧ ಮುಖಮಾಡಿ ಜನರ ನೋವಿಗೆ ಮಿಡಿದ ಪ್ರಾಣಮಿತ್ರ – ಕೆಳವರ್ಗದವರ ಹಕ್ಕಿಗಾಗಿ ಹೋರಾಡುವ ಅಸ್ತ್ರವಿದು. ಬೀದಿನಾಟಕ ಜನರ ಅಭಿರುಚಿಯನ್ನು ತಣಿಸುವ ಕೆಲಸವನ್ನಷ್ಟೇ ಅಲ್ಲ, ಜನರ ನಡಾವಳಿಗಳನ್ನು ತಿದ್ದುವ ಕೆಲಸವನ್ನೂ ಮಾಡುತ್ತದೆ. ಆದ್ದರಿಂದ ಮಾನಾಪಮಾನಾತೀತನಾದ ನಟ ಇಲ್ಲಿ ಕತ್ತಿಯ ಅಂಚಿನ ಮೇಲೆ ನಡೆದಂತಿರಬೇಕಾಗುತ್ತದೆ.

ನಮ್ಮ ದುಃಖದುಮ್ಮಾನ, ಅನ್ಯಾಯಗಳಿಗೆ ಕಾರಣಗಳನ್ನು ಮತ್ತೆ ಮತ್ತೆ ಎತ್ತಿ ತೋರಿಸುವುದರಿಂದಲೇ ಬೀದಿನಾಟಕವನ್ನು ಪ್ರತಿಭಟನೆಯ ಬೀಜ ಎನ್ನುತ್ತೇವೆ, ಜೀವಂತ ವೃತ್ತಪತ್ರಿಕೆ ಎನ್ನುತ್ತೇವೆ. ಸಮುದಾಯ, ಇಪ್ಟಾ, ಜನಮ್‌ನಂತಹ ಸಂಘಟನೆಗಳು ಈ ಕೆಲಸ ಮಾಡುತ್ತಲೇ ಬಂದಿವೆ. ಆದರೆ ಈಗ ಅವುಗಳ ಜವಾಬ್ದಾರಿಯೂ ಹೆಚ್ಚಿದೆ, ಬದ್ಧತೆಯೂ ಹೆಚ್ಚಾಗಬೇಕಿದೆ. ಇಡೀ ವಿಶ್ವದಾದ್ಯಂತ ಬೀದಿನಾಟಕ ಜನರಿಗೆ ಕೊಟ್ಟದ್ದು ಪ್ರತಿಭಟನೆಯ ಧ್ವನಿಯನ್ನು, ಕೇಳುವ ಹಕ್ಕನ್ನು ಹಾಗೂ ಬದುಕಿನ ಮೌಲಿಕ ವ್ಯವಸ್ಥೆಯನ್ನು. ಆದರೆ ಇಂದು ಬೀದಿನಾಟಕ ಸಾಧಿಸಲೇಬೇಕಾದ ಅನಿವಾರ್ಯಕ್ಕೆ ಮುಖ ಒಡ್ಡಲೇಬೇಕಾಗಿದೆ. ಬೇರೆ ದಾರಿ ಇಲ್ಲ. ಕೆ. ವೈ. ನಾರಾಯಣಸ್ವಾಮಿ ಹೇಳುವಂತೆ, 'ಇಂದು ಎಂಥಾ ಮನಸ್ಥಿತಿಯನ್ನೂ ಅಲುಗಿಸಬಲ್ಲ, ಎಂಥಾ ಅನುಭಾವಿಕನನ್ನೂ ಆಶೆಬುರುಕನನ್ನಾಗಿ ಮಾಡಬಲ್ಲ, ಸ್ವಾರ್ಥದ ಲೇಪವಿಲ್ಲದೆ ಸಾಮೂಹಿಕವಾಗಿ ಆಲೋಚಿಸಲೂ ನಿರಾಕರಿಸುವ ಇವತ್ತಿನ ವಿಚ್ಛಿದ್ರಕಾರಿಗಳ ವಿರುದ್ಧ ನಟರಷ್ಟೇ ಅಲ್ಲ ಸೃಜನಶೀಲರೆಲ್ಲರೂ ಬೀದಿಗಿಳಿಯಲೇಬೇಕಾಗಿದೆ, 'ಸಮುದಾಯ', 'ಇಪ್ಟಾ', 'ಜನಮ್' ನಂತಹ ಸಂಘಟನೆಗಳೂ ಈ ಆಶಯಗಳಿಗಾಗಿ ತಮ್ಮ ಇತಿಮಿತಿಯಲ್ಲಿ ಪ್ರಯತ್ನಿಸುತ್ತಿವೆ. ಆದರೆ ಕೋಮುವಾದಿಗಳ ರೆಜಿಮೆಂಟ್ ವಿರುದ್ಧ ಸಾಧಿಸಬೇಕಾಗಿರುವ, ಕೋಮುವಾದಿಗಳ ತುರ್ತು ಅವಸಾನಕ್ಕೆ ಅಗತ್ಯವಾಗಿರುವ ಬಿರುಸಿನ ಚಟುವಟಿಕೆಗಳು ಇನ್ನೂ ಚುರುಕುಗೊಳ್ಳಬೇಕಾಗಿದೆ. ಈ ನಿಟ್ಟಿನಲ್ಲಿ ಆ ಸಂಘಟನೆಗಳು ಮಾಡುತ್ತಿರುವ ಪ್ರಯತ್ನ ಸಾಲದೆಂಬುದು ನಿಜವೆ. ಆದರೆ ಸಾಮಾಜಿಕ ಬದ್ಧತೆಯ ಬಗ್ಗೆ ಅವು ನೀಡಿರುವ ಸ್ಪಂದನವನ್ನು ಯಾರೂ ಅಲ್ಲಗಳೆಯಲಾರರು.

ಸಿದ್ಧಾಂತದ ಬಗ್ಗೆ ಗೊಂದಲಗಳಿರಲಿ, ಸಂಘಟಕರ ಬಗ್ಗೆ ಸಂಶಯಗಳಿರಲಿ, ಆಡಳಿತ, ಹಣಕಾಸಿನ ಬಗ್ಗೆ ಸಾವಿರ ಪ್ರಶ್ನೆಗಳಿರಲಿ, ಚರ್ಚೆ, ಸ್ವವಿಮರ್ಶೆ, ಕಾರ್ಯಾಗಾರಗಳ ಮೂಲಕ ಎಲ್ಲವನ್ನೂ ಬಗೆಹರಿಸಿಕೊಳ್ಳಬಹುದು. ಆದರೆ ನಂಬಿಕೆಯ ಪ್ರಶ್ನೆ ಬಂದಾಗ, ಸಮಾಜದ ಬದುಕಿನ ಹಕ್ಕಿಗಾಗಿ ಜನಪರರೆಲ್ಲರೂ ಒಂದಾಗಿ ಕೋಮುವಾದಿಗಳ ವಿರುದ್ಧ ನಿಂತು ಸೆಡ್ಡು ಹೊಡೆಯಬೇಕು, ಚಳುವಳಿಯ ಮೂಲಕವೇ ಯಶಸ್ಸನ್ನು ಸಮಾಜಕ್ಕೆ ಕೊಡಬೇಕು. ಪ್ರತಿಯೊಬ್ಬ ವ್ಯಕ್ತಿ ಮೊದಲು ತಾನಾಗಿ, ತಾನು ಸಂಘಟನೆಯಾಗಿ, ಸಂಘಟಕರೇ ತಾವಾಗಿ ತಾದಾತ್ಮ್ಯತೆಯಿಂದ ಇರಬೇಕಾಗುತ್ತದೆ. ವ್ಯಷ್ಟಿಗೆ ಸಮಷ್ಟಿಯ ಅರ್ಥ ಬರುವುದು ಇದರಿಂದಲೇ. ಇನ್ನು ಬೀದಿನಾಟಕದ ಪ್ರಾತ್ಯಕ್ಷಿಕೆಯ ಪರಿಣಾಮದ ಬಗ್ಗೆ ಹೇಳುವುದಾದರೆ, ಬೀದಿನಾಟಕಕಾರ ದಿ॥ ಸಾಫ್ದಾರ ಹಶ್ಮಿ ಸಾಹಿಬಾಬದನಲ್ಲಿ 'ಹಲ್ಲಾ ಬೋಲ್' ನಾಟಕ ಮಾಡುವಾಗಲೇ ಅವನ ಕೊಲೆಯಾಯಿತು. ಮರುದಿನವೇ ಅದೇ ಜಾಗದಲ್ಲಿ ಅದೇ ಕಲಾವಿದರು, ಅದೇ ನಾಟಕವಾಡಿ, ಸರ್ಕಾರದ ವಿರುದ್ಧ ಸಿಡಿದೆದ್ದು, ಆ ಪರಿಣಾಮ ಇಡೀ ದೇಶದ ಸೃಜನಶೀಲರ ಮನಸ್ಸುಗಳನ್ನು ಒಟ್ಟಾಗಿಸಿದ್ದು, ದೇಶದಾದ್ಯಂತ ಸರ್ಕಾರದ ವಿರುದ್ದ ಧ್ವನಿ ಎದ್ದದ್ದು, ಬೀದಿನಾಟಕದ ಪರಿಣಾಮದ ಪ್ರತೀಕವಲ್ಲದೆ ಮತ್ತೇನು ? ಹಾಗೆಯೇ, ಸಮುದಾಯದ ಜನಾಂದೋಲನ ಜಾಥಾ ಸಂವೇದನೆಗಳಲ್ಲಿ ಮುಖ್ಯವಾಗಿ ಹೆಸರಿಸಬೇಕಾದ ಬೀದಿನಾಟಕಗಳೆಂದರೆ ಬೆಲ್ಚಿ, ಪತ್ರೆ ಸಂಗಪ್ಪನ ಕೊಲೆ, ಬೆಳೆದವರು, ಹೊಸ ಮೌಲ್ಯಗಳತ್ತ ಜಾಥಾ, ನೂರು ಅಡಿಗಳ ಬಣ್ಣದ ನಡೆ, ಬರದ ಬಯಲಾಟ, ಕೇಸರಿ ಬಿಳಿ ಹಸಿರು ಇವೆಲ್ಲವು ಮಾಡಿದ ಪರಿಣಾಮ ಜನರ ಸ್ಪಂದನಕ್ಕೆ ಸಾಕ್ಷಿ. ಪಂಜಾಬಿನ ಬೀದಿನಾಟಕಕಾರ ಗುರುಶರಣ್ ಸಿಂಗ್ ಹೇಳಿದ್ದು, 'ಬೀದಿನಾಟಕದ ಕಲಾವಿದರೊಂದಿಗೆ ಬೀದಿಗಿಳಿಯೋದು ಅಂದ್ರೆ ಮೆಶಿನ್‌ಗನ್‌ಗಳಿಗೆ ಎದೆಯೊಡ್ಡಿದಂತೆ.'

ಎಲ್ಲಿಂದಲೋ ಒಂದು ಫೋನ್ ಬರುತ್ತೆ, ನಿಮ್ಮನ್ನು ಮುಗಿಸ್ತೀವಿ ಅಂತ. ಪ್ರೊಸಿನಿಯಂ ರಂಗಭೂಮಿ ಎದುರಿಸದ ಬೆದರಿಕೆ, ಹಲ್ಲೆಗಳನ್ನು ಬೀದಿನಾಟಕ ಯಾಕೆ ಎದುರಿಸಿ ಎದೆಕೊಟ್ಟು ನಿಲ್ಲುತ್ತದೆ ? ಇದಕ್ಕೆ ಉತ್ತರ ಎಂದರೆ ಬೀದಿನಾಟಕಕ್ಕಿರುವ ವಿಶೇಷ ಮಹತ್ವ ಮತ್ತು ಅದರ ಶಕ್ತಿ.

ಬೀದಿನಾಟಕಗಳ ಪರಿಣಾಮದಿಂದಾಗಿ ಜನರ ಮನಸ್ಸಿನಲ್ಲಿ ಜಾಗೃತಿಯ ಸಂವೇದನೆ ಮೂಡುವುದರಿಂದ ಆಳುವ ವರ್ಗದ ಕೆಂಗಣ್ಣು ಸಂಘಟನೆಯ ಮೇಲೆ, ಸಂಘಟನೆಯಲ್ಲಿ ಕೆಲಸಮಾಡುವ ಕಾರ್ಯಕರ್ತ, ಕಲಾವಿದ, ನಟನ ಮೇಲೆ ಇದ್ದೇ ಇರುತ್ತದೆ. ಯಾಕೆಂದರೆ, ಜನರ ಅಸ್ಪಷ್ಟತೆಯನ್ನು ಸ್ಪಷ್ಟಪಡಿಸುತ್ತ ಅವರ ಸಿಟ್ಟು ಸೆಡುವುಗಳಿಗೆ ಹೋರಾಟದ ರೂಪು ನೀಡುವ ಈ ಬೀದಿನಾಟಕಗಳು ಹರಿಸುವ ಉಗ್ರ ಪ್ರತಿಭಟನೆಯ ಕಾವನ್ನು ತಾಳಿಕೊಳ್ಳುವುದು ಆಳುವ ವರ್ಗಕ್ಕೆ ಸಾಧ್ಯವಾಗುವುದಿಲ್ಲ. ಸಾಂಸ್ಕೃತಿಕ ರಂಗದ ಒಂದಿಷ್ಟು ಕಿರಿಕಿರಿಯನ್ನೇ ಸಹಿಸದ ಸರ್ಕಾರ, ನಾಟಕಗಳ ಮೇಲೆ ಸೆನ್ಸಾರ್‌ಶಿಪ್ ಕಾಯಿದೆ ಹೇರುವ ಸರ್ಕಾರ, ಬೀದಿನಾಟಕಗಳನ್ನು ತಾಳಿಕೊಳ್ಳುವುದಾದರೂ ಹೇಗೆ ?

ಬೀದಿನಾಟಕಗಳನ್ನು ನಿರ್ಬಂಧಿಸಲು ಪ್ರಸಕ್ತ ಯಾವುದೇ ಕಾನೂನುಗಳಿಲ್ಲದಿರುವುದರಿಂದ ಪೊಲೀಸರು ಈ ನಾಟಕಗಳ ಧ್ವನಿ ಅಡಗಿಸಲು, ಕಲಾವಿದರ ಸಂವೇದನೆಯ ಸದ್ದಡಗಿಸಲು, ತಮ್ಮಲ್ಲಿರುವ ನಿಯಮಗಳನ್ನೆಲ್ಲಾ ತಿರುವಿಹಾಕಿ, ಸಂಚಾರಕ್ಕೆ ಅಡ್ಡಿ ಎಂಬ ನಿಯಮವನ್ನೋ, ನಿಷೇಧಾಜ್ಞೆ ಎಂಬ ಕಾನೂನನ್ನೋ ಮುಂದೆ ಮಾಡಿ, ಕಲಾವಿದರನ್ನು ಬಂಧಿಸುವ, ನಾಟಕ ಆಡದಂತೆ ತಡೆಯುವ ಪ್ರಯತ್ನ ನಡೆಸುತ್ತಾರೆ. ಈ ನಿಟ್ಟಿನಲ್ಲಿ ಮೊನ್ನೆ ದತ್ತಜಯಂತಿಯಂದು (೨-೧೨-೦೩) ಕೋಮುವಾದಿಗಳಿಗೆ ಅವಕಾಶ ಕೊಟ್ಟ ಕರ್ನಾಟಕ ಸರ್ಕಾರ, ಕರ್ನಾಟಕದ ಜನತೆಗೆ ಮಾಡಿದ ದ್ರೋಹ ಎಂದೇ ಚರಿತ್ರೆಯಲ್ಲಿ ದಾಖಲಿಸಬೇಕಾಗಿದೆ. ಜನಾಂದೋಲನ ಯಾವತ್ತೂ ಯಾರಿಂದಲೂ ನಿಲ್ಲುವುದಿಲ್ಲ. ಮೂಡಿಗೆರೆಯಲ್ಲಿ 'ಇಪ್ಟಾ'ದ ಕಲಾವಿದರ ಮೇಲೆ ತೀವ್ರ ಹಲ್ಲೆಯಾಗಿ ಎಲ್ಲರೂ ದವಾಖಾನೆ ಸೇರಿದ್ದರು. ಮಂಗಳೂರಿನಲ್ಲಿ 'ಸಂಕೇತ' ತಂಡದವರ ಬೀದಿನಾಟಕೋತ್ಸವಕ್ಕೆ ಬರಬೇಕಾಗಿದ್ದ ತಂಡ ಇದು. ಕೋಮುಸೌಹಾರ್ದತೆಗಾಗಿ ದುಡಿದ ಕಾರ್ಯಕರ್ತರ, ಕಲಾವಿದರ ಮೇಲೆ ಆದ ಈ ಹಲ್ಲೆಯನ್ನು ಖಂಡಿಸಿ ನೋವು ನುಂಗಿಕೊಂಡು, ನಾವು ಡಾ॥ ಮರುಳಸಿದ್ದಪ್ಪ, ಸಿ. ಬಸವಲಿಂಗಯ್ಯ, ಸುಧಾನಂದ ಇನ್ನೂ ನೂರಾರು ಕಲಾವಿದರು, ಸಂಘಟಕರು ಹಾಡಿನ ಮೂಲಕ ಉತ್ತರ ಕೊಟ್ಟದ್ದು:

ಜಗದ ಮನುಷ್ಯರಿಗಾಗಿ ಹಲವು ಸಮಸ್ಯೆಗಳ ಕುಂಡ ಹೊತ್ತು
ನಾವು ಮುಳ್ಳ ತುಳಿಯುತ್ತೇವ.

ನಮ್ಮ ಬಾಳಿನ ರಕ್ತಗಾಲಿನ ಹಾಡ ಬರೆಯುತ್ತೇವ
ನಾವು ಮನಸ ಕಟ್ಟುತ್ತೇವ
ನಾವು ಕನಸ ಕಟ್ಟುತ್ತೇವ
ನಾವು ಒಡೆದ ಮನಸುಗಳ ಒಂದು ಮಾಡತ್ತೇವ... ಎಂದು

ಆದ್ದರಿಂದ ಜನಾಂದೋಲನದ ರೂವಾರಿಯಾದ ನಟನು, ಗೂಂಡಾಗಿರಿ, ನಿಷೇಧಾಜ್ಞೆ, ಪೊಲೀಸರ ದಬ್ಬಾಳಿಕೆಗಳಂತಹ ಗೊಡ್ಡುಬೆದರಿಕೆಗೆ ಎದೆ ಒಡ್ಡಿ ನಿಲ್ಲಬೇಕಾದರೆ, ಸಿದ್ಧಾಂತದ ಮೇಲೆ ನಂಬಿಕೆ ಇಡಬೇಕು. ಅದನ್ನು ಸಾಧಿಸಲು ಬದ್ಧತೆ ಬೇಕು. ಇದಕ್ಕಾಗಿ ಕೈ, ಬಾಯಿ, ಕಚ್ಚೆ ಭದ್ರ ಇರಬೇಕಾಗುತ್ತದೆ. ಅದಕ್ಕಿಂತ ಮುಖ್ಯ ಪ್ರಾಮಾಣಿಕತೆ.

ಶಂಕರಯ್ಯಾ ಆರ್. ಘಂಟಿ
ನಂ. ಡಿ - ೧೨, ಸ್ಟಾಫ್ ಕ್ವಾರ್ಟರ್ಸ್, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ - ೫೮೫ ೧೦೬



ಜುಲೈ 29ರಂದು ಬೆಂಗಳೂರಿನ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ವರ್ಲ್ಡ್ ಕಲ್ಚರ್ ಸಭಾಂಗಣದಲ್ಲಿ ಶ್ರೀಮತಿ ಗೀತಾ ವಿಶ್ವನಾಥ್ ಅವರ 'ಎಲೆ ಮರೆಯ ಹಣ್ಣುಗಳು' ಕೃತಿಯನ್ನು ಖ್ಯಾತ ಸಾಹಿತಿ ಶ್ರೀ ವ್ಯಾಸರಾಯ ಬಲ್ಲಾಳರು ಬಿಡುಗಡೆ ಮಾಡಿದರು. ಲೇಖಕಿ ಶ್ರೀಮತಿ ಎಚ್. ಎಸ್. ಪಾರ್ವತಿ ಕೃತಿ ಪರಿಚಯ ಮಾಡಿಕೊಟ್ಟರು. ಚಿತ್ರದಲ್ಲಿ ಶ್ರೀ ಆರ್. ಎಸ್. ರಾಜಾರಾಮ್, ಶ್ರೀ ವ್ಯಾಸರಾಯ ಬಲ್ಲಾಳ, ಶ್ರೀಮತಿ ಎಚ್. ಎಸ್. ಪಾರ್ವತಿ ಮತ್ತು ಶ್ರೀಮತಿ ಗೀತಾ ವಿಶ್ವನಾಥ್.

## ಮಹಿಳೆಯರ ವಿಮೋಚನೆಗಾಗಿ ಹೋರಾಡಿದ

# ಡಾ|| ಬಿ. ಆರ್. ಅಂಬೇಡ್ಕರ್

ಇಡೀ ಪ್ರಪಂಚದಲ್ಲಿ ಮಹಿಳಾ ಚಳುವಳಿಯ ಹೋರಾಟದ ಮುಖ್ಯ ಧ್ಯೇಯವೆಂದರೆ, ಮಹಿಳೆಯರ ಸಮಾನತೆ. ಅದಕ್ಕಾಗಿ ಅಗತ್ಯವಾದ ಕಾನೂನಿಗಾಗಿ ಮತ್ತು ದೇಶದ ಎಲ್ಲಾ ಕೋಮಿನವರಿಗೂ ಒಂದೇ ರೀತಿಯ ಕಾನೂನು ಇರಬೇಕೆಂಬುದಕ್ಕಾಗಿ ಸಮಗ್ರ ಹೋರಾಟ ಬೇಕಾಗಿದೆ. ಆದ್ದರಿಂದ ಸಮಾನ ನಾಗರಿಕತೆಯ ಅಗತ್ಯತೆ ತುಂಬಾ ಇದೆ. ಹಾಗೆಂದು ಭಾರತದ ಸಂವಿಧಾನದಲ್ಲಿಯೇ ಹೇಳಲಾಗಿದೆ. ಇದಕ್ಕೆ ಪೂರಕವಾಗಿ ರಾಜ್ಯಗಳಿಗೆ ಮಾರ್ಗದರ್ಶನ ನೀಡುವುದಕ್ಕಾಗಿ ರಾಜ್ಯನೀತಿ ನಿರ್ದೇಶಕ ತತ್ವಗಳನ್ನು ರೂಪಿಸಲಾಗಿದೆ. ಆ ಪ್ರಕಾರ ರಾಜ್ಯದ ಜನರಿಗೆ ಸಮಾನ ರೀತಿಯ ಸಾಮಾಜಿಕ-ಆರ್ಥಿಕ ಅಭಿವೃದ್ಧಿಗಾಗಿ ರಾಜ್ಯ ಸರ್ಕಾರಗಳು ಶ್ರಮಿಸಬೇಕೆಂದು ಈ ರಾಜ್ಯನೀತಿ ನಿರ್ದೇಶಕ ತತ್ವಗಳ ಆಶಯವಾಗಿದೆ.

ವೈಯಕ್ತಿಕ ಕಾನೂನುಗಳಲ್ಲಿ ಅದರಲ್ಲೂ ಮಹಿಳೆಯರ ವಿಚಾರಗಳಿಗೆ ಸಂಬಂಧಿಸಿದಂತೆ, ಮದುವೆ ಕಾನೂನು, ವಿಚ್ಛೇದನ ಕಾನೂನು, ಮಕ್ಕಳ ಅಭಿರಕ್ಷೆ ಕಾನೂನುಗಳಲ್ಲಿ ಅಸಮಾನತೆ ಇರುವುದು ಒಂದು ರೀತಿಯಲ್ಲಿ ಮಹಿಳೆಯರ ಸ್ಥಾನಮಾನದ ಅಧೋಗತಿಗೆ ಕಾರಣವೆಂದೇ ಹೇಳಬಹುದಾಗಿದೆ. ಇದೊಂದು ರೀತಿಯಲ್ಲಿ ಧಾರ್ಮಿಕ ಹಿನ್ನೆಲೆಯನ್ನು ಆಧಾರವಾಗಿಟ್ಟುಕೊಂಡು ಕಾನೂನುಗಳು ರಚಿಸಲ್ಪಟ್ಟಿರುವುದನ್ನು ಕಾಣುತ್ತೇವೆ. ಹಿಂದೂ, ಮುಸ್ಲಿಂ, ಕ್ರೈಸ್ತ ಧರ್ಮಗಳಲ್ಲಿನ ಕಾನೂನುಗಳು ಆಯಾ ಧರ್ಮದ ಆಚರಣೆಗಳಿಗೆ, ಯಾವುದೇ ಧಕ್ಕೆಯಾಗದಂತೆ ಇರುವಂತಹವು. ಅಂದಾಗ ಈ ಧರ್ಮದ ಆಧಾರದಲ್ಲಿ ಜಾರಿಗೆ ಬಂದಂತಹ ಕಾನೂನುಗಳು ಎಷ್ಟರಮಟ್ಟಿಗೆ ಮಹಿಳಾಪರವಾಗಿವೆ ಎಂಬುದನ್ನು ಅವಲೋಕಿಸಬೇಕಾಗಿದೆ.

ಧರ್ಮವೆಂದಾಕ್ಷಣ, ಯಾವುದೇ ಧರ್ಮವು ಮಹಿಳೆಯರ ವಿಚಾರದಲ್ಲಿ ಅಷ್ಟೇನೂ ಉದಾರವಾದ ಭಾವನೆಯನ್ನು ಹೊಂದಿಲ್ಲದಿರುವುದೇ ಮೊದಲನೆಯ ತಪ್ಪು. ಅಂಥಲ್ಲಿ ಪುರುಷಪ್ರಧಾನ ಮೌಲ್ಯಗಳನ್ನು ಎತ್ತಿಹಿಡಿಯುವ ಈ ಧರ್ಮಗಳು ಮಹಿಳೆಯ ಸಮಸ್ಯೆಗಳನ್ನು ಎಷ್ಟರಮಟ್ಟಿಗೆ ಮುಂದಿಟ್ಟುಕೊಂಡು ಅವರ ಒಳಿತಿಗಾಗಿ ಕಾನೂನುಗಳನ್ನು ರಚಿಸಲು ಪ್ರಯತ್ನಪಟ್ಟಿವೆ ಎಂಬುದು ಮುಖ್ಯವಾದ ಪ್ರಶ್ನೆ. ಧರ್ಮ ಯಾವತ್ತೂ ಮಹಿಳೆಯರನ್ನು ಉನ್ನತ ಮಟ್ಟದಲ್ಲಿ ನೋಡಿಯೇ ಇಲ್ಲ. ಅವು ಯಾವಾಗಲೂ ಪುರುಷರ ಪರವಾದ ನೀತಿನಿಯಮಗಳಿಗೆ ಬದ್ಧವಾಗಿರುವಂಥವು. ಈ ವೈಯಕ್ತಿಕ ಕಾನೂನುಗಳಿಂದ ಪುರುಷರ ಹಕ್ಕುಗಳಿಗೇನೂ ಚ್ಯುತಿ ಬಂದಿಲ್ಲ. ಅನ್ಯಾಯವಾಗಿರುವುದು ಮಹಿಳೆಯರಿಗೆ ಮಾತ್ರ.

ಸಂವಿಧಾನಶಿಲ್ಪಿ ಡಾ|| ಬಿ. ಆರ್. ಅಂಬೇಡ್ಕರ್ ಅವರೂ ಕೂಡ ಇದಕ್ಕೆ ಒತ್ತು ನೀಡುತ್ತಾ ಮದುವೆ ಹಾಗೂ ವಾರಸುದಾರ ಹಕ್ಕಿಗೆ ಸಂಬಂಧಿಸಿದಂತೆ ಮಾತ್ರ ಸಮಾನ ಕಾನೂನುಗಳು ಜಾರಿಯಾಗಬೇಕಾದ ಅವಶ್ಯಕತೆ ಇದೆ ಎಂದಿದ್ದರು. ಈ ಬಗ್ಗೆ ಹೋರಾಡಿದರು ಕೂಡ. ಆದರೆ ನತದೃಷ್ಟ ಸಂಗತಿಯೆಂದರೆ ಈ ಹಿಂದೂ ಕೋಡ್ ಬಿಲ್ ಹಿಂದೂ ಸಮಾಜವನ್ನು ಸುಧಾರಿಸುವ, ಮುಖ್ಯವಾಗಿ ಮಹಿಳೆಯರನ್ನು ಗುಲಾಮಗಿರಿಯಿಂದ ಮೇಲೆತ್ತುವ ದೃಷ್ಟಿಯಿಂದ ಅವರ ಪರವಾಗಿ ಪ್ರತಿಪಾದಿಸಲ್ಪಟ್ಟಂತಹ ಅಂಬೇಡ್ಕರರ ಈ ವಿಚಾರಗಳನ್ನು (ಬದಲಾವಣೆಗಳನ್ನು) ಪಾರ್ಲಿಮೆಂಟಿನ ಯಾವ ಮಡಿವಂತ ಸದಸ್ಯರೂ ಅಂಬೇಡ್ಕರರನ್ನು ಬೆಂಬಲಿಸದಿದ್ದ ಕಾರಣ, ಹಿಂದೂ ಕೋಡ್ ಬಿಲ್ ಪಾರ್ಲಿಮೆಂಟಿನಲ್ಲಿ ಸೋಲನ್ನನುಭವಿಸಿತು. ಆ ಕ್ಷಣದಲ್ಲಿ ಅಂಬೇಡ್ಕರರು ಕಾನೂನು ಮಂತ್ರಿ ಸ್ಥಾನಕ್ಕೆ ರಾಜಿನಾಮೆ ಸಲ್ಲಿಸಿ ಹೊರಬಂದುದು ಎಲ್ಲರಿಗೂ ತಿಳಿದ ವಿಷಯ.

ಮಹಿಳೆಯರ ಸ್ವಾತಂತ್ರ್ಯಕ್ಕಾಗಿ ತಮ್ಮ ವೈಯಕ್ತಿಕ ಸ್ಥಾನಮಾನಗಳನ್ನು ಕಡೆಗಣಿಸಿ ಹೋರಾಡಿದ ಅಂಬೇಡ್ಕರ್ ಮಹಿಳಾಪರ ಕಾಳಜಿಯುಳ್ಳ ಒಬ್ಬ ಮಹಾನ್ ವ್ಯಕ್ತಿಯಾಗಿ ನಮ್ಮ ಕಣ್ಣಮುಂದೆ ನಿಲ್ಲುತ್ತಾರೆ.

ಪಂಡಿತ ಜವಹರಲಾಲ್ ನೆಹರೂ ಅವರ ಸಚಿವ ಸಂಪುಟದ ಕಾನೂನು ಮಂತ್ರಿಯಾಗಿ ಸಂವಿಧಾನ ರಚನಾ ಕಾರ್ಯವನ್ನು ಕೈಗೆತ್ತಿಕೊಂಡ ಅಂಬೇಡ್ಕರರು ಹಿಂದೂ ಕೋಡ್ ಬಿಲ್ಲನ್ನು ಮಂಡಿಸುತ್ತಾರೆ. ಏಕಪತ್ನಿತ್ವ ಮತ್ತು ವಿಚ್ಛೇದನಾ ಸ್ವಾತಂತ್ರ್ಯ, ಆಸ್ತಿ ಹಕ್ಕು, ಸಮಾನ ಉದ್ಯೋಗಾವಕಾಶ ಮತ್ತು ವೇತನ ಮುಂತಾದ ಸ್ತ್ರೀಪರ ಅಂಶಗಳುಳ್ಳ ಹಿಂದು ಕೋಡ್ ಬಿಲ್ ಅವರ ಸ್ತ್ರೀಪರ ಕಾಳಜಿಗೆ ಸಾಕ್ಷಿಯಾಗಿದೆ.

ಹಿಂದೂ ಮಹಿಳೆಯರನ್ನು ಕುರಿತ ವಿವಾಹ, ಉತ್ತರಾಧಿಕಾರ ಮತ್ತಿತರ ೪ ಮಹತ್ವದ ಮಸೂದೆಗಳನ್ನು ಮಂಡಿಸಿದ ಅಂಬೇಡ್ಕರರು ಅವುಗಳನ್ನು ಪಾರ್ಲಿಮೆಂಟಿನ ಎರಡೂ ಸದನಗಳಲ್ಲಿ ಅಂಗೀಕಾರ ಪಡೆಯುವಲ್ಲಿ ಯಶಸ್ವಿಯಾಗುತ್ತಾರೆ.

ಈ ಕಾನೂನುಗಳಿಂದ ಇಂದು ಮಹಿಳೆಯರು ತಮ್ಮ ಸ್ವತಂತ್ರ ವ್ಯಕ್ತಿತ್ವವನ್ನು ಪಡೆಯಲು ಸಾಧ್ಯವಾಗಿದ್ದು, ಮನುವಿನ ಕ್ರೂರ ಕಾನೂನಿನ ಕೊಂಡಿಗಳನ್ನು ಕಳಚಿಕೊಂಡು ಸಮಾನತೆಯ ಬದುಕಿಗೆ ನಾಂದಿ ಹಾಡಲು ಅನುವಾದವು. ಅಲ್ಲದೆ ಅವು ಹಿಂದೂ ಮೂಲಭೂತವಾದಿಗಳಿಗೆ ಸವಾಲಾಗಿ ರೂಪುಗೊಂಡವು. ಅದರಿಂದಾಗಿಯೇ ೧೯೫೫ರ ಹಿಂದೂ ವಿವಾಹ ಕಾನೂನಿಗೆ ಇಂದು ದ್ವಿಪತ್ನಿತ್ವವು ಶಿಕ್ಷಾರ್ಹ ಅಪರಾಧವೆಂದೇ ಘೋಷಿಸಲ್ಪಟ್ಟಿರುವುದು. ಹಾಗೇ ೧೯೫೬ರ ಉತ್ತರಾಧಿಕಾರದ ಕಾನೂನಿನಲ್ಲಿ ವಿಧವೆಯರು ಗಂಡು ಮಗನನ್ನಾಗಲಿ, ಹೆಣ್ಣು ಮಗಳನ್ನಾಗಲಿ ದತ್ತು ತೆಗೆದುಕೊಳ್ಳುವ ಹಕ್ಕು ಸಿಗುವಂತಾಯಿತು. ಆದರೆ ಈ ಸ್ವಾತಂತ್ರ್ಯ ಹಿಂದೂ ಕಾನೂನಿನಲ್ಲಿ ಅದಕ್ಕೆ ಮುಂಚೆ ಇರಲಿಲ್ಲವೆಂಬುದು ಗಮನಾರ್ಹ.

ಧರ್ಮಶಾಸ್ತ್ರಗಳ ಕಾಲದಲ್ಲಿದ್ದ ಮನುವಿನ ವಿಚಾರಗಳನ್ನು, ಮಹಿಳೆಯರ ಬಗ್ಗೆ ಇದ್ದ ಕೀಳು ಭಾವನೆಗಳನ್ನು ಖಂಡಿಸುತ್ತಾ ಅಂಬೇಡ್ಕರರು "ವೇದಗಳ ಕಾಲವನ್ನು ಪುನರ್ ಪರಿಶೀಲಿಸುತ್ತಾ ಮೈತ್ರೇಯಿ, ಗಾರ್ಗಿ, ಸುಲಭ ಇವರೆಲ್ಲರೂ ಪುರುಷರ ಸಮನಾಗಿ ಸಾರ್ವಜನಿಕ ವೇದಿಕೆಗಳಲ್ಲಿ, ಚರ್ಚಾಗೋಷ್ಠಿಗಳಲ್ಲಿ, ವಿಚಾರ-ವಿವಾದಗಳಲ್ಲಿ ಭಾಗವಹಿಸುತ್ತಿದ್ದುದನ್ನು ಚರಿತ್ರೆಯಲ್ಲಿ ಕಾಣುತ್ತೇವೆ. ಪಾಣಿನಿಯ ಪ್ರಕಾರ ಮಹಿಳೆಯರು ವೇದಾಧ್ಯಯನವನ್ನಲ್ಲದೆ, ವೇದಬೋಧನೆಯನ್ನು ಸಹ ಮಾಡುತ್ತಿದ್ದರೆಂಬುದಾಗಿ ತಿಳಿದುಬರುತ್ತದೆ" ಎನ್ನುತ್ತಾರೆ. ಮುಂದೆ ಕೌಟಿಲ್ಯನ ಕಾಲದ ಮಹಿಳೆಯರ ವೈವಾಹಿಕ ವಿಚಾರವನ್ನು ತೆಗೆದುಕೊಂಡರೆ, ಕ್ರೂರಿಯಾದ ಗಂಡನಿಂದ ಮಹಿಳೆ ವಿಚ್ಛೇದನ ಪಡೆಯುವ ಸ್ವಾತಂತ್ರ್ಯ ಹೊಂದಿದ್ದಳೆಂಬುದಾಗಿ ತಿಳಿಯುತ್ತದೆ. ಆದರೆ ಸ್ತ್ರೀ ದ್ವೇಷಿ ಮನು ಮಾತ್ರ ಮಹಿಳೆಯರನ್ನು ಇಷ್ಟೊಂದು ಕೀಳು ದೃಷ್ಟಿ ಹಾಗೂ ಹೀನಾಯವಾದ ಭಾವನೆಗಳಿಂದ ಅವರನ್ನು ಪ್ರಾಣಿಗಳಿಗಿಂತಲೂ ಕಡೆಯೆಂದು ತಿಳಿಸುವ ಮೂಲಕ ಅನೇಕ ರೀತಿಯ ಸಾಮಾಜಿಕ ಹಾಗೂ ಧಾರ್ಮಿಕ ಕಟ್ಟುಪಾಡುಗಳನ್ನು ಕಾನೂನುಗಳನ್ನಾಗಿ ಹೇರಿ ಅವರ ಸ್ವಾತಂತ್ರ್ಯಹರಣ ಮಾಡಲು ಕಾರಣಗಳೇನು ?

ವೇದಕಾಲದಲ್ಲಾಗಲಿ, ಕೌಟಿಲ್ಯನ ಕಾಲದಲ್ಲಿಯಾಗಲಿ ಮನುವಿಗಿಂತ ಹಿಂದಿನ ಸಾಮಾಜಿಕ ವ್ಯವಸ್ಥೆಯಲ್ಲಿಯೇ ಮಹಿಳೆಯರು ಇಷ್ಟೊಂದು ಉನ್ನತ ಮಟ್ಟದ ಸ್ಥಾನವನ್ನು ಹೊಂದಿದವರಾಗಿದ್ದಾರೆ. ಎಷ್ಟೋ ಶತಮಾನಗಳ ನಂತರದ ಮನುವಿನ ಕಾಲದಲ್ಲಿ ಮಾತ್ರ ಮಹಿಳೆಯರ ಸ್ಥಾನ ಅಧೋಗತಿಗೆ ಇಳಿಯಲು ಕಾರಣಗಳೇನು? ಎಂದು ಅಂಬೇಡ್ಕರವರು ಪ್ರಶ್ನಿಸುತ್ತಾರೆ.

ಸಮಾಜದಲ್ಲಿ ಮಹಿಳೆಯರಿಗೆ ವಿಧಿಸಲ್ಪಟ್ಟಿದ್ದ ವಿಚಾರಗಳು ಮೂಲತಃ ಬ್ರಾಹ್ಮಣರ ಆಚರಣೆಗಳಾಗಿದ್ದವು, ಅವುಗಳನ್ನು ಸಂರಕ್ಷಿಸುವ ದೃಷ್ಟಿಯಿಂದ ಮನುವು ಅವೆಲ್ಲವನ್ನೂ ಇಡೀ ಸಮಾಜ ಒಪ್ಪಿತ/ಹೇರಲ್ಪಟ್ಟ ಶಾಸನಗಳನ್ನಾಗಿ ಪರಿಗಣಿಸುವಂತಹ ಪರಿಸ್ಥಿತಿ ಉಂಟಾಯಿತು. ಮತ್ತೊಂದು ಅಂಶ – ಅಂದಿನ ಸಂಗತಿಯ ಪ್ರಕಾರ ಶೂದ್ರರು ಮತ್ತು ಮಹಿಳೆಯರು ಅತ್ಯಂತ ಹೆಚ್ಚಿನ ಸಂಖ್ಯೆಯಲ್ಲಿದ್ದವರಾದ್ದರಿಂದ, ಅವರಲ್ಲಿ ಬೌದ್ಧಧರ್ಮವನ್ನು ಅವಲಂಬಿಸಿ, ಬ್ರಾಹ್ಮಣ ಧರ್ಮವನ್ನು ಅಧೋಗತಿಗೆ ಇಳಿಸುವರೆಂಬ ಭಯದಿಂದ, ಮಹಿಳೆಯರು ಬುದ್ಧನ ಮಾರ್ಗವನ್ನು ಅನುಸರಿಸಲು ಆಗದಂತೆ ಶಾಸ್ತ್ರೀಯವಾಗಿ ತಡೆಯನ್ನು ಉಂಟುಮಾಡುವುದೇ ಮನುವಿನ ಗುರಿಯಾಗಿತ್ತೆಂಬುದು ಇಲ್ಲಿ ನಿಸ್ಸಂಶಯ. ಈ ಎರಡೂ ಕಾರಣಗಳಿಂದಾಗಿ ಮಹಿಳೆಯರನ್ನು ಸಾಂಪ್ರದಾಯಿಕ ಕಟ್ಟುಪಾಡುಗಳಿಂದ ಧರ್ಮದ ಸಂಕೋಲೆಯಿಂದ ಬಿಡಿಸಿಕೊಳ್ಳಲಾರದಂತೆ ಹಿಡಿದಿಟ್ಟಿರುವುದೆಂಬುದಾಗಿ ತಿಳಿಯುತ್ತದೆ.

ಒಟ್ಟಾರೆ ಅಂದಿನ ಸಮಾಜದ ಮೂಲಭೂತವಾದಿಗಳ ದುರುದ್ದೇಶಗಳನ್ನು ಬಯಲಿಗೆಳೆಯುವುದೇ ಅಂಬೇಡ್ಕರರ ಉದ್ದೇಶವಾಗಿತ್ತೆಂದು ಹೇಳಬಹುದು. ಆ ಮೂಲಕ ಮಹಿಳೆಯರಿಗೆ ಸ್ವತಂತ್ರ ವ್ಯಕ್ತಿತ್ವ ನಿರ್ಮಾಣ ಮಾಡುವುದೇ ಅವರ ಗುರಿಯಾಗಿತ್ತೆಂಬುದರಲ್ಲಿ ಕಿಂಚಿತ್ತೂ ಸಂಶಯವಿಲ್ಲ.

ಇವರು ಹೋರಾಟ ಮಾಡಿದ ಹೆಚ್ಚಿನ ವಿಚಾರಗಳಲ್ಲಿ ಸಂಪೂರ್ಣ ಸ್ವಾತಂತ್ರ್ಯ, ಸಮಾನತೆ ಅವಕಾಶಗಳನ್ನು ಪಡೆದುಕೊಳ್ಳುವುದರಿಂದ ವಂಚಿತರಾಗಿದ್ದವರು ಹೆಚ್ಚಿನ ಮಂದಿ ಸವರ್ಣೀಯರೇ ಹೊರತು ಇತರೇ ಕೆಳವರ್ಗದವರಾದಂತಹ ಅಸ್ಪೃಶ್ಯರಾಗಲಿ, ದಲಿತರಾಗಲಿ ಅಲ್ಲವೇ ಅಲ್ಲ. ಏಕೆಂದರೆ ಆಸ್ತಿಯಾಗಲಿ, ಶಿಕ್ಷಣವಾಗಲಿ ಇವರಿಗೆ ಎಟುಕದೇ ಇದ್ದ ವಿಚಾರಗಳು. ಇದರಿಂದ ಲಾಭ ಪಡೆಯುತ್ತಿದ್ದವರು ಬ್ರಾಹ್ಮಣರು, ಇತರೇ ಮೇಲ್ವರ್ಗದವರೇ ಆಗಿದ್ದರೂ ಒಂದು ಪ್ರಾಣಿ ಜೀವನಕ್ಕಿಂತಲೂ ಕಡೆಗಣಿಸಿದ ಅಸ್ಪೃಶ್ಯರಿಗಾಗಲಿ, ದಲಿತರಿಗಾಗಲಿ, ವ್ಯಕ್ತಿಸ್ವಾತಂತ್ರ್ಯವೆಂಬುದೇ ಇಲ್ಲದಂತಹ ಸಂದರ್ಭದಲ್ಲಿ ಮಹಿಳೆಯರ ಪರವಾದ ಇವರ ಎಲ್ಲಾ ಹೋರಾಟಗಳು ದಲಿತ ಮಹಿಳೆಯರನ್ನು ಅಸ್ಪೃಶ್ಯರನ್ನು ಹೊರತಾಗಿಸಿಯೇ ಇದ್ದವು. ಮೇಲು-ಕೀಳೆಂಬ ಭೇದವೆಣಿಸದೆ, ಜಾತಿ-ಧರ್ಮಗಳೆಂದು ಯೋಚಿಸದೆ ಇಡೀ ಭಾರತೀಯ ಮಹಿಳೆಯರ ಪರವಾಗಿ ಅಂಬೇಡ್ಕರ್ ಅವರು ನಿಂತರು ಎಂಬುದಕ್ಕೆ ಬೇರೆ ಯಾವ ಸಾಕ್ಷ್ಯಾಧಾರಗಳೂ ಬೇಕಿಲ್ಲ.

■ ಡಾ|| ಎಸ್. ಎಂ. ಮಂಗಳ




# ಬೇಂದ್ರೆ ಕಾವ್ಯಗಳಲ್ಲಿ ಒಲವಿನ ಚಿತ್ರಣ

**ಕ**ನ್ನಡ ಕಾವ್ಯ ಸಂದರ್ಭದಲ್ಲಿ ದ. ರಾ. ಬೇಂದ್ರೆ ವಿಶಿಷ್ಟ ವ್ಯಕ್ತಿತ್ವದ ಕವಿ. ಪರಂಪರೆಯೊಂದಿಗೆ ರಾಜಿಯಾಗುವ ಸಂದರ್ಭದಲ್ಲೇ ಅದರಾಚೆ ನಿಂತು ಸಮಾಜಮುಖಿ ಆಗಬಲ್ಲವರಾಗಿದ್ದವರು. ಕಾವ್ಯ ಅನ್ನುವುದು ವಿಚಾರದ ಮಾತಲ್ಲ, ಭಾವದ ಮಾತು. ಬದುಕಿನ ಮಾತಾಗಿ ತಮ್ಮಲ್ಲೇ ಅಳವಡಿಸಿಕೊಂಡವರು. ಜೀವನದಲ್ಲಿ ನಿರಂತರ ನೋವು ಉಂಡರೂ 'ಒಲವೇ ನಮ್ಮ ಬದುಕು' ಎಂದು ಪ್ರೀತಿಸಿದವರು. ಅವರ ಕಾವ್ಯದ ಜೀವಾಳವೇ 'ಒಲವಿ'ನಲ್ಲಿ ಅಡಗಿದೆ. ಆ ಒಲವಿನ ಮಾಯಾಕಿನ್ನರಿಯನ್ನು ಹಿಡಿವ ಸಣ್ಣ ಪ್ರಯತ್ನ ಇಲ್ಲಿದೆ.

ಬೇಂದ್ರೆಗೆ ಒಲವು ಏಕಕೇಂದ್ರಿತವಲ್ಲ. ಗಂಡು-ಹೆಣ್ಣಿನ, ತಾಯಿ-ತಂದೆಯರ, ಸ್ನೇಹಿತರ ಒಟ್ಟು ವ್ಯವಸ್ಥೆಯಲ್ಲಿ ಅದನ್ನು ಗುರುತಿಸುತ್ತಾರೆ. ಭೂಮಿತಾಯಿ ಒಲವಿನ ಮೂರ್ತಿ. ಆಕೆ ಪ್ರೇಮದ ನವನವೋನ್ವಿತ ರೂಪ. 'ಪ್ರೇಮಬೀಜ' ಕವನದ ಮೂಲಕ ಭೂಮಿತಾಯಿ ತನ್ನ ಮಕ್ಕಳಿಗೆ ಪ್ರೇಮದ ಅವಶ್ಯಕತೆಯನ್ನು ಮತ್ತೆ ಮತ್ತೆ ನೆನಪಿಸುವುದು ಒಲವೆಂಬ ಬಳ್ಳಿಯ ಅನಂತತೆಯನ್ನು ತೋರಿಸುತ್ತದೆ. ಅವರ ಒಲವಿನ ಅಂತಿಮ ಹಂತ ಅನುಭಾವಿಯ ನೆಲೆಗೆ ತಲುಪುವುದು ವಿಶೇಷ. ಬೇಂದ್ರೆ ಕಾವ್ಯಗಳ ನರ್ತನದ ನಡಿಗೆಯಲ್ಲಿ ಆಧ್ಯಾತ್ಮದ ಅನುಭೂತಿ ಇದೆ. ಕಾವ್ಯ ಕೇವಲ ಓದಿಸಿಕೊಂಡು ಹೋಗದೆ ದಿವ್ಯತ್ವವನ್ನು ಓದುಗರಲ್ಲಿ ಉಂಟುಮಾಡುತ್ತದೆ. ಅಂತಹ ಕಾವ್ಯಗಳಲ್ಲಿ ಪ್ರೇಮವೇ ಅನುಭಾವಿಯ ಅನುಭವ ರೋಚಕತೆಯನ್ನು ಕಟ್ಟಿಕೊಡುತ್ತದೆ.

ಅವರ ಕಾವ್ಯಗಳು ಕುಲಧರ್ಮದಾಚೆ ತಮ್ಮ ಶ್ರೇಷ್ಠತೆಯನ್ನು ಹೇಳುತ್ತಿರುತ್ತವೆ. ಪರಂಪರೆಯ ಬಂಧಿಯಾದಾಗಲೂ ಅದರಾಚೆಗಿನ ವಿಚಾರದ ಮೂಲಕ ಸಾಮಾಜಿಕ ಕಾಣ್ಕೆ ಸಲ್ಲಿಸಿದ ಕವಿ ಅವರು.

''ವಿಧಿಯಿತ್ತ ಕುಲ ಡೊಂಕು, ನನ್ನ ಪ್ರೀತಿಯು ಡೊಂಕೆ ರಸಿಕ ಪೇಳೊ''

(ರಸಿಕ ಪೇಳೊ!)

ಹೆಣ್ಣು ಅತ್ಯಂತ ಅರ್ಥವತ್ತಾಗಿ ಇಲ್ಲಿ ಮಾತಾಡಿದ್ದಾಳೆ. ಕುಲದ ಆಚೆಗೆ ಆ ಒಲವು ಅರಳಿದ್ದು, 'ವಿಧಿ'ಯ ಭ್ರಮೆಯಲ್ಲಿರುವ ನಮ್ಮನ್ನು ಎಚ್ಚರಿಸುತ್ತದೆ. ಪ್ರೀತಿ ಸದಾ ಅರಳುವ ನೆನಪಿನ ಗಣಿ ಎಂಬ ಮಾತು ಕವಿಯ ಹೊಸ ದೃಷ್ಟಿಯನ್ನು ಹೇಳುತ್ತದೆ.

ಗಂಡು-ಹೆಣ್ಣಿನ ಕಾಮಕೇಂದ್ರಿತ ಮನಸ್ಸನ್ನು ಒಲವಿನ ಆಶಯದ ಹಿನ್ನೆಲೆಯಲ್ಲಿ ಕಟ್ಟಿಕೊಡುವ ಕವಿ 'ಒಲವಿನ' ಇನ್ನೊಂದು ಮಗ್ಗುಲನ್ನು ಸೊಗಸಾಗಿ ನಿರೂಪಿಸುತ್ತಾರೆ.

*ಸೆರಗು ಒಂದು ಅಲೆದಾಡುತ್ತಿತ್ತೊ ಹೊಳಿಮ್ಯಾಗ*
*ಬೆರಗು ಬಂದು ನಲಿದಾಡುತ್ತಿತ್ತೊ ಹೊಳಿಮಾಗ*

(ವಾರಿನೋಟ)

ಈ ವಾರಿನೋಟವೇ ಆಕರ್ಷಣೆಯ ಪರಮಾವಧಿ. ಅಂತಹ ಆಕರ್ಷಣೆಯು ಹೊಳೆದಂಡೆಯ ಮೇಲೆ ನಡೆಯುವುದು ನಿರಂತರವಾದಾಗ ಅಲ್ಲಿನ ಬಣ್ಣವೇ ಬೇರೆ. ಸೆರಗು-ಬೆರಗು ಕೂಡಿ ನಲಿದಾಡುವ ಪ್ರೇಮದ ಹಬ್ಬ ಇಲ್ಲಿದೆ. ಬೇಂದ್ರೆ ಕಾವ್ಯಗಳಲ್ಲಿ ಶಬ್ದದ ಕುಣಿತ, ಭಾವದ ನಿರ್ಭಿಡತೆ ಕಾಣುತ್ತದೆ. ಹೇಳುವ, ಹಾಡುವ ಒಂದೊಂದು ನುಡಿ ಆಸ್ವಾದನಾ ಯೋಗ್ಯ, ಅಲ್ಲಿ ಕಾಮದ ಉತ್ಕಟತೆ ಇಲ್ಲ, ಬಂಧುರತೆ ಇದೆ. ಭಾವದ ಬೇಸರವಿಲ್ಲ, ಬದುಕಿನ ನೋಟವಿದೆ.

*ಆತ ಕೊಟ್ಟ ವಸ್ತು ಒಡವೆ*
*ನನಗೆ ಅವಗೆ ಗೊತ್ತು.*
*ತೋಳುಗಳಿಗೆ ತೋಳಬಂದಿ*
*ಕೆನ್ನೆ ತುಂಬ ಮುತ್ತು.*

(ನಾನು ಬಡವಿ)

ಒಲವಿಗೆ ಎಲ್ಲಿಯ ಬಡತನ? ಇಂಥದೊಂದು ಪ್ರಶ್ನೆ ಬೇಂದ್ರೆ ಎದುರಿಸಿರಬಹುದೇ? ಗಂಡು-ಹೆಣ್ಣು, ವಸ್ತು-ಒಡವೆ ಆಚೆಗಿನ ಬದುಕನ್ನು ಸವಿಯುವ ಸುಖ ಇಲ್ಲಿದೆ. ಕ್ಷಣಿಕ ಸುಖದ ವಸ್ತುಗಳಿಗಿಂತ ನಿರಂತರ ಆನಂದದ 'ಮುತ್ತಿನ ನೆನಪು' ಬದುಕನ್ನು ಹಸನಾಗಿ ಇರಿಸುತ್ತದೆ. ಒಲವು ಆಧ್ಯಾತ್ಮದ ಹಂತಕ್ಕೇರುವುದು ಇಂತಹ ಸಂದರ್ಭದಲ್ಲಿ. ಇದನ್ನು ಕಾಮ-ಪ್ರೇಮದ 'ಪರಿವರ್ತನೆಯ ಕ್ರಿಯೆ' ಎಂದು ವಿಮರ್ಶಕರು ಗುರುತಿಸುತ್ತಾರೆ.

ಸದ್ಯದ ಜೀವನದ ರಾಜಕೀಯ, ಮಾನಸಿಕ, ಸಾಮಾಜಿಕ, ಬೌದ್ಧಿಕ ಸಂಘರ್ಷಗಳನ್ನು ಒಲವಿನ ಮೂಲಕ ಗೆಲ್ಲಬಹುದು ಎಂಬ ಆಶಯ ಕವಿಯದು. ಅವರ ಕಾವ್ಯದ ನಿಜವಾದ ನಿಲುವು ಕೂಡ ಅದೇ.

*ಬಂಗಾರದ ಮಾಡದಿಂದ*
*ಸಿಂಗಾರದ ಮಳೆಗರಸೇನ*
*ಹ್ಯಾಂಗಾರ ಕಣ್ಣನ ಸೆತ್ತಿ*
*ಒಮ್ಮೆ ನೋಡ, ಒಮ್ಮೆ ನೋಡ.*

(ಬಡವರ ಮಗಳು)

ಇದೊಂದು ಆಸೆಯ ಕಾವ್ಯ. ಜೀವನ ಹಸನು ಮಾಡುವ ಪರಿ. ಯಾವ ನೋವೂ ನಿರಂತರವಾಗ ಬಾರದು. ಒಲವು ಅಲ್ಲಿ ಬೆರೆಯಬೇಕು. ಯಾವುದೇ ರೂಪದಲ್ಲಾದರೂ ಹೊಸತನ್ನ ಕಣ್ಣೆತ್ತಿ ನೋಡಬೇಕು. ಈ ಹಿನ್ನೆಲೆಯಲ್ಲಿ ಪ್ರಚಲಿತ ಸಂಘರ್ಷಗಳಿಗೆ ನಾವು ಪರಿಹಾರ ಕಂಡುಕೊಳ್ಳಬಹುದು. ನಿರೀಕ್ಷೆಗಳಲ್ಲಿ ಬದುಕು ಸಾಗಬೇಕೆಂಬುದು ಕಾವ್ಯದ ನೋಟವಾಗಿದೆ. ಇಷ್ಟೆಲ್ಲ ಇದ್ದಾಗ್ಯೂ ಪ್ರೀತಿಯಲ್ಲಿ ಒಮ್ಮೊಮ್ಮೆ ಕೊರತೆಗಳು ಅಟ್ಟಿಸಿಕೊಂಡು ಬರುತ್ತವೆ. ಅದು ಆಧುನಿಕ (ಈಗಿನ) ಯುಗದಲ್ಲಿ ಸರ್ವಸಾಧಾರಣವಾಗಿದೆ. ಅವಸರದ ಬದುಕಿನಲ್ಲಿ, ನಾವು ಕಳೆದುಹೋಗುತ್ತಿರುವ ದಿನಗಳಲ್ಲಿ ಮತ್ತೆ ಒಲವಿನ ಕಾವ್ಯಗಳತ್ತ ದೃಷ್ಟಿ ಹಾಯಿಸಬೇಕಾಗಿದೆ.

*ಬಂತ್ಯಾಕ ನಿಮಗ ಇಂದ ಮುನಿಸು*
*ಬೀಳಲಿಲ್ಲ ನಮಗ ಇದರ ಕನಸು*
*ರಾಯಾ ತಿಳಿಯಲಿಲ್ಲ ನಿಮ್ಮ ಮನಸು*
*ನೀವು ಹೊರಟಿದ್ದೀಗ ಎಲ್ಲಿಗ.*

(ಗಮಾಗಮಾಗಮಾಡಸತಾವ ಮಲ್ಲಿಗಿ)

ಈ ದಿನಗಳಲ್ಲಿ ನಾವು ಮತ್ತೆ ಒಲವಿನ ಕನಸುಗಳತ್ತ ಚಲಿಸಬೇಕು. ಮನಸ್ಸು ಅರ್ಥವಾಗಬೇಕಾದ ಕ್ರಿಯೆಯಾಗಬೇಕಾಗಿದೆ. ಸಿಟ್ಟು, ಸೆಡವಿನಿಂದ ಮುದುಡಿದ ಮನಸಿನಾಚೆ ''ರಸವೇ ಜನನ, ವಿರಸ ಮರಣ, ಸಮರಸವೇ ಜೀವನ'' ಎಂದು ಹಾಡಬೇಕಾಗಿದೆ. ಕಾವ್ಯದ ನಿಜವಾದ ಕಳಕಳಿ ಮನಸ್ಸನ್ನು ಬೆಸೆಯುವುದು ಆಗಿದ್ದರೆ ಅದು ಚಿರಂತನವಾದುದು. ದಕ್ಷಿಣ ಆಫ್ರಿಕಾದ ಕಪ್ಪು ಹಾಡಿಗೂ ಕನ್ನಡ ಹಾಡಿಗೂ ಸೇತುವೆಯಾಗಬೇಕಾದದ್ದು ಒಲವೊಂದೆ. ಪಾಕಿನ ಧೋರಣೆ ಭಾರತದ ಹಠಮಾರಿತನ ಬಿಡಿಸಿ ಬೆಸೆಯುವ ಕೊಂಡಿ ಒಲವು. ಆದರೆ! ಕಾವ್ಯದ ಮಾತು ಕೆಲಸವಿಲ್ಲದವರ ಹರಟೆ ಎಂದು ಜರಿಯುವವರ ಮಧ್ಯೆ ರಾಜಕೀಯ ದಾಟದ ಹೊಸ ಬೆಳವಣಿಗೆಗಳು ಅಸಾಧ್ಯವೇ ಆಗಿದೆ.

ಬದುಕನ್ನು, ಈ ಸಮಾಜವನ್ನು ಉತ್ಕಟವಾಗಿ ಅನುಭವಿಸಬೇಕು, ಅಲ್ಲೆಲ್ಲ ಒಲವಿನ ಬೀಜವನ್ನು ಬಿತ್ತಬೇಕು ಎಂದ ಪ್ರತಿಯೊಬ್ಬ ಮಾನವಪ್ರೇಮಿ.

*ಅಂತಿರಲಿ*
*ಇಂತಿರಲಿ*
*ನಿಂತಲ್ಲಿ ನಿಂತಿರಲಿ*
*ಸಂತೆಯ ಬೆಂತಿರಲಿ – ಕುಣಿ*
*ಕಣ್ಒಳಗ ಹೊರಳಿಸಿ*
*ಎದೆ ಮುಗುಳನರಳಿಸಿ*
*ಹೂ ನೀರನುರುಳಿಸಿ – ಕುಣಿ*

(ಕುಣಿಯೋಣ ಬಾರಾ)

ಇದು ಅಂತಿಂಥ ಕುಣಿತವಲ್ಲ, 'ಗಾಳೀಗೂ ಹಗುರಾಗಿ' ಕುಣಿವ ಅದಮ್ಯ ನೃತ್ಯ. ಇಲ್ಲಿ ಪ್ರಣಯದ ಉತ್ಕರ್ಷತೆ ಇದ್ದಾಗ್ಯೂ, ಅನುಭಾವದ ಮಿಳಿತವಿದೆ. ಬಂಧನದ ವಿಮುಕ್ತಿಯ ಜೊತೆಗೆ ಚೈತನ್ಯದ ಸೆಳೆತವಿದೆ. ಈ ಬಂಧನದ ಬದುಕನ್ನು ಹಗುರಾಗಿ ಮಾಡುವ ನಿರಂತರ ಜವಾಬ್ದಾರಿ ಈ ಕಾವ್ಯ ಹೊತ್ತಿದೆ. ಅದರ ಓದು ನಮ್ಮ ಮನದ ಹನದ ಹಸಿರಿನ ತೇರಾಗಬಲ್ಲುದು. ಕವಿ ಮತ್ತು ಸಹೃದಯರ ನಡುವಿನ ಸೇತುವೆಯೇ ಕಾವ್ಯ ಎಂಬುದು ಬೇಂದ್ರೆ ನಿಲುವು. ಆ ಕಾವ್ಯದ ಓದುವಿಕೆಗೆ ನಮ್ಮನ್ನು ತೊಡಗಿಸಿಕೊಂಡಾಗ ಜಗದ ಜಂಜಡದಿಂದ ಮುಕ್ತವಾದಂತೆ ಎಂಬ ಭಾವ ಬರುತ್ತದೆ. ಭರವಸೆಗಳು ಹೊಸತಾಗಿ ಕಾಣಿಸಲಾರಂಭಿಸುತ್ತವೆ. ಜೀವನ ನಶ್ವರವಲ್ಲ, ಇಲ್ಲೆ ಏನಾದರೂ ಸಾಧಿಸೋಣ ಎಂಬ ಛಲ ಮೂಡುತ್ತದೆ. ಇಂಥ ಸ್ಥಿತಿಗೆ ತಲುಪಿಸುವ ಜವಾಬ್ದಾರಿ ಕವಿಗಿದೆ. ಪ್ರಕೃತಿ - ಪುರುಷರನ್ನು ನಿಸರ್ಗದ ಜತೆಗಿಟ್ಟು ಅದರ ಸೌಂದರ್ಯವನ್ನು ವರ್ಣನೆಯಲ್ಲಿ ಮುಗಿಸಿಬಿಡುವುದಿಲ್ಲ.

*ತಿರುತಿರುಗಿಯ ಹೊಸತಾಗಿರಿ*
*ಎನುತಿದೆ ಋತುಗಾನ* (ರಾಗರತಿ)

ಬೇಂದ್ರೆಯವರ ಪ್ರತಿಭೆ ಹೊಸತನ್ನ ಸದಾ ಎತ್ತಿ ತೋರಿಸುತ್ತದೆ. ಒಲವಿನ ಜತೆಗೆ ಬದುಕಿನ ಅನಂತ ಮುಖಗಳನ್ನು ಅವರು ನೀಡುತ್ತಾರೆ. ಅವರ ಕಾವ್ಯದಲ್ಲಿ ಬರುವ ಊಹೆಯಾಗಲಿ ಕಲ್ಪನೆಯಾಗಲಿ ಬರಿಯ ಉತ್ಪ್ರೇಕ್ಷೆಯಾಗಿ ನಿಲ್ಲದೆ ಹೀಗೆ ಚಿತ್ರಗಳಿಗೆ ಸಜೀವತೆಯನ್ನು, ಪಾತ್ರಗಳಿಗೆ ಅಭಿನಯವನ್ನು ನೀಡುತ್ತದೆ.

*ಬಿದಿಗೆ ಚಂದ್ರನಾ ಚೊಗಚೀ ನಗಿ ಹೂ*
*ಮೆಲ್ಲಗ ಮೂಡಿತ್ತ*
*ಮ್ಯಾಲಕ ಬೆಳ್ಳಿನ ಕೂಡಿತ್ತ* (ರಾಗರತಿ)

**ಕಾರಗಡಿ ಶಿವರಾಮ್**

*ಭೂರಂಗಕೆ ಅಭಿಸಾರಕೆ ಕರೆಯುತ*
*ತಿಂಗಳು ತಿಂಗಳು ಕಳೆಯುತಿದೆ.*
*ತುಂಬುತ ತುಳುಕುತ ತೀರುತ ತನ್ನೊಳು*
*ತಾನೆ ಸವಿಯನು ಸವಿಯುತಿದೆ.*

(ಅನಂತ ಪ್ರಣಯ)

ಇಂತಹ ಉತ್ಕಟ ಕಾವ್ಯಭಾಗದ, ಕಾಮಕ್ರೀಡೆಗೆ ಪ್ರಚೋದಿಸುವ ಕಾವ್ಯ ಕೂಡ ಎಲ್ಲೂ ಔಚಿತ್ಯ ಮೀರಿಲ್ಲ. ಅದು ನಮ್ಮಲ್ಲೆ ಕುಣಿದು ಹಾಗೆಯೇ ನಿರಂತರ ಕ್ರಿಯೆಯಾಗಿ ಮಾರ್ಪಡುತ್ತದೆ.

ರಂ. ಶ್ರೀ. ಮುಗಳಿ ಹೇಳುವಂತೆ. ''ಬೇಂದ್ರೆಯವರ ಕಾವ್ಯದಲ್ಲಿ ಹಿಂದೆಂದೂ ಕಾಣದಿದ್ದ ಒಂದು ಸಮನ್ವಿತವಾದ ಜೀವನ ದರ್ಶನವಿದೆ. ವಿಶ್ವಪ್ರಜ್ಞೆ ಇದೆ. ನಿರ್ಮಿತಿಯ ಸಹಜ ಸಂಪನ್ನತೆಯಿದೆ.'' ಈ ಮಾತನ್ನು ಈಗ ಅನೇಕರಿಗೆ ವಿಸ್ತರಿಸಬಹುದಾದರೂ 'ಒಲವಿನ ನೋಟ'ದಲ್ಲಿ ಬದುಕನ್ನು ಅರಿಯುವ ಕ್ರಮದಲ್ಲಿ ಬೇಂದ್ರೆ ಮೊದಲಾಗುತ್ತಾರೆ. ಕಾಲನ ಹೊಡೆತದಿಂದ ಸವೆಯುತ್ತಿರುವ ಈ ದೇಹಕ್ಕೆ ಒಲವಿನ ಸಂಜೀವಿನಿ ನೀಡಿದವರು ಬೇಂದ್ರೆ. ಕಾವ್ಯ ಯಾವಾಗಲೂ ವಿಶ್ವಪ್ರಜ್ಞೆಯತ್ತ ಹೆಜ್ಜೆ ಇಡಬೇಕು. ಅದೂ ದೇಸಿ ಸೊಗಡಿನೊಂದಿಗೆ. ಜಾಗತಿಕ ಸಮಸ್ಯೆಗಳು ಅತಿ ಯಾಗುತ್ತಿರುವಾಗ ಒಲವಿನ ಅರ್ಥಕ್ಕೆ ಹುತ್ತ ಕಟ್ಟದೇ ಹೋಗಬಹುದು. ಆದರೆ, ಅನುಭವದ ಒಲವಿನ ಭಾವ ಚಿರಂತನ. ಕೋಲ್‌ರಿಜ್ ಹೇಳಿದ : ''ಮಾತಿನ ಚಮತ್ಕಾರ ಕಾವ್ಯವನ್ನು ಉದಾತ್ತ ಶಿಖರಕ್ಕೇರಿಸುತ್ತದೆ.'' ಈ ಮಾತು ಬೇಂದ್ರೆ ಕಾವ್ಯಕ್ಕಂತೂ ಸಂಪೂರ್ಣ ಅನ್ವಯವಾಗುತ್ತದೆ. ನವೋದಯ ಸಂದರ್ಭದಲ್ಲಿ ರಚಿತವಾದ ಬೇಂದ್ರೆ ಕಾವ್ಯಗಳ ಪ್ರಸ್ತುತ ಚರ್ಚೆ ಸ್ಪಷ್ಟವಾಗಿದೆ. ಕನ್ನಡನಾಡು ಸೇರಿದಂತೆ ವಿಶ್ವ ಇಂದು ಕ್ಷೋಭೆಗೊಳಗಾಗಿದೆ. ಇರಾಕಿನ ಮಾನವಹತ್ಯೆ, ರಾಜಕೀಯ ಕಪಟತನ, ಅಮೆರಿಕದ ಯಾಜಮಾನ್ಯ ಜನಸಾಮಾನ್ಯರನ್ನು ಹೈರಾಣಾಗಿಸಿದೆ. ಇವರಲ್ಲಿ ಪ್ರೀತಿ-ಕರುಣೆ ಮಾಯವಾಗಿದೆ. ಇದರ ಇನ್ನೊಂದು ರೂಪವಾಗಿ ಒಲವು ಅವರಿಗೆ ಲಭಿಸಲಿ ಎಂಬುದು ಆಶಯ. ಒಲವೆಂಬ ಹೊತ್ತಿಗೆಯ ಓದ ಬಯಸುವ ನಾವು ಈ ನಾಡನ್ನು, ಬದುಕನ್ನು ಹೆಚ್ಚು ಮಾನವೀಯಗೊಳಿಸಿಕೊಳ್ಳಬೇಕಾದ ಅಗತ್ಯವಿದೆ. ಶೈಕ್ಷಣಿಕ ಶಿಸ್ತಿನಲ್ಲಿ ಒದ್ದಾಡುವ ನಾವು ಹೆಚ್ಚು ಸಂವೇದನಾಶೀಲರಾಗ ಬೇಕಾಗಿದೆ. ನವೋದಯ ಸಂದರ್ಭದಲ್ಲಿ ಇದ್ದಂತಹ ಜೀವನ ಪ್ರೀತಿ, ಪ್ರಕೃತಿ ದೃಷ್ಟಿ, ಮಾನವೀಯತೆ ೨೧ನೇ ಶತಮಾನದ ಪ್ರಾರಂಭದಲ್ಲಿರುವ ನಾವು ಮೈಗೂಡಿಸಿ ಕೊಳ್ಳಬೇಕಾಗಿದೆ. ಒಲವನ್ನು ಅರಳಿಸುವ ಮೂಲಕ ನಾವು ಕಾವ್ಯ ನ್ಯಾಯ ಒದಗಿಸಿದಂತೆ, ಬದುಕನ್ನು ಕಟ್ಟುವ ಕ್ರಿಯೆಯಲ್ಲಿ ಜಾಗತಿಕವಾಗಿ ಕೈ ಜೋಡಿಸಬೇಕಾಗಿದೆ. ಆಗ ಬೇಂದ್ರೆ ಕಾವ್ಯದಲ್ಲಿರುವ ಸರ್ವ ಜೀವದೃಷ್ಟಿ ಮತ್ತು ಪ್ರಕೃತಿ ಪ್ರೀತಿ ಜತೆಗೆ ಆಳವಾದ ಪ್ರಜ್ಞೆ ಮತ್ತು ಆಧ್ಯಾತ್ಮಿಕತೆ ನಮ್ಮದಾಗುತ್ತದೆ.

**ಕಾರಗಡಿ ಶಿವರಾಮ್**
ಹನಿಯ (ಅಂಚೆ) - ೫೭೭ ೪೧೮
ಹೊಸನಗರ ತಾ., ಶಿವಮೊಗ್ಗ ಜಿ.

## ಸಾದರ ಸ್ವೀಕಾರ

**ಸ್ವರ್ಣ ಸಂಪಿಗೆ** (ಹೈಕುಗಳು) ಜಿ. ಆರ್. ಪರಿಮಳಾ ರಾವ್
*ಪುಟ : ೩೨* *ಬೆಲೆ : ರೂ. ೨೦*

**ಋತುಗಾನ** (ಹೈಕುಗಳು) ಜಿ. ಆರ್. ಪರಿಮಳಾ ರಾವ್
*ಪುಟ : ೪೦* *ಬೆಲೆ : ರೂ. ೨೫*

**ನಕ್ಷತ್ರ ನಕ್ಕಾಗ** (ಹನಿಗವನಗಳು)
ಜಿ. ಆರ್. ಪರಿಮಳಾ ರಾವ್
*ಪುಟ : ೪೮* *ಬೆಲೆ : ರೂ. ೨೫*

**ಗೋಲಗುಮ್ಮಟ** (ಮಕ್ಕಳ ಕವಿತೆಗಳು)
ರಾಜಶೇಖರ ಕುಕ್ಕುಂದಾ
*ಪುಟ : ೫೬* *ಬೆಲೆ : ರೂ. ೨೫*

**ಹಿಮಕಿನ್ನರಿ** (ಮಕ್ಕಳ ವೈಜ್ಞಾನಿಕ ಕಾಲ್ಪನಿಕ ಕಾದಂಬರಿ)
ಕಿರಣ್ ಪ್ರಸಾದ್ ಆರ್.
*ಪುಟ : ೮೮* *ಬೆಲೆ : ರೂ. ೩೫*

**ಅಂಕಗಣಿತ** (ಶೀಘ್ರ ಸ್ವಯಂಕಲಿಕಾ ಕೈಪಿಡಿ) ಟಿ. ಪಿ. ಲಿಂಗಪ್ಪ
*ಪುಟ : ೧೩೨* *ಬೆಲೆ : ರೂ. ೫೦*

**ಬೀಜಗಣಿತ** (ಶೀಘ್ರ ಸ್ವಯಂಕಲಿಕಾ ಕೈಪಿಡಿ) ಟಿ. ಪಿ. ಲಿಂಗಪ್ಪ
*ಪುಟ : ೧೧೨* *ಬೆಲೆ : ರೂ. ೪೦*

**ರೇಖಾಗಣಿತ** (ಶೀಘ್ರ ಸ್ವಯಂಕಲಿಕಾ ಕೈಪಿಡಿ) ಟಿ. ಪಿ. ಲಿಂಗಪ್ಪ
*ಪುಟ : ೮೪* *ಬೆಲೆ : ರೂ. ೩೦*

**ಶುಕ್ರ ಗ್ರಹದ ಸಂಕ್ರಮಣ** ಡಾ॥ ಬಿ. ಎಸ್. ಶೈಲಜಾ
*ಪುಟ : ೫೬* *ಬೆಲೆ : ರೂ. ೩೦*

ಮೇಲಿನ ಒಂಬತ್ತು ಪುಸ್ತಕಗಳ ಪ್ರಕಾಶಕರು
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ.ಲಿ., ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

**ಮಾತೃಪ್ರಧಾನ ಪರಿಕಲ್ಪನೆ**
ಡಾ॥ ಶೈಲಜಾ ಹಿರೇಮಠ
*ಪುಟ : ೪೦* *ಬೆಲೆ : ರೂ. ೧೦*
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

**ಬೆಂಗಳೂರಿನಲ್ಲಿ ಮಹಾತ್ಮಾ ಗಾಂಧಿ** (ಲೇಖನಗಳು)
ವೇಮಗಲ್ ಸೋಮಶೇಖರ್
*ಪುಟ : ೨೦೮* *ಬೆಲೆ : ರೂ. ೯೦*

**ಗಾಂಧೀಜಿ ಹೇಳಿದ್ದೇನು, ನಾವು ಮಾಡಿದ್ದೇನು**
ನ್ಯಾಯಮೂರ್ತಿ ಮ. ರಾಮಾ ಜೋಯಿಸ್
*ಪುಟ : ೩೨* *ಬೆಲೆ : ರೂ. ೨೫*

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
ಭಾರತೀಯ ವಿದ್ಯಾಭವನ, ರೇಸ್‌ಕೋರ್ಸ್ ರಸ್ತೆ, ಬೆಂಗಳೂರು-೧

**ಮಹದೇವ ಬಣಕಾರ** (ಬದುಕು ಸಾಧನೆ)
ಬೆನಕನಹಳ್ಳಿ ಶೇಖರಗೌಡ
*ಪುಟ : ೧೧೨* *ಬೆಲೆ : ರೂ. ೧೦*
ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಡಂಬಳ - ಗದಗ

**ಆರೋಗ್ಯ-ಆನಂದ** (ಸಮಸ್ಯೆಗಳಿಗೆ ಸಮಾಧಾನ)
ಡಾ॥ ವಸುಂಧರಾ ಭೂಪತಿ
*ಪುಟ : ೧೧೨* *ಬೆಲೆ : ರೂ. ೫೦*
ಲಹರಿ ಪ್ರಕಾಶನ, ರಾಜಾಜಿನಗರ, ಬೆಂಗಳೂರು - ೧೦

**ಮೂಡಣ** (ಕವನ ಸಂಕಲನ) ಎಂ. ಡಿ. ಕಾಡಾದಿ
*ಪುಟ : ೧೨೦* *ಬೆಲೆ : ರೂ. ೩೦*
ಶ್ರೀ ಸಿದ್ದೇಶ್ವರ ಪ್ರಕಾಶನ, ರಥ ಮೈದಾನ ರಸ್ತೆ, ಬಸವಕಲ್ಯಾಣ, ಬೀದರ ಜಿಲ್ಲೆ

**ಶೂದ್ರ ಸಂವೇದನೆ** (ಕವನ ಸಂಕಲನ) ಭಾವಜೀವಿ
*ಪುಟ : ೮೦* *ಬೆಲೆ : ರೂ. ೪೦*
ಕಾವ್ಯಕುಂಜ, ೨೫, ಗಾಂಧೀಬಜಾರ್, ಬಸವನಗುಡಿ, ಬೆಂಗಳೂರು - ೫೬೦ ೦೦೪

**ರುಧಿರ ರಕ್ಕಸನ ರುದ್ರ ತಾಂಡವ** (ನಾಟಕ)
ಮಣೂರು ನರಸಿಂಹ ಮಧ್ಯಸ್ಥ
*ಪುಟ : ೪೦* *ಬೆಲೆ : ರೂ. ೧೦*
**ಅಶ್ವಿನಿ ಸ್ಮಾರಕ ಸಾಹಿತ್ಯ ಮಾಲೆ,** ಎಂ.ಎನ್. ಅಶ್ವಿನಿ ಮಧ್ಯಸ್ಥ ಸ್ಮಾರಕ ಶೈಕ್ಷಣಿಕ, ಸಾಂಸ್ಕೃತಿಕ ಕೇಂದ್ರ, ಮಣೂರು-೫೭೬೨೨೧

**ತುಟಿಗು ತುತ್ತಿಗು ನಡುವೆ** (ಕವನ ಸಂಕಲನ)
'ಪ್ರೀತಿ' ಮಡಿಕೇರಿ
*ಪುಟ : ೮೦* *ಬೆಲೆ : ರೂ. ೪೦*

**ಮಹಿಳಾ ಸಶಕ್ತೀಕರಣ** (ಚರ್ಚೆ) ಹೇಮಲತಾ ಎಚ್.ಎಂ.
*ಪುಟ : ೮೮* *ಬೆಲೆ : ರೂ. ೫೦*

**ಫೋಟೋಗ್ರಾಫಿ** (ತಂತ್ರಜ್ಞಾನ) ರಫೀಕ್ ಉಪ್ಪಿನಂಗಡಿ
*ಪುಟ : ೪೦* *ಬೆಲೆ : ರೂ. ೫೦*

ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ಅಭಿರುಚಿ ಪ್ರಕಾಶನ,** ನಂ. ೪, ೨ನೇ ಮಹಡಿ, ನ.ಸಾ.ಸಂ. ಕಟ್ಟಡ, ಕೆ. ಆರ್. ವೃತ್ತ, ಮೈಸೂರು - ೫೭೦ ೦೦೧

**ನಿಜವೋ ಸುಳ್ಳೋ ನಿರ್ಧರಿಸಿ** (ಲೇಖನಗಳು)
ಅರ್ಜುನಪುರಿ ಅಪ್ಪಾಜಿಗೌಡ
*ಪುಟ : ೧೨೦* *ಬೆಲೆ : ರೂ. ೯೫*
**ಶ್ರೀ ಸಿದ್ಧಾರೂಢ ಪ್ರಕಾಶನ,** ಕೆಂಗಲ್ ಹನುಮಂತಯ್ಯ ಬಡಾವಣೆ, ಮದ್ದೂರು - ೫೭೧ ೪೨೮

**ಸಮಚಿತ್ತ** (ಸಾಹಿತ್ಯಿಕ ಲೇಖನಗಳು) ವಿಶ್ವನಾಥ ಕಾರ್ನಾಡ
*ಪುಟ : ೧೯೬* *ಬೆಲೆ : ರೂ. ೧೨೫*
**ಶ್ರೀ ರಾಘವೇಂದ್ರ ಪ್ರಕಾಶನ,** ಅಂಬಾರ ಕೊಡ್ಲ, ಅಂಕೋಲಾ, ಉತ್ತರ ಕನ್ನಡ - ೫೮೧ ೩೧೪

**ಆದಿಮ ಕನ್ಯೆ** (ಕವನ ಸಂಕಲನ) ಎ. ಕೆ. ಹಂಪಣ್ಣ
*ಪುಟ : ೧೦೮* *ಬೆಲೆ : ರೂ. ೬೦*
**ಶಾಂತಮ್ಮ ಪ್ರಕಾಶನ,** ಮಾದನಾಯಕನ ಹಳ್ಳಿ, ಚಿತ್ರದುರ್ಗ ತಾ.

**ಗುಲ್‌ಮೊಹರ್** (ಆಯ್ದ ಕವಿತೆಗಳು) ಅಹ್ಮದ್ ಅನ್ವರ್
*ಪುಟ : ೧೦೪* *ಬೆಲೆ : ರೂ. ೩೫*

**ನನ್ನ ಕನಸಿನ ಭಾರತ** (ಲೇಖನ ಸಂಕಲನ) ಅಹ್ಮದ್ ಅನ್ವರ್
*ಪುಟ : ೧೨೦* *ಬೆಲೆ : ರೂ. ೩೫*

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ವಿಚಾರ ಪ್ರಕಾಶನ,** ಹ್ಯಾಪಿ ಹೋಮ್ ಅಪಾರ್ಟ್‌ಮೆಂಟ್ಸ್, ಬಿ-ವಿಂಗ್, ನಂ. ೩೬, ೩ನೇ ಮಹಡಿ, ಆರ್ಯಸಮಾಜ ರಸ್ತೆ, ಬಲ್ಮಠ, ಮಂಗಳೂರು - ೫೭೫ ೦೦೩

**ವೆನಿಲ್ಲಾ ಕೃಷಿ** ಮುನಿಯಾಲ್ ಗಣೇಶ ಶೆಣೈ
*ಪುಟ : ೫೬* *ಬೆಲೆ : ರೂ. ೧೫*
**ಪುಸ್ತಕ ನಿಧಿ,** ಗಾವಳಿ, ಕುಂದಾಪುರ ತಾ. - ೫೭೬ ೨೦೧

**ಸಂಪಿಗೆ ಮರ** (ಕವನ ಸಂಕಲನ) ಎಂ. ಆರ್. ನಳಿನಿ
*ಪುಟ : ೫೬* *ಬೆಲೆ : ರೂ. ೨೫*
**ಎಂ.ವಿ.ಆರ್. ಪ್ರಕಾಶನ,** ವಿಜಯನಗರ, ಕುವೆಂಪು ರಸ್ತೆ, ಹೊಸದುರ್ಗ - ೫೭೭ ೫೨೭

**ಕನ್ನಡದ ಕಂಪಿನಲಿ ಕರಿವರದ** ಪೋಶೆಟ್ಟಿಹಳ್ಳಿ ಗುರುರಾಜ
*ಪುಟ : ೬೪* *ಬೆಲೆ : ರೂ. ೪೦*
**ಶ್ರೀ ಸ್ವಾನಂದ ಪ್ರಕಾಶನ,** ನಂ. ೧೨, ಅಗರ, ವಯಾ ತಾತಗುಣಿ, ಕನಕಪುರ ರಸ್ತೆ, ಬೆಂಗಳೂರು ದಕ್ಷಿಣ

**ಕನ್ನಡ ಇತಿಹಾಸ ಕೋಶ**
ಸಂ. ಬಿ. ಜಿ. ಕನಕೇಶಮೂರ್ತಿ, ಜಿ. ಮಲ್ಲಿಕಾರ್ಜುನ
*ಪುಟ : ೧೦೬* *ಬೆಲೆ : ರೂ. ೪೦*
**ಚಿರಂತನ ಪ್ರಕಾಶನ,** ೧೭೮/ಬಿ, ದುರ್ಗಾರಸ್ತೆ, ರಾಮನಗರ, ಹಗರಿಬೊಮ್ಮನಹಳ್ಳಿ - ೫೮೩ ೨೧೨



# ಪ್ರಸ್ತುತವಿದೆ
# ಹಿಂದೆಂದಿಗಿಂತಲೂ
# ಉತ್ತಮವಾದ ಹೊಸ
# ಸಂತೂರ್

ಇದೀಗ ಹೊಸ ಸಂತೂರ್ ಬಳಸಲು ಇನ್ನಷ್ಟು ಕಾರಣಗಳು

**ನ್ಯಾಚುರಲ್ ಸ್ಕಿನ್ ಸಾಫ್ಟನರ್ಸ್**
ನೀಡುವುದು ಕೋಮಲ
ಹಾಗೂ ನುಣುಬಾದ ತ್ವಚೆ

ಮೈಮರೆಸುವ **ಹೊಸ ಪರಿಮಳ**
ನೀಡುವುದು, ಆಹ್ಲಾದಕರ
ಸ್ನಾನದ ಅನುಭವ

**ಚಂದನ ಮತ್ತು ಅರಿಸಿನದ**
**ಅಡ್ವಾನ್ಸ್ಡ್ ಎಕ್ಸ್‌ಟ್ರಾಕ್ಟ್ಸ್**
ನೀಡುವುದು
ತಾರುಣ್ಯ ಭರಿತ ತ್ವಚೆ




ಹೊಸ **ಸಂತೂರ್**

ನಿಮಗೆಂದೇ ವಿಶೇಷವಾಗಿ

